ಈ ಪುಸ್ತಕದ ಮೊದಲ ಐದು
ಲೇಖನಗಳು ನ್ಯಾಷನಲ್ ಬುಕ್ ಟ್ರಸ್ಟ್
ಏರ್ಪಡಿಸಿದ 'ಕೃತಿ ಸಂಪಾದನೆ'
ವಿಚಾರ ಗೋಷ್ಠಿಯಲ್ಲಿ ಪ್ರಸ್ತುತಪಡಿಸಿದವು.
ಉಳಿದವು ಈ ಪುಸ್ತಕಕ್ಕಾಗಿ ನಂತರ
ಬರೆದವು.

# ಕೃತಿ ಸಂಪಾದನೆ
# ಕುರಿತು ಸಂಪಾದಕರು

ಹೆಚ್. ವೈ. ಶಾರದಾ ಪ್ರಸಾದ್—ರುಕುನ್ ಅದ್ವಾನಿ
ಡೇವಿಡ್ ದಾವಿಡರ್—ರವಿ ದಯಾಲ್
ಊರ್ವಶಿ ಬುಟಾಲಿಯ—ಸಾಮ್ಯುಯಲ್ ಇಸ್ರೇಲ್

ಅನುವಾದ: ಬಿ.ಎನ್. ಗುರುಮೂರ್ತಿ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪರಿವಿಡಿ



## ನಾನು ಸಂಪಾದಕನಾಗಿದ್ದು ಹೇಗೆ

# ಮುನ್ನುಡಿ

## ಹೆಚ್. ವೈ. ಶಾರದಾ ಪ್ರಸಾದ್

ಹಣ ಖರ್ಚು ಮಾಡಿ ಪುಸ್ತಕಗಳನ್ನು ಕೊಳ್ಳುವವರು ಪುಸ್ತಕಗಳು ಓದುವಂತಿರಬೇಕು, ಆಸಕ್ತಿಯನ್ನುಂಟು ಮಾಡಬೇಕು, ನೋಡಲು ಅಂದವಾಗಿರಬೇಕು ಮತ್ತು ಸಾಮಾನ್ಯವಾಗಿ ದೋಷಮುಕ್ತವಾಗಿರಬೇಕು ಎಂದು ನಿರೀಕ್ಷಿಸುತ್ತಾರೆ. ಪುಸ್ತಕಗಳು ಹೀಗಿರುವಂತೆ ಮಾಡುವುದು ಸಂಪಾದಕರ ಕೆಲಸ.

ಸಂಪಾದಕರಲ್ಲಿ ಅನೇಕ ರೀತಿ. ವೃತ್ತಪತ್ರಿಕೆಗಳು ಮತ್ತು ನಿಯತಕಾಲಿಕಗಳ ಸಂಪಾದಕರು ಅವುಗಳಲ್ಲಿ ಮುದ್ರಿತವಾಗುವ ವಿಷಯಗಳ ಬಗ್ಗೆ ಕಾನೂನಿನಡಿ ಜವಾಬ್ದಾರಿ ಹೊಂದಿರುತ್ತಾರೆ. ಪುಸ್ತಕಗಳ ವಿಷಯದಲ್ಲಿ ಆ ಜವಾಬ್ದಾರಿ ಪ್ರಕಾಶಕನ ಮೇಲಿರುತ್ತದೆ. ಏಕೆಂದರೆ ಪುಸ್ತಕಗಳ ಸಂಪಾದಕ ತೆರೆಮರೆಯ ಅನಾಮಿಕ ವ್ಯಕ್ತಿ. ಆದರೆ ನಿಯತಕಾಲಿಕಗಳು ಮತ್ತು ವೃತ್ತಪತ್ರಿಕೆಗಳ ಸಂಪಾದಕರು *ಸಾರ್ವಜನಿಕ* ವ್ಯಕ್ತಿಗಳು. ಹಿಂದಿನ ಕಾಲದಲ್ಲಿ ಅವರು ತಮ್ಮನ್ನು ಪ್ರಚಾರಕರೆಂದೂ ಕರೆದುಕೊಳ್ಳುತ್ತಿದ್ದರು. ಈ ಪದದ ಅರ್ಥ ಈಗ ಅಪಮೌಲ್ಯಗೊಂಡಿದೆ. ಅದನ್ನೀಗ ಪ್ರಚಾರದ ಮಧ್ಯವರ್ತಿ ಎಂದು ಅರ್ಥೈಸಲಾಗುತ್ತದೆ. ಹಲವು ಸಂಪಾದಕರು ಸುದ್ದಿ ಸಂಗ್ರಹಿಸುವುದರಲ್ಲಿ ಮತ್ತು ಅದನ್ನು ಪ್ರಕಟಿಸುವುದರಲ್ಲಿ ತೃಪ್ತರಾಗಿದ್ದರು. ಆದರೆ ಸಾಕಷ್ಟು ಸಂಪಾದಕರು ಒಂದು ರಾಜಕೀಯ ಅಥವಾ ನೈತಿಕ ಅಭಿಪ್ರಾಯವನ್ನು ಪ್ರಚುರಪಡಿಸಲು ಬೋಧಕರೂ ಆಗಿದ್ದರು: ಉದಾಹರಣೆಗೆ *ಕೇಸರಿ* ಮತ್ತು *ಮರಾಠ* ಪತ್ರಿಕೆಯ ಸಂಪಾದಕರಾಗಿದ್ದ ತಿಲಕರು ಮತ್ತು *ಯಂಗ್ ಇಂಡಿಯ* ಹಾಗೂ *ಹರಿಜನ್* ಪತ್ರಿಕೆಯ ಸಂಪಾದಕರಾಗಿದ್ದ ಗಾಂಧೀಜಿ. ತಮ್ಮ ಪತ್ರಿಕೆಯ ಓದುಗರು ಹೆಚ್ಚಿನ ಯುಕ್ತಾಯುಕ್ತ ವಿವೇಚನೆಯ ನಾಗರಿಕರಾಗಲು ನೆರವಾಗುತ್ತಿದ್ದ, ತಮ್ಮನ್ನು ತಾವೇ ಉಪಾಧ್ಯಾಯರೆಂದು ಪರಿಗಣಿಸುತ್ತಿದ್ದ, ಸಂಪಾದಕರೂ ನಮ್ಮಲ್ಲಿ ಇದ್ದರು: *ದಿ ಹಿಂದು* ಪತ್ರಿಕೆಯ ಸುಬ್ರಮಣ್ಯ ಐಯರ್ ಮತ್ತು *ನ್ಯಾಶನಲ್ ಹೆರಾಲ್ಡ್*‌ನ ಚಲಪತಿರಾವ್ ಅಂತಹವರು. ಅನೇಕ ಸಂಪಾದಕರು ತಮ್ಮ ಕಾರ್ಯಕ್ಷೇತ್ರವನ್ನು ರಾಜಕೀಯ ಮತ್ತು

---

ಸಾರ್ವಜನಿಕ ವ್ಯವಹಾರಗಳಾಚೆಗೆ ಸಂಸ್ಕೃತಿ ಮತ್ತು ಕಲೆಗಳ ಕ್ಷೇತ್ರಗಳಿಗೂ ವಿಸ್ತರಿಸಿ, ಲೇಖಕರು, ಕಲಾವಿದರು ಮತ್ತು ಚಿಂತಕರನ್ನು ಪ್ರೋತ್ಸಾಹಿಸಿ ಅವರಿಗೆ ಒಂದು ವೇದಿಕೆಯನ್ನು ಒದಗಿಸಿ ಪ್ರಮುಖ ಸಾಂಸ್ಕೃತಿಕ ಮತ್ತು ಪ್ರಜ್ಞಾವಂತ ಶಕ್ತಿಯಾಗಿದ್ದಾರೆ. ಈ ಪೈಕಿ ನಮ್ಮ ದೇಶದಲ್ಲಿ ಪ್ರಮುಖರಾದವರೆಂದರೆ ***ಮಾಡರ್ನ್ ರಿವ್ಯೂ***ನ ರಮಾನಂದ ಚಟರ್ಜಿ ಮತ್ತು ***ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ***ಯ ಸಚಿನ್ ಚೌಧರಿ. (ಭಾರತದಲ್ಲಿ ಅನೇಕರು, ತಮಗೆ ಪ್ರಚೋದನೆ ಕೊಡುತ್ತಿದ್ದ ಕಿಂಗ್ಸ್‌ಲಿ ಮಾರ್ಟಿನ್ ಅವರ ***ನ್ಯೂ ಸ್ಟೇಟ್ಸ್‌ಮನ್*** ಮತ್ತು ನಾರ್ಮನ್ ಕಸಿನ್ಸ್ ಅವರ ***ಸಾಟರ್ಡೆ ರಿವ್ಯೂ*** ಪತ್ರಿಕೆಗಳ ಹಾದಿ ನೋಡುತ್ತಿದ್ದರು). ನಂತರ ಬೇಟೆ ನಾಯಿಗಳಂತಹ ಸಂಪಾದಕರೂ, ಫ್ಯಾಶನ್ ಜಾಹೀರಾತುಗಳಲ್ಲಿ ಕಾಣಿಸಿಕೊಳ್ಳುವ ಸಂಪಾದಕರೂ ನಮ್ಮಲ್ಲಿದ್ದಾರೆ. ಅವರ ಹೆಸರುಗಳನ್ನು ನಾನು ಹೇಳುವುದು ಬೇಡ – ನಿಮಗೆ ಅವರ ಪರಿಚಯ ಇದೆ.

ನಾನೊಬ್ಬ ಪತ್ರಕರ್ತನಾಗಿದ್ದಾಗ ನಮ್ಮ ನಾಡಿನ ಕೆಲವು ಖ್ಯಾತ ಸಂಪಾದಕರೊಂದಿಗೆ – ಪೋತನ್ ಜೋಸೆಫ್, ಫ್ರಾಂಕ್ ಮೊರೇಸ್, ಖಾಸಾ ಸುಬ್ಬರಾವ್ – ಕೆಲಸ ಮಾಡುವ ಹಾಗೂ ನಮ್ಮ ಪತ್ರಿಕಾ ರಂಗದ ಇತರ ಕೆಲವು ದಿಗ್ಗಜಗಳಾಗಿದ್ದ ಕೆ. ರಾಮರಾವ್, ಎಸ್.ಎ. ಬ್ರೆಲ್ವಿ ಮತ್ತು ಚಲಪತಿರಾವ್ ಅವರ ಪರಿಚಯವನ್ನು ಹೊಂದುವ ಸೌಭಾಗ್ಯ ನನ್ನದಾಗಿತ್ತು. ಸಾರ್ವಜನಿಕ ಒಳಿತಿನ ಬಗ್ಗೆ ಅವರಿಗಿದ್ದ ಕಳಕಳಿಯೇ ಅಲ್ಲದೆ ಪದಗಳ ಬಳಕೆಯ ಬಗ್ಗೆ ಅವರಿಗಿದ್ದ ಪವಿತ್ರ ಭಾವನೆಯೂ ನನ್ನ ಮೇಲೆ ಗಾಢವಾದ ಪರಿಣಾಮ ಬೀರಿತ್ತು. ಅವರಿಗೆ ಪದಗಳು ಒಬ್ಬ ಗುಲಾಮನಂತಿರಲಿಲ್ಲ. ಅವರು ಬರೆದ ಪದಗಳಿಗೆ ಅವರ ಮೇಲೆ ಹಕ್ಕಿತ್ತು. ಅವರು ಅದಕ್ಕೆ ಜವಾಬ್ದಾರರಾಗಿದ್ದರು.

ಕಾಲಕ್ರಮೇಣ ನಾನು ಸರ್ಕಾರಿ ನಿಯತಕಾಲಿಕಗಳು ಮತ್ತು ಪುಸ್ತಕಗಳ ಸಂಪಾದಕನಾದೆ. 'ಸರ್ಕಾರಿ ಸಂಪಾದಕ'ರಿಗೆ 'ಸರ್ಕಾರಿ ಸಾಧು'ಗಳಿಗಿಂತ ಹೆಚ್ಚಿನ ಮರ್ಯಾದೆ ಏನೂ ದೊರೆಯುವುದಿಲ್ಲ. ಆದರೆ ನನಗೆ ಒಂದೆರಡು ಪ್ರಿಯವಾದ ನೆನಪುಗಳಿವೆ. ನನ್ನ ಕೋರಿಕೆಯ ಮೇರೆಗೆ ಒಂದು ಲೇಖನವನ್ನು ಬರೆಯುವ ಔದಾರ್ಯವನ್ನು ಶ್ರೀ ಸಿ. ರಾಜಗೋಪಾಲಾಚಾರಿ ಅವರು ತೋರಿದರು. ನನ್ನ ಕಾರಣಗಳನ್ನು ತಿಳಿಸಿ, ಅದರಲ್ಲಿ ಎರಡು ಪದಗಳನ್ನು ಬದಲಾಯಿಸಲು ನಾನು ಅವರ ಅನುಮತಿಯನ್ನು ಕೋರಿದೆ. ಅವರು ನಾನು ಸೂಚಿಸಿದ ಬದಲಾವಣೆಗೆ ಸಮ್ಮತಿಸಿದರು. ಲೇಖನ ಬರೆಯಲು ನಾನು ಕೋರಿದ ಮತ್ತೊಬ್ಬ ಲೇಖಕರೆಂದರೆ ಶ್ರೇಷ್ಠ ಸಂಸ್ಕೃತ ವಿದ್ವಾಂಸ ಡಾ. ಪಿ.ವಿ. ಕಾಣೆ. ಲೇಖನ ಬರೆಯಲಾಗದ್ದಕ್ಕೆ ವಿಷಾದ ಸೂಚಿಸುವ ಉತ್ತರ ಎರಡೇ ದಿನಗಳಲ್ಲಿ ಪೋಸ್ಟ್ ಕಾರ್ಡ್‌ನಲ್ಲಿ ಬಂದಿತು. ಅವರು ತಮ್ಮ ವಿಷಾದವನ್ನು ಸೂಚಿಸಲು ಬಳಸಿದ ವಾಕ್ಯಗಳು ನನ್ನ ಮನಸ್ಸನ್ನು ಆಳವಾಗಿ ತಟ್ಟಿದವು. "ಧರ್ಮಶಾಸ್ತ್ರದ ಮೇಲಿನ ನನ್ನ ನಾಲ್ಕನೆಯ ಮತ್ತು ಕೊನೆಯ ಸಂಪುಟದ ಕರಡಚ್ಚುಗಳನ್ನು ನಾನು ತಿದ್ದುತ್ತಿದ್ದೇನೆ; ಕಳೆದ 50 ವರ್ಷಗಳಿಂದ ಈ ಕೃತಿ ರಚನೆಯಲ್ಲಿ ತೊಡಗಿದ್ದೇನೆ. ನನಗೀಗ 94 ವರ್ಷ ವಯಸ್ಸು ಮತ್ತು ನನ್ನ

ಪುಸ್ತಕ ಸಾಮಾನ್ಯವಾಗಿ ದೋಷಮುಕ್ತವಾಗಿರುವಂತೆ ನಾನು ನೋಡಿಕೊಳ್ಳಬೇಕು. ಬೇರೆ ಯಾವುದೇ ಕೆಲಸವನ್ನು ನಾನು ವಹಿಸಲಾರೆ. ನೀವು ಇದನ್ನು ಅರ್ಥ ಮಾಡಿಕೊಳ್ಳುತ್ತೀರಿ ಎಂದು ನಾನು ಆಶಿಸುತ್ತೇನೆ'' ಎಂದೋ ಏನೋ ಆ ಮಾತುಗಳು.

ಸರ್ಕಾರಿ ಸಂಪಾದಕರನ್ನು ತಾತ್ಸಾರವಾಗಿ ನೋಡುವ ಪ್ರವೃತ್ತಿಯುಳ್ಳವರು ನಮ್ಮ ಕಾಲದ ಅತ್ಯಂತ ಶ್ರೇಷ್ಠ ಪುಸ್ತಕ–ಸಂಪಾದಕರಾಗಿದ್ದ ಪ್ರೊ. ಕೆ. ಸ್ವಾಮಿನಾಥನ್ ಅವರ ಸಾಧನೆಯನ್ನು ಗಮನಿಸಿ ತಮ್ಮ ಅಭಿಪ್ರಾಯವನ್ನು ಬದಲಾಯಿಸುತ್ತಾರೆಂದು ನಾನು ಆಶಿಸುತ್ತೇನೆ. ಇಂಗ್ಲಿಷ್ ಶಿಕ್ಷಕರಾಗಿ ನಿವೃತ್ತಿ ಹೊಂದಿದ ನಂತರ ಹಾಗೂ *ದಿ ಇಂಡಿಯನ್ ಎಕ್ಸ್‌ಪ್ರೆಸ್* ಪತ್ರಿಕೆಯ ಸಹ-ಸಂಪಾದಕ ಸ್ಥಾನವನ್ನು ತ್ಯಜಿಸಿ ಅವರು *ದಿ ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮ ಗಾಂಧಿ* ಸಂಪುಟಗಳ ಪ್ರಧಾನ ಸಂಪಾದಕನ ಜವಾಬ್ದಾರಿಯನ್ನು ವಹಿಸಿಕೊಂಡರು. ಅವರು ಈ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಕ್ಕೆ ಮೊದಲು ಮೂರು ನಾಲ್ಕು ವರ್ಷಗಳಲ್ಲಿ ಈ ಸರಣಿಯ ಎರಡು ಸಂಪುಟಗಳು ಪ್ರಕಟವಾಗಿದ್ದವು. ಆದರೆ 23 ವರ್ಷಗಳಲ್ಲಿ ಇನ್ನೂ 32 ಸಂಪುಟಗಳ ಪ್ರಕಟಣೆಯನ್ನು ಅವರು ಸಾಧ್ಯಗೊಳಿಸಿದರು. 30ನೇ ಜನವರಿ 1948 ರ ವರೆಗೆ ಮಹಾತ್ಮ ಗಾಂಧಿ ಬರೆದಿದ್ದು, ಹೇಳಿದ್ದು ಎಲ್ಲವನ್ನೂ ಈ ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಅವರೊಬ್ಬರೇ ಈ ಕೆಲಸ ಮಾಡಲಿಲ್ಲ–ಅವರಿಗೆ ಸಹಾಯಕರಿದ್ದರು. ಆದರೆ ಜವಾಬ್ದಾರಿ ಅವರದಾಗಿತ್ತು. ಚೈತನ್ಯ ಅವರದಾಗಿತ್ತು. ಈ ಸರಣಿಯ ಸಂಪಾದಕತ್ವ ಪ್ರೊ. ಸ್ವಾಮಿನಾಥನ್ ಅವರಿಗೆ ಉದ್ಯೋಗವಾಗಿರಲಿಲ್ಲ. ಅದೊಂದು ತಪಸ್ಸಾಗಿತ್ತು, ಸಿದ್ಧಿಯಾಗಿತ್ತು.

ಶ್ರೀ ನೆಹರು ಅವರ ಭಾಷಣಗಳಲ್ಲಿ ಕೆಲವನ್ನು ಆರಿಸಿ ಪ್ರಕಟಣೆಗೆ ಸಿದ್ಧಪಡಿಸುವುದು ನನಗೆ ವಹಿಸಿದ ಒಂದು ಕಾರ್ಯವಾಗಿತ್ತು. ಈ ಸಲಹೆಯನ್ನು ಮುಂದಿಟ್ಟಾಗ ಪ್ರಧಾನಮಂತ್ರಿಯವರು ''ಇವು ಸಿದ್ಧಪಡಿಸಿದ ಭಾಷಣಗಳಲ್ಲ, ಪೂರ್ವಸಿದ್ಧತೆಯಿಲ್ಲದೆ ಮಾಡಿದ ಆಶು ಭಾಷಣಗಳು. ನಾನು ಹೇಳಿದ್ದನ್ನೇ ಹೇಳಿರಲಿಕ್ಕೆ ಸಾಕು. ದಯವಿಟ್ಟು ಪುನರುಕ್ತಿಗಳನ್ನು ತೆಗೆದುಹಾಕುವಂತೆ ನೋಡಿಕೊಳ್ಳಿ'' ಎಂದು ಹೇಳಿದ್ದಾಗಿ ಆಗಿನ ವಾರ್ತಾ ಮತ್ತು ಪ್ರಸಾರ ಮಂತ್ರಿ ಡಾ. ಕೇಸ್ಕರ್ ಹೇಳಿದರು. ಕೆಲವು ದಿನಗಳ ನಂತರ ಪರಿಷ್ಕರಣೆಯ ಕೆಲಸ ಹೇಗೆ ಸಾಗಿದೆ ಎಂಬುದನ್ನು ನೋಡಲು ಶ್ರೀ ನೆಹರು ಬಯಸಿದರು. ನಾನು ಪರಿಷ್ಕರಿಸಿದ ನೂರು ಪುಟಗಳನ್ನು ಕಳಿಸಿದೆ. ನನ್ನ ಪೆನ್ಸಿಲ್ ಅನ್ನು ನಾನು ಧಾರಾಳವಾಗಿ ಬಳಸಿದ್ದೆ – ಇಡೀ ಪ್ಯಾರಾಗಳನ್ನು ಮತ್ತು ಪುಟಗಳನ್ನು ತೆಗೆದುಹಾಕಿದ್ದೆ. ಒಂದೆರಡು ದಿನಗಳಲ್ಲಿ ತಿದ್ದುವ ಕೆಲಸ ಸರಿಯಾಗಿರುವಂತೆ ತೋರುತ್ತಿದೆ, ಕೆಲಸ ಮುಂದೆ ಸಾಗಬಹುದು ಎಂದು ಹೇಳುವ ಟಿಪ್ಪಣಿ ಸಹಿತ ನಾನು ಕಳಿಸಿದ್ದ ಪುಟಗಳು ಹಿಂದಕ್ಕೆ ಬಂದಾಗ ನನಗೆ ಮತ್ತು ಡಾ. ಕೇಸ್ಕರ್ ಅವರಿಗೆ ಸಮಾಧಾನವಾಯಿತು.

ಈ ಘಟನೆಯನ್ನು ನಾನು ಹೇಳುತ್ತಿರುವುದು ನನ್ನ ತಲೆಯ ಮೇಲೆ ಕಿರೀಟ ಇಟ್ಟುಕೊಳ್ಳುವುದಕ್ಕಲ್ಲ. ಆದರೆ ಹೇಗೆ ಒಬ್ಬ ನಿಜವಾದ ಸುಸಂಸ್ಕೃತ ಲೇಖಕ ಒಬ್ಬ

ಸಂಪಾದಕನ ಶ್ರಮವನ್ನು ಅರ್ಥ ಮಾಡಿಕೊಳ್ಳುತ್ತಾನೆ ಎಂದು ತೋರಿಸುವುದಕ್ಕಷ್ಟೆ. ಕೆಲವು ಪುಸ್ತಕ ಸಂಪಾದಕರು ಕಿರಿಕಿರಿಯ, ತಮ್ಮದೇ ಅಭಿಪ್ರಾಯಗಳಿಗೆ ಬಲವಾಗಿ ಅಂಟಿಕೊಂಡ ಲೇಖಕರೊಂದಿಗೆ ತಾವು ಹೊಂದಿರುವ ಸಮಸ್ಯೆಗಳ ಬಗ್ಗೆ ನಿಮಗೆ ಹೇಳಬಹುದು. ತಮ್ಮ ಬರೆವಣಿಗೆಯನ್ನು ಸುಧಾರಿಸಲಾಗದು, ಬದಲಾಯಿಸಲಾಗದು, ಮುಟ್ಟಲಾಗದು, ಅದು ಪರಿಪೂರ್ಣತೆಯ ಮತ್ತು ಉತ್ಕೃಷ್ಟತೆಯ ಪರಾಕಾಷ್ಠೆ ಎಂದು ಭಾವಿಸುವ ಲೇಖಕರಿದ್ದಾರೆ. ಅನೇಕ ಲೇಖಕರು ತಮ್ಮ ಬರೆವಣಿಗೆಯ ಬಗ್ಗೆ ಬಹಳಷ್ಟು ಎಚ್ಚರಿಕೆ ವಹಿಸುತ್ತಾರೆ. ಆದರೆ ಹೆಚ್ಚಿನ ಸಂಖ್ಯೆಯ ಲೇಖಕರ ಅಶ್ರದ್ಧೆ ನಂಬಲಾಗದಷ್ಟು.

ಅಂತರರಾಷ್ಟ್ರೀಯ ವಿಚಾರಗೋಷ್ಠಿಯೊಂದರಲ್ಲಿ ವಿಜ್ಞಾನಿಯೊಬ್ಬರು 8 ಪುಟಗಳ ಆಕರ ಸೂಚನೆಗಳ ಜೊತೆ ಮಂಡಿಸಿದ 21 ಪುಟಗಳ ಸಣ್ಣ ಇಂಗ್ಲಿಷ್ ಪ್ರಬಂಧದಲ್ಲಿ ಬಹಳಷ್ಟು ತಪ್ಪುಗಳಿದ್ದವು. ಕಾಗುಣಿತ, ವಿರಾಮ ಚಿಹ್ನೆಗಳು, ವಾಕ್ಯರಚನೆ, ತಪ್ಪು ಪದದ ಬಳಕೆಯ ಒಟ್ಟು 160 ದೋಷಗಳನ್ನು ಎಣಿಸುವುದು ನನಗೆ ಸಾಧ್ಯವಾಯಿತು. ಒಬ್ಬ ಉತ್ತಮ ವಿಜ್ಞಾನಿ ಉತ್ತಮ ವ್ಯಾಕರಣಜ್ಞನಾಗಿರಬೇಕಿಲ್ಲ. ಆದರೆ ಅಂತರರಾಷ್ಟ್ರೀಯ ವಿಚಾರಗೋಷ್ಠಿಯೊಂದರಲ್ಲಿ ಸಾದರಪಡಿಸಿದ ಹಾಗೂ ನಮ್ಮ ಒಂದು ರಾಷ್ಟ್ರೀಯ ಪ್ರಯೋಗಾಲಯ ಪ್ರಕಟಿಸಿದ ಪ್ರಬಂಧದಲ್ಲಿ ಇಷ್ಟು ದೋಷಯುಕ್ತವಾದ ಬರೆವಣಿಗೆ ಅಕ್ಷಮ್ಯ.

ವಿದೇಶಿ ಭಾಷೆಯೊಂದರಲ್ಲಿ ನಾವು ಬರೆಯಬೇಕಾದ್ದು ಅನಿವಾರ್ಯ ವಾಗಿರುವುದರಿಂದ ಇಂತಹ ತಪ್ಪುಗಳು ಆಗುತ್ತವೆ ಎಂದು ಭಾವಿಸಬಾರದು. ಹಾಗೆ ಭಾವಿಸಿದರೆ, ಇಂಗ್ಲಿಷ್‌ನವನಾಗಿ ಅಥವಾ ಅಮೆರಿಕದವನಾಗಿ ಹುಟ್ಟಿದ ಪ್ರತಿಯೊಬ್ಬನೂ ಸಂಪೂರ್ಣವಾಗಿ ದೋಷರಹಿತ ಇಂಗ್ಲಿಷ್ ಬರೆಯುತ್ತಾನೆ ಎಂದು ಹೇಳಿದಂತಾಗುತ್ತದೆ. ಭಾರತೀಯ ಎಂದು ಮುದ್ರೆ ಹಾಕಬಹುದಾದ ಭಾಷಾ ಪ್ರಯೋಗವನ್ನು ಬಿಡುವಂತೆ ನಮ್ಮನ್ನೆಲ್ಲಾ ಒತ್ತಾಯಿಸಲಾಗುತ್ತದೆ. ಪ್ರತಿಷ್ಠಿತ ಖಾಸಗಿ ಶಾಲೆಗಳಿಗೆ ಹೋಗುವವರು ಇದನ್ನು ಸಾಧಿಸಿಯೂ ಸಾಧಿಸುತ್ತಾರೆ. ಆದರೆ ನಮ್ಮ ಜಾಯಮಾನಗಳನ್ನು ಬಿಟ್ಟುಬಿಡುವುದು ಕಠಿಣವಾದ ಕೆಲಸ. ನಮ್ಮದೇ ಭಾಷೆಗಳಲ್ಲಿ ಬರೆದಾಗಲೂ ವ್ಯಾಕರಣದ ತಪ್ಪುಗಳು ಆಗುತ್ತವೆ. ಇಂಗ್ಲಿಷ್‌ನಲ್ಲಿ ಏನು ಮಾಡಬಾರದು ಎಂದು ಹೇಳುವ ಅಧಿಕಾರಯುತ ಪುಸ್ತಕಗಳಾದರೂ ಇವೆ – ಉದಾಹರಣೆಗೆ ಫೌಲರ್, ಗಾವರ್ಸ್ ಮತ್ತು *ದಿ ಶಿಕಾಗೊ ಮ್ಯಾನ್ಯುಯಲ್ ಆಫ್ ಸ್ಟೈಲ್*. ಭಾರತೀಯ ಭಾಷೆಗಳಲ್ಲಿ ನಮಗೆ ಮಾರ್ಗದರ್ಶನ ನೀಡುವ ಅಂತಹ ದಾರಿದೀಪಗಳಿಲ್ಲ.

ಅಡ್ಡಾದಿಡ್ಡಿ ಬರೆವಣಿಗೆ ಆಲೋಚನೆಯಲ್ಲಿ ಆಲಸ್ಯದ ಸೂಚನೆಯಾಗಿರುವುದರ ಜೊತೆಗೆ ಓದುಗನ ಬಗ್ಗೆ ಅಸೌಜನ್ಯವನ್ನು ತೋರಿಸುತ್ತದೆ. ರಾಗವೊಂದರಲ್ಲಿ ಅಪಸ್ವರ ಹೊರಟಾಗ ಅದರಿಂದ ಚೇತರಿಸಿಕೊಳ್ಳಲು ತಮಗೆ ಗಂಟೆಗಳೇ ಬೇಕಾಯಿತೆಂದು ಸಂಗೀತ ಪ್ರಿಯರೊಬ್ಬರು ಒಮ್ಮೆ ಹೇಳಿದ್ದರು. ಒಂದು ಒಳ್ಳೆಯ ಪುಸ್ತಕ ಕೊಡಬಹುದಾದ ಸಂತೋಷ, ಅದು ಮನಸ್ಸಿನಲ್ಲಿ ಉಂಟು ಮಾಡಬಹುದಾದ

ನಂಬಿಕೆ, ಅದು ಮೂಡಿಸಬಹುದಾದ ಗೌರವ ಅದರಲ್ಲಿರುವ ವ್ಯಾಕರಣ ದೋಷಗಳು ಮತ್ತು ಕರಡಚ್ಚಿನಲ್ಲಿ ತಿದ್ದದೆ ಉಳಿದ ತಪ್ಪುಗಳ ಪ್ರಮಾಣಕ್ಕೆ ತಕ್ಕಂತೆ ಕಡಿಮೆಯಾಗುತ್ತದೆ.

ಒಂದು ಹಸ್ತಪ್ರತಿ ಮುದ್ರಣಕ್ಕೆ ಹೋಗುವ ಮೊದಲು ಒಬ್ಬ ಒಳ್ಳೆಯ ಸಂಪಾದಕ ಎಚ್ಚರಿಕೆಯಿಂದ ಅದನ್ನು ತಿದ್ದಿ ಪರಿಷ್ಕರಿಸುವುದೂ ಪುಟಗಳಿಗೆ ಕಟ್ಟು ಹಾಕುವುದಕ್ಕೆ ಮೊದಲು ಕರಡಚ್ಚನ್ನು ಉತ್ತಮವಾಗಿ ಓದುವುದೂ ಒಬ್ಬ ಪ್ರಕಾಶಕ ತನ್ನ ಮತ್ತು ಲೇಖಕನ ಸ್ವಂತ ಹಿತದೃಷ್ಟಿಯಿಂದ ಕೈಗೊಳ್ಳಬೇಕಾದ ಅವಶ್ಯಕ ಮುನ್ನೆಚ್ಚರಿಕೆಗಳು. ಸುಧಾರಿಸಲಾಗದಂತಹ ಯಾವುದೇ ಹಸ್ತಪ್ರತಿ ಇಲ್ಲ; ತಾನು ಬರೆದ ಒಂದು ಪದ ಅಥವಾ ಸಾಲನ್ನು ತೆಗೆಯಬೇಕಾದ ಅಗತ್ಯವೇ ಇಲ್ಲದ ಯಾವ ಲೇಖಕನೂ ಇಲ್ಲ. ಬೆನ್ ಜಾನ್‌ಸನ್‌ನ ಈ ಮಾತುಗಳನ್ನು ನಿಮ್ಮಲ್ಲಿ ಹಲವರು ನೆನಪಿಗೆ ತಂದುಕೊಳ್ಳಬಹುದು; "ಶೇಕ್ಸ್‌ಪಿಯರ್ ತನ್ನ ಬರೆವಣಿಗೆಯಲ್ಲಿ (ಆತನು ಏನೆಲ್ಲ ಬರೆದಿದ್ದರಲ್ಲಿ) ಒಂದು ಸಾಲನ್ನೂ ಅಳಿಸಿಲ್ಲ ಎಂದು ನಟರು ಆಗಾಗ ಅವನಿಗೆ ಗೌರವ ಸೂಚಕವಾಗಿ ಹೇಳುತ್ತಿದ್ದುದು ನನ್ನ ನೆನಪಿಗೆ ಬರುತ್ತದೆ. 'ಅವನೊಂದು ಸಾವಿರ ಸಾಲು ಅಳಿಸಿದ್ದರೆ ಚೆನ್ನಾಗಿರುತ್ತಿತ್ತು' ಎಂಬುದು ಅದಕ್ಕೆ ನನ್ನ ಪ್ರತಿಕ್ರಿಯೆ ಯಾಗಿರುತ್ತಿತ್ತು."

ಕಾಗುಣಿತ ಮತ್ತು ವರ್ತಮಾನ, ಭೂತ, ಭವಿಷ್ಯತ್ ಕಾಲವನ್ನು ಪರೀಕ್ಷಿಸುವುದು, ತಾರೀಖುಗಳು ಮತ್ತು ಉಲ್ಲೇಖಗಳು ನಿಖರವಾಗಿವೆಯೋ ಎಂದು ಪರಿಶೀಲಿಸುವುದು (ದೊಡ್ಡ ಮೋಸ ಮಾಡಬಹುದಾದ ನೆನಪಿನ ಶಕ್ತಿಯನ್ನು ನಂಬದೆ ಇರುವುದು) – ಇವು ಬರೆವಣಿಗೆಯನ್ನು ತಿದ್ದಿ ಪರಿಷ್ಕರಿಸುವುದರ ಮೊದಲ ತತ್ವಗಳು. ಕೃತಿಯ ಸೊಬಗನ್ನು ಸುಧಾರಿಸುವುದು ಇನ್ನೂ ಸೂಕ್ಷ್ಮವಾದ ಮತ್ತು ಹೆಚ್ಚು ಕಠಿಣವಾದ ಕೆಲಸ. ಖ್ಯಾತ ಸಾಹಿತಿ ಶಿವರಾಮ ಕಾರಂತರ ಕಾದಂಬರಿಯೊಂದನ್ನು ಇತ್ತೀಚೆಗೆ ನಾನು ಇಂಗ್ಲೀಷ್‌ಗೆ ಭಾಷಾಂತರಿಸಿದೆ. ಒಬ್ಬ ಪ್ರಸಿದ್ಧ ಸಂಪಾದಕರು ಅದನ್ನು ಪರಿಶೀಲಿಸಿದರು. ಇಂಗ್ಲಿಷನ್ನು ನಾನು ಚೆನ್ನಾಗಿಯೇ ಬಲ್ಲೆ ಎಂದು ನಾನು ಭಾವಿಸಿದ್ದಾಗ, ಈ ವ್ಯಕ್ತಿ ಹಸ್ತಪ್ರತಿಯನ್ನು ಬಹಳ ಬಹಳವಾಗಿ ಉತ್ತಮಪಡಿಸಿದರು ಎಂಬುದನ್ನು ನಾನು ಒಪ್ಪಿಕೊಳ್ಳಬೇಕು.

ಪರಿಷ್ಕರಿಸಿದ ಹಸ್ತಪ್ರತಿಯನ್ನು ಮತ್ತೊಮ್ಮೆ ಮೊದಲಿಂದ ಕೊನೆಯವರೆಗೂ ಓದಿದಾಗ ಬರೆವಣಿಗೆ ಮತ್ತು ತಿದ್ದಿ, ಪರಿಷ್ಕರಿಸುವ ಬಗ್ಗೆ ಒಂದು ಸತ್ಯ ನನಗೆ ಪುನಃ ಹೊಳೆಯಿತು – ನಮ್ಮ ಕಣ್ಣುಗಳಿಗೆ ಕಾಣದೆ ಹೋದದ್ದನ್ನು ಒಂದು ಜೊತೆ ಹೊಸ ಕಣ್ಣುಗಳು ಪತ್ತೆ ಮಾಡುತ್ತವೆ. ನಾನು ತಿದ್ದಿ ಸಂಪಾದಿಸಿದ್ದ ಪುಸ್ತಕಗಳನ್ನು ನಾನು ಪುನಃ ಓದಿದಾಗ ಕೆಲವೊಮ್ಮೆ ನನಗನಿಸಿದೆ: 'ಅಯ್ಯೋ ದೇವರೇ, ಇದನ್ನು ಹೇಗೆ ನಾನು ಅಚ್ಚಾಗುವುದಕ್ಕೆ ಬಿಟ್ಟೆ ! ನನಗೇನಾಗಿತ್ತು ?' ವೈದ್ಯಕೀಯ ವೃತ್ತಿಯಲ್ಲಿ ಒಂದು ಪದ್ಧತಿ ಇದೆ: ಒಬ್ಬ ವೈದ್ಯನಿಗೆ ಖಾಯಿಲೆಯಾದರೆ ಆತ ಮತ್ತೊಬ್ಬ ವೈದ್ಯನನ್ನು ಕರೆಯುತ್ತಾನೆ, ಸ್ವಂತ ಚಿಕಿತ್ಸೆ ಮಾಡಿಕೊಳ್ಳುವುದಿಲ್ಲ. ನಾವು ಬರೆದಿದ್ದನ್ನು ಬೆರಳಚ್ಚಿನಲ್ಲಿ ಅಥವಾ ಕರಡಚ್ಚಿನಲ್ಲಿ ನೋಡಿದಾಗ ನಮ್ಮ ವಿಚಾರಧಾರೆಯ ಬಗ್ಗೆ

ನಮ್ಮನ್ನು ನಾವೇ ಹೊಗಳಿಕೊಳ್ಳುತ್ತೇವೆ ಹಾಗೂ ಸಣ್ಣ ತಪ್ಪುಗಳನ್ನು ಅಲಕ್ಷಿಸುತ್ತೇವೆ. ನಾನು ವೃತ್ತಪತ್ರಿಕಾ ರಂಗದಲ್ಲಿದ್ದಾಗ, ಫ್ಲೀಟ್ ಸ್ಟ್ರೀಟ್‌ನಲ್ಲಿ ಪಳಗಿದ್ದ ನನ್ನ ಸಂಪಾದಕರೊಬ್ಬರು ಹೀಗೆನ್ನುತ್ತಿದ್ದರು: 'ನೀವು ಸುದ್ದಿಯ ಮುಖ್ಯಾಂಶಗಳನ್ನು ಬರೆದ ನಂತರ, ಹಿಂದಕ್ಕೆ ಒರಗಿ ಕುಳಿತು ನಿಮ್ಮ ಪರಮಶತ್ರು ಅವುಗಳನ್ನು ಹೇಗೆ ನೋಡಬಹುದೋ ಹಾಗೆ ನೋಡಿ.'

ಕರಡಚ್ಚು ತಿದ್ದುವುದರಲ್ಲಿ ವಿಶೇಷ ಅಡಚಣೆಯೊಂದನ್ನು ನಾನು ಕಂಡಿದ್ದೇನೆ. ನಾವು ಒಂದು ತಪ್ಪನ್ನು ಪತ್ತೆ ಮಾಡಿದಾಗ, ಅದೇ ಸಾಲಿನಲ್ಲಿ ಅಥವಾ ಅದರ ಮುಂದಿನ ಸಾಲಿನಲ್ಲಿ ಇನ್ನೊಂದು ತಪ್ಪನ್ನು ನಾವು ಕಾಣದೆ ಹೋಗುತ್ತೇವೆ. ಪದವಿಭಾಗ ಕೆಲವೊಮ್ಮೆ ಅನುದ್ದೇಶಿತ ಹಾಸ್ಯಕ್ಕೆ ಎಡೆ ಮಾಡಿಕೊಡುತ್ತದೆ.

ಸಂಪಾದಕರು ಆಗಾಗ 'ಹಗುರವಾಗಿ ತಿದ್ದುವುದು' ಮತ್ತು 'ಭಾರವಾಗಿ ತಿದ್ದುವುದು' ಎಂಬ ಮಾತುಗಳನ್ನು ಹೇಳುತ್ತಾರೆ. ಈ ಹಿಂದೆ ನಾನು ಪ್ರಸ್ತಾಪಿಸಿದ ವಿಜ್ಞಾನ ಪ್ರಬಂಧದಂತಹ ಹಸ್ತಪ್ರತಿಗಳನ್ನು ಆಮೂಲಾಗ್ರವಾಗಿ ತಿದ್ದಬೇಕಾದ ಅಗತ್ಯವಿದೆ. ಆದರೆ ಒಬ್ಬ ಲೇಖಕನ ಗದ್ಯವನ್ನು ಅದನ್ನು ತಮ್ಮದೇ ಕೃತಿ ಎನ್ನುವಷ್ಟರ ಮಟ್ಟಿಗೆ ಕತ್ತರಿಸಿ ಬದಲಾಯಿಸುವವರೆಗೆ ತೃಪ್ತಿಯಾಗದ ಕೆಲವು ಹಠಮಾರಿ ಸಂಪಾದಕರಿದ್ದಾರೆ. ತಮ್ಮ ಹಠದಿಂದ ಅವರು ಅಪ್ರಿಯರಾಗುವುದು ಸುಲಭ. ನಾನೊಂದು ಸಣ್ಣ ವ್ಯಂಗ್ಯ ಚಿತ್ರವನ್ನು ನೋಡಿದೆ. ಪ್ರಕಾಶನ ಸಂಸ್ಥೆಯೊಂದರ ಸಂಪಾದಕ ಚಾರ್ಲ್ಸ್ ಡಿಕೆನ್ಸ್‌ನತ್ತ ಬೆರಳೆತ್ತಿ ಗದರುವ ಧ್ವನಿಯಲ್ಲಿ ಅವನ ಹಸ್ತಪ್ರತಿಯ "ಅದು ಅತ್ಯುತ್ತಮ ಕಾಲವಾಗಿತ್ತು; ಅದು ಅತ್ಯಂತ ಹೀನಾಯವಾದ ಕಾಲವಾಗಿತ್ತು." ಎಂಬ ಮಾತುಗಳನ್ನು ಉಲ್ಲೇಖಿಸಿ "ಇಲ್ಲ ಮಿಸ್ಟರ್ ಡಿಕೆನ್ಸ್. ನೀವು ಒಂದು ತೀರ್ಮಾನಕ್ಕೆ ಬರಲೇಬೇಕು" ಎಂದು ಹೇಳುತ್ತಿದ್ದ ಅದರಲ್ಲಿ! ತಿದ್ದುವ ಕೆಲಸಕ್ಕೆ ಎಷ್ಟರ ಮಟ್ಟಿಗೆ ಅವಕಾಶವಿರಬೇಕು ಅಥವಾ ಅದು ಎಷ್ಟರ ಮಟ್ಟಿಗೆ ಅಗತ್ಯ ಎಂಬ ಬಗ್ಗೆ ಯಾವುದೇ ಸುಸೂತ್ರ ನಿಯಮವಿಲ್ಲ; ಕೆಲವು ವರ್ಷಗಳ ಹಿಂದೆ ನನ್ನ ಗಮನಕ್ಕೆ ಬಂದ ಒಂದು ನಿಯಮದ ಹೊರತು – 'ಒಬ್ಬ ಲೇಖಕನ ಶೈಲಿಯ ಬಗ್ಗೆ, ಅವನು ಲೇಖಕನಾಗಿದ್ದರೆ ಮತ್ತು ಅವನು ಶೈಲಿ ಹೊಂದಿದ್ದರೆ, ನೀವು ಮನಸ್ವಿಯಾಗಿ ನಡೆದುಕೊಳ್ಳುವಂತಿಲ್ಲ.' ಇದು ಯಾರ ವಾಕ್ಯ ಎಂಬುದನ್ನು ನಾನು ಮರೆತಿದ್ದೇನೆ.

ತಿದ್ದಿ ಪರಿಷ್ಕರಿಸುವುದರಲ್ಲಿ ಮತ್ತು ಪ್ರಕಾಶನದಲ್ಲಿ ಒಂದು ಉಪ ಇಲಾಖೆ ಇದೆ: ಪುಸ್ತಕದ ಹೊದಿಕೆಗೆ ಬರೆಯುವುದು. ಇಂದಿನ ದಿನಗಳಲ್ಲಿ ಪುಸ್ತಕ ಕೊಳ್ಳುವವರು ಅವಸರದಲ್ಲಿರುತ್ತಾರೆ. ಪುಸ್ತಕದಂಗಡಿಗಳಲ್ಲಿ ಪುಸ್ತಕಗಳನ್ನು ಸಾವಕಾಶವಾಗಿ ತಿರುವಿ ಹಾಕುವ ಹಿಂದಿನ ಅಭ್ಯಾಸ ಈಗ ಅಪರೂಪ. ಪುಸ್ತಕದ ಹಿಂದುಗಡೆ ಪುಸ್ತಕ ಕುರಿತ ಶಿಫಾರಸುಗಳ ಕಡೆ ಜನರು ದೃಷ್ಟಿ ಹಾಯಿಸುತ್ತಾರೆ. ಕೆಲವರು ಖ್ಯಾತನಾಮರು ಪುಸ್ತಕವನ್ನು ಹೊಗಳಿದ್ದರೆ, ಅವರು ಪುಸ್ತಕ ಕೊಳ್ಳುವ ತೀರ್ಮಾನ ಮಾಡುತ್ತಾರೆ. ಪ್ರಬಲ ಜಾಹೀರಾತುಗಳು ಮತ್ತು ಮಾರಾಟ ಚಾತುರ್ಯದ ಈ ದಿನಗಳಲ್ಲಿ, ಹೊದಿಕೆಯ ಮೇಲಿನ ಬರೆವಣಿಗೆಯೇ ಒಂದು ಸಣ್ಣ ಪ್ರಮಾಣದ ಕೈಗಾರಿಕೆಯಾಗಿದೆ. ಆಗ ಪುಸ್ತಕ ಕೊಳ್ಳುವ ಭಾರತೀಯರು, ಅದರಲ್ಲೂ ವಯಸ್ಸಾದವರು, ಆಹ್,

ಊಹ್ ಎಂಬ ಉದ್ಗಾರಗಳ ಅತಿರೇಕಕ್ಕೆ ಈಡಾಗುವವರಲ್ಲವಾದ್ದರಿಂದ ವಿಪರೀತ ಪ್ರಶಂಸೆಯುಳ್ಳ ಪುಸ್ತಕಗಳಿಂದ ದೂರವಾಗುತ್ತಾರೆ. ಖ್ಯಾತನಾಮರ ಮಾತುಗಳನ್ನು ಪ್ರಕಾಶಕರ ಉದ್ದೇಶಕ್ಕನುಗುಣವಾಗಿ ಸಂಕ್ಷೇಪಿಸಲಾಗಿದೆ ಎಂಬ ಅನುಮಾನ ಇದ್ದೇ ಇರುತ್ತದೆ. ಅಮೆರಿಕದ ಇತ್ತೀಚಿನ ಪ್ರಕರಣವೊಂದರಲ್ಲಿ ಪುಸ್ತಕವೊಂದನ್ನು ಹೊಗಳಿದ್ದ ಖ್ಯಾತ ವ್ಯಕ್ತಿ ಹೇಳಿದ್ದನೆನ್ನಲಾದ ಮಾತುಗಳನ್ನು ಆ ವ್ಯಕ್ತಿ ಹೇಳಿಯೇ ಇರಲಿಲ್ಲ ಎಂಬ ಕಾರಣದಿಂದ ಆ ಪುಸ್ತಕವನ್ನು ಮಾರಾಟದಿಂದ ಹಿಂದಕ್ಕೆ ಪಡೆಯಲಾಯಿತು ಎಂಬುದನ್ನು ನಿಮ್ಮಲ್ಲಿ ಅನೇಕರು ಓದಿರಬಹುದು.

ಈಗ ನಾನು ಇದನ್ನು ಕೊನೆ ಮಾಡಬೇಕಾಗಿದೆ. ಆಧುನಿಕ ಭಾರತದ ಅತ್ಯಂತ ಶ್ರೇಷ್ಠ ಲೇಖಕ ಮತ್ತು ಸಂಪಾದಕ ಮಹಾತ್ಮ ಗಾಂಧಿ ಅವರು ಬರೆದಿರುವ ಕೆಲವು ವಾಕ್ಯಗಳೊಂದಿಗೆ ಇದನ್ನು ಕೊನೆಗೊಳಿಸುತ್ತೇನೆ:

ನಾನು ಪತ್ರಿಕೋದ್ಯಮವನ್ನು ಕೈಗೊಂಡಿರುವುದು ಪತ್ರಿಕೋದ್ಯಮದ ಸಲುವಾಗಿ ಅಲ್ಲ. ನನ್ನ ಜೀವನದ ಪರಮ ಗುರಿ ಯಾವುದೆಂದು ನಾನು ಮನಗಂಡಿದ್ದೇನೋ ಆ ಗುರಿಸಾಧನೆಯ ಸಾಧನವನ್ನಾಗಿ ಮಾತ್ರ ನಾನು ಅದನ್ನು ಕೈಗೊಂಡಿದ್ದೇನೆ...... ಜೀವನದ ಅನೇಕ ಕೇಡುಗಳಿಗೆ ಅಹಿಂಸೆಯ ಹೊರತಾಗಿ ಬೇರೆ ಯಾವ ಪರಿಹಾರವೂ ಇಲ್ಲ ಎಂಬುದನ್ನು ಪ್ರಮಾಣಿಸಿ ತೋರಿಸಲು ನಾನು ಕಾತುರನಾಗಿದ್ದೇನೆ, ಅಷ್ಟೇ ಏಕೆ, ಅಸಹನೆಯಿಂದಲೂ ಇದ್ದೇನೆ. ಆದ್ದರಿಂದ, ನನ್ನ ನಂಬಿಕೆಗೆ ನಾನು ನಿಜವಾಗಿರಲು ಕೋಪದಿಂದಾಗಲೀ, ಹಗೆಯಿಂದಾಗಲೀ ನಾನು ಬರೆಯುವುದಿಲ್ಲ. ನಾನು ನಿಷ್ಪ್ರಯೋಜಕವಾಗಿ ಬರೆಯುವುದಿಲ್ಲ. ಕೇವಲ ಆವೇಶಗಳನ್ನು ಕೆರಳಿಸಲು ನಾನು ಬರೆಯುವುದಿಲ್ಲ. ವಿಷಯುಗಳ ಮತ್ತು ಬಳಸುವ ಭಾಷೆಯ ಆಯ್ಕೆಯಲ್ಲಿ ವಾರವಾರವೂ ನಾನು ವಹಿಸುವ ಸಂಯಮದ ಬಗ್ಗೆ ಓದುಗರಿಗೆ ಯಾವುದೇ ಸುಳಿವು ದೊರೆಯದು. ಇದು ನನಗೊಂದು ತರಬೇತಿ. ಅನೇಕ ಸಲ ನನ್ನ ದುರಭಿಮಾನ ಒಂದು ಸಣ್ಣ ಮಾತನ್ನು ಅಥವಾ ನನ್ನ ಕೋಪ ಒಂದು ಕಟುವಾದ ಗುಣವಾಚಕವನ್ನು ಬರೆಸುತ್ತದೆ. ಈ ಕಳೆಗಳನ್ನು ತೆಗೆಯುವುದು ಒಂದು ಕಠಿಣ ಪರೀಕ್ಷೆಯಾದರೂ ಉತ್ತಮವಾದ ಶ್ರಮವೇ ಸರಿ. (*ಯಂಗ್ ಇಂಡಿಯ*, 2 ಜುಲೈ 1925)

ಕೆಲವೇ ಲೇಖಕರು –ಅತ್ಯಂತ ನಿಷ್ಠಾವಂತರು ಮಾತ್ರ– ಕಳೆಗಳನ್ನು ತೆಗೆಯುತ್ತಾರೆ. ಹೆಚ್ಚಿನವರು ಅವುಗಳನ್ನು ಹಾಗೆಯೇ ಬಿಟ್ಟುಬಿಡುತ್ತಾರೆ. ಕಳೆ ತೆಗೆಯುವ ಕೆಲಸವನ್ನು ಸಂಪಾದಕರು ಮಾಡಬೇಕು.

# ಹಸ್ತಪ್ರತಿಗಳ ಸಂಗ್ರಹಣೆ ಮತ್ತು ಅವುಗಳ ಮೌಲ್ಯಮಾಪನ

ರುಕುನ್ ಅದ್ವಾನಿ

ಪ್ರಕಾಶನ ಸಂಸ್ಥೆಗಳು ಸಾಮಾನ್ಯವಾಗಿ ನಾಲ್ಕು ವಿಭಾಗಗಳಾಗಿ ರಚನೆಯಾಗಿರುತ್ತವೆ – ಸಂಪಾದನೆ, ಮುದ್ರಣ, ಮಾರಾಟ ಮತ್ತು ಲೆಕ್ಕಗಳು. ಪ್ರಕಾಶಕ ಮಾರಾಟ ಮಾಡಬೇಕಾದ ವಸ್ತು ಪುಸ್ತಕವಾದ್ದರಿಂದ ಹಾಗೂ ಅದು ಕಾರ್ಖಾನೆಗಳಲ್ಲಿ ತಯಾರಾದ ಸಾಬೂನು ಮತ್ತು ವನಸ್ಪತಿಯಂತಹ ವ್ಯತ್ಯಾಸವಿಲ್ಲದ ಉತ್ಪನ್ನಗಳಿಗಿಂತ ಮೂಲಭೂತವಾಗಿ ವ್ಯತ್ಯಾಸವನ್ನುಳ್ಳದ್ದರಿಂದ ಸಂಪಾದಕೀಯ ಕಾರ್ಯ ಪ್ರಕಾಶನ ಸಂಸ್ಥೆಯ ಅತ್ಯಂತ ಮುಖ್ಯ ಕಾರ್ಯವಾಗಿರಬೇಕು. ಆದರೆ ಭಾರತದಲ್ಲಿ ಇದು ಸಾಮಾನ್ಯವಾಗಿ ಹೀಗಿಲ್ಲ.

ಸಂಪಾದಕೀಯ ಕೆಲಸ ಅಥವಾ 'ಸಂಪಾದಕ' ಎನ್ನುವ ಪದ ಬಹುತೇಕ ಭಾರತೀಯರ ಮನಸ್ಸಿನಲ್ಲಿ - ಇದರಲ್ಲಿ ಬಹಳಷ್ಟು ಸಂಪಾದಕರೂ ಸೇರಿದ್ದಾರೆ, ಹಾಗೂ ಭಾರತೀಯ ಪ್ರಕಾಶನ ಸಂಸ್ಥೆಗಳ ಹೆಚ್ಚಿನ ಮಾಲೀಕರು ಮತ್ತು ವ್ಯವಸ್ಥಾಪಕರೂ ಸೇರಿದ್ದಾರೆ – ಅನಗತ್ಯವಾದ ಸಂಕುಚಿತ ಮತ್ತು ಸೀಮಿತ ಅರ್ಥವ್ಯಾಪ್ತಿಯನ್ನು ಹೊಂದಿರುವುದರಿಂದ ಮೇಲಿನ ಹೇಳಿಕೆಯನ್ನು ತಕ್ಷಣ ಮಾರ್ಪಡಿಸಬೇಕಾದ ಅಗತ್ಯವಿದೆ. ನಮ್ಮ ಅರ್ಥವ್ಯಾಪ್ತಿಯಲ್ಲಿ ಒಬ್ಬ ಸಂಪಾದಕ ಒಂದು ನೀಲಿ ಪೆನ್ಸಿಲ್ – ಅಥವಾ ಜಪಾನೀಯರು ತಯಾರಿಸಿದ 0.5 ಹೈಟೆಕ್‌ಪಾಯಿಂಟ್ ಪೆನ್ – ಹಿಡಿದು ಸುಮಾರಾಗಿರುವ ಗದ್ಯವನ್ನು ಪರಿಶೀಲಿಸುವ ಮೇಜು ಸಂಪಾದಕ ಅಥವಾ ಬರೆವಣಿಗೆಯನ್ನು ತಿದ್ದುವ ಸಂಪಾದಕನಾಗಿರುತ್ತಾನೆ. ಅಥವಾ, ಆತ ಅಥವಾ ಆಕೆಯನ್ನು ಹಸ್ತಪ್ರತಿ ಸಂಗ್ರಹಿಸುವ ಸಂಪಾದಕನೆಂದೂ/ಳೆಂದೂ, ಹಸ್ತಪ್ರತಿಗಳನ್ನು ಪಡೆಯುವ ಮೂಲಕ ವ್ಯಾಪಾರವನ್ನು ತರುವ ಜವಾಬ್ದಾರಿಯನ್ನು ಮಾತ್ರ ಹೊಂದಿರುವ ವ್ಯಕ್ತಿಯೆಂದೂ ಸಂಕುಚಿತವಾಗಿ ವರ್ಣಿಸಲಾಗುತ್ತದೆ. ಈ ಹಸ್ತ ಪ್ರತಿಗಳನ್ನು ನಂತರ ಮೇಜು ಸಂಪಾದಕರಿಗೆ, ನಂತರ

ಮುದ್ರಣ ವಿಭಾಗಕ್ಕೆ ಮತ್ತು ಅಲ್ಲಿಂದ ಮಾರಾಟ ವಿಭಾಗಕ್ಕೆ ಸಾಗಿಸಲಾಗುವುದು. ಯಾವ ಒಂದು ಕ್ಷೇತ್ರದಲ್ಲಿ ಒಂದಿಷ್ಟು ಪ್ರಿಯವಾದ ಹಾಹಾಕಾರ ಇರುವುದು ಉತ್ತಮವೆನಿಸುತ್ತದ್ದೋ, ಅಂತಹ ಕ್ಷೇತ್ರದಲ್ಲಿ ಕಾರ್ಖಾನೆಯೊಂದರ ವಿವೇಚನಾರಹಿತ ಮತ್ತು ಮನಸ್ಸನ್ನು ಪರಾಧೀನಗೊಳಿಸುವ ಉತ್ಪಾದನಾ ಪ್ರಕ್ರಿಯೆಗಳನ್ನು ಅನುಕರಿಸುವ ಪ್ರಯತ್ನವಾದ, ಕೆಲಸವನ್ನು ಹಂತಹಂತವಾಗಿ ಮಾಡಬೇಕಾದ ವಿಷಾದನೀಯ ಅಗತ್ಯಗಳು ಇಂತಹ ಪರಿಣತಿಯ ಸ್ಥಿತಿಯನ್ನು ಸೃಷ್ಟಿಸಿವೆ. ಆದರೆ ಪ್ರಕಾಶನ ಕಾರ್ಯದಲ್ಲಿ ಸಂಪಾದಕೀಯ ಕಾರ್ಯ ಕೇಂದ್ರಬಿಂದುವಾಗಿದೆ ಎಂದು ನಾನು ವಾದಿಸುತ್ತೇನೆ. ಏಕೆಂದರೆ ಉನ್ನತ ಗುಣಮಟ್ಟದ ಪ್ರಕಾಶನಕ್ಕೆ ಒಬ್ಬ ಸಂಪಾದಕ ಕೆಂಪು ಬಣ್ಣದ ಜಪಾನಿ ಹೈಟೆಕ್‌ಪಾಯಿಂಟ್ ಪೆನ್‌ನಿಂದ ಗೀಚುವುದರಲ್ಲಿ ಪರಿಣತಿ ಪಡೆದ ವ್ಯಕ್ತಿಯಾಗದೆ ಅಥವಾ ನಿತ್ಯವೂ ಒಂದು ತಂದೂರಿ ಕೋಳಿ, ಒಂದು ಬಾಟಲ್ ಬೀರ್ ಮತ್ತು ಒಬ್ಬ ಲೇಖಕನ ಜೊತೆ ಕುಳಿತುಕೊಳ್ಳುವ ವ್ಯಕ್ತಿಯಾಗದೆ, ಅದಕ್ಕೂ ಮೀರಿದವನಾಗಬೇಕಾದ್ದು ಅತ್ಯಂತ ಮುಖ್ಯ.

ನಾನು ಈ ವಾದವನ್ನು ಏಕೆ ಮಾಡುತ್ತೇನೆಂದರೆ, ಹಸ್ತಪ್ರತಿಗಳನ್ನು ಉತ್ತಮವಾಗಿ ಮತ್ತು ಪರಿಣಾಮಕಾರಿಯಾಗಿ ಪಡೆಯುವ ಕಾರ್ಯಭಾರ ಒಂದು ನಿರ್ದಿಷ್ಟ ವಿಷಯದಲ್ಲಿ ಪರಿಣತಿಯನ್ನು ಸಾಧಿಸುವುದನ್ನು ವಿರೋಧಿಸುವ ಸಂಪಾದಕನ ಸಾಮರ್ಥ್ಯವನ್ನು ಹಾಗೂ ಅದೇ ಕಾಲಕ್ಕೆ ಸಮಾನ ಪ್ರಾಮುಖ್ಯತೆಯುಳ್ಳ ಎರಡು ಅರ್ಹತೆಗಳನ್ನು ಆತ ಹೊಂದಿರುವುದನ್ನು ಸಂಪೂರ್ಣವಾಗಿ ಅವಲಂಬಿಸಿರುತ್ತದೆ.

ಮೊದಲನೆಯದು ಸಡಿಲವಾಗಿ ಕರೆಯಬಹುದಾದ ಒಂದು ನೈತಿಕ ಅರ್ಹತೆ ಎನ್ನಬಹುದು. ಸಾಮಗ್ರಿಯನ್ನು ಅಳೆಯುವ ಹಾಗೂ ತನ್ನ ನಿರ್ದಿಷ್ಟ ಪ್ರಕಾಶನ ಪಟ್ಟಿಗೆ ಯಾವುದು ಉತ್ತಮ, ಯಾವುದು ಉತ್ತಮವಲ್ಲ ಎಂದು ತಾರತಮ್ಯ ಮಾಡುವ ಹಾಗೂ ಕಾಳಿನ ಹಸ್ತಪ್ರತಿಗಳಿಂದ ಜೊಳ್ಳು ಹಸ್ತಪ್ರತಿಗಳನ್ನು ಶೋಧಿಸಿ ತೆಗೆಯುವ ಸಾಮರ್ಥ್ಯವನ್ನು ಸಂಪಾದಕನಿಗೆ ಒದಗಿಸುವ ವಿವೇಚನಾ ಶಕ್ತಿಯನ್ನು ಹೊಂದುವುದೇ ಈ ನೈತಿಕ ಅರ್ಹತೆ. 'ಒಳ್ಳೆಯದು' ಮತ್ತು 'ಕೆಟ್ಟದ್ದನ್ನು' ಬೇರ್ಪಡಿಸುವ ಕಾರ್ಯವನ್ನು, ಅವರ ಸಾಮಾನ್ಯ ದೃಷ್ಟಿಕೋನ, ಹಾಗೂ ಅದರಿಂದಾಗಿ ಅವರ ರಾಜಕೀಯ–ಸೈದ್ಧಾಂತಿಕ ನಿಲುವು ಒಂದು ನಿರ್ದಿಷ್ಟ ರೀತಿಯದ್ದಾಗಿರುವವರು, ಮಾಡುತ್ತಿದ್ದಾರಾದ್ದರಿಂದ ಒಂದು ನೈತಿಕ ಕಾರ್ಯಭಾರವನ್ನು ನಿರ್ವಹಿಸುವ ಮಾತನಾಡುವಾಗ ಎಲ್ಲ ರೀತಿಯ ರಾಜಕೀಯ ಮತ್ತು ಸೈದ್ಧಾಂತಿಕ ಪ್ರಶ್ನೆಗಳು ಏಳುತ್ತವೆ. ನಿಮ್ಮ ದೃಷ್ಟಿಕೋನದ ರಚನೆಯೇ ಭಿನ್ನವಾಗಿದ್ದರೆ, 'ಒಳ್ಳೆಯದು' ಮತ್ತು 'ಕೆಟ್ಟದ್ದ'ರ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳನ್ನು ತಾಳುವುದು ಸಾಧ್ಯವಾದ್ದರಿಂದ, 'ಒಳ್ಳೆಯದು' ಮತ್ತು 'ಕೆಟ್ಟದ್ದು' ಎಂಬ ವರ್ಗಗಳ ಬಗ್ಗೆ ತೀರ ಖಚಿತ ಎನ್ನುವುದೇನೂ ಇಲ್ಲ. ಉದಾಹರಣೆಗೆ, ಯಾವುದು ಉತ್ತಮವಾದ ಬರೆವಣಿಗೆ ಎಂಬ ಬಗ್ಗೆ ನಿಮ್ಮ ಅಭಿಪ್ರಾಯ ಇಂಗ್ಲಿಷ್ ಸಾಹಿತ್ಯದ ಸಾಂಪ್ರದಾಯಿಕ ಕಟ್ಟುಕಟ್ಟಳೆಯಿಂದ ರೂಪಿತವಾಗಿದ್ದರೆ ಹಾಗೂ ನೀವು ಹಸ್ತಪ್ರತಿ ಸಂಗ್ರಹಣೆಗೆ ಒಂದು ದಾರಿದೀಪದಂತೆ ಅದನ್ನು ಎತ್ತಿ ಹಿಡಿಯುವ ಮೂಲಕ

ನಿಮ್ಮ ಪ್ರಕಾಶನ ಕಾರ್ಯದಲ್ಲಿ ಅಂತಹ ಸಾಮಾನ್ಯ ಮಾದರಿಯನ್ನು ಅನುಕರಿಸಲು ನೀವು ಪ್ರಯತ್ನಿಸಿದರೆ, ಉತ್ತಮ ಸಂಗ್ರಹಣೆ ಕುರಿತ ನಿಮ್ಮ ನಿಲುವನ್ನು, ಅದರ ಸಾಂಪ್ರದಾಯಿಕತೆಗಾಗಿ ಮತ್ತು ಅಧಿಕಾರದ ಹಾಲಿ ಸಾಂಸ್ಥಿಕ ರಚನೆಗಳೊಂದಿಗೆ ಆ ನಿಲುವಿನ ಧ್ವನಿತ ಸಹಯೋಗದಿಂದಾಗಿ–ಮಹಿಳಾವಾದಿ ಪಂಡಿತರು 'ಕೆಟ್ಟದ್ದು' ಎಂದು ಪರಿಗಣಿಸಬಹುದು. ಇದನ್ನು ನಿರಾಕರಿಸಲಾಗದಿದ್ದರೂ, 'ಕೆಟ್ಟದ್ದು' ಮತ್ತು 'ಅಷ್ಟೇನೂ ಒಳ್ಳೆಯದಲ್ಲದ್ದು' ಹೇಗಾಗುತ್ತದೆ ಹಾಗೂ 'ಒಳ್ಳೆಯದು' ಹೇಗಾಗುತ್ತದೆ ಎಂಬ ಬಗ್ಗೆ ಬೇರೆ ಬೇರೆ ಸೈದ್ಧಾಂತಿಕ ನಿಲುವುಗಳಲ್ಲೂ ಸಹ ವಿಶಾಲವಾದ ಒಟ್ಟಾಭಿಪ್ರಾಯ ಉಂಟಾಗುವುದಕ್ಕೆ ಇನ್ನೂ ಅವಕಾಶವಿದೆ. ಉದಾಹರಣೆಗೆ, ಕಾಳಿ, ಸೇಜ್ ಮತ್ತು ಒಯುಪಿ (ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್) ಪ್ರಕಾಶನ ಸಂಸ್ಥೆಗಳ ಸೈದ್ಧಾಂತಿಕ ನಿಲುವುಗಳು ಮತ್ತು ಪ್ರಕಾಶನ ದೃಷ್ಟಿಕೋನಗಳು ಒಂದೇ ತೆರನೆ ಇಲ್ಲದಿದ್ದರೂ, ಈ ಸಂಸ್ಥೆಗಳಲ್ಲಿನ ಹಸ್ತಪ್ರತಿ ಸಂಗ್ರಾಹಕರು ತಮ್ಮ ಪರಸ್ಪರರ ಪಟ್ಟಿಗಳ ಜೊತೆಗೆ ಪೆಂಗ್ವಿನ್ ಇಂಡಿಯ ಅಥವಾ ರವಿ ದಯಾಳ್ ಅಥವಾ ರೂಪಾ ಪ್ರಕಾಶನ ಸಂಸ್ಥೆಗಳ ಪಟ್ಟಿಗಳಲ್ಲಿ ಸಾಧಾರಣ/ಕಳಪೆ ಹಸ್ತ ಪ್ರತಿಗಳು ಯಾವುವು, ಉತ್ತಮವಾದುವು ಯಾವುದು ಎಂಬ ಬಗ್ಗೆ ಸಾಮಾನ್ಯವಾಗಿ ಒಮ್ಮತ ಹೊಂದಿರುತ್ತಾರೆ. ಭಾರತದಲ್ಲಿ ಪುಸ್ತಕ ಓದುವ ಜನರಲ್ಲಿ ಉತ್ತಮ ಹಸ್ತ ಪ್ರತಿಗಳ ಸಂಗ್ರಹಣೆ ಯಾವುವು ಹಾಗೂ ಸಾಧಾರಣ/ಕಳಪೆ ಹಸ್ತಪ್ರತಿಗಳ ಸಂಗ್ರಹಣೆ ಯಾವುದು ಎಂಬ ಬಗ್ಗೆ ಇಂತಹುದೇ ಒಮ್ಮತ ಇದೆಯೋ ಎಂದು ತೀರ್ಮಾನಿಸಲು ಇದನ್ನು ನೀವು ಆಧಾರವಾಗಿಟ್ಟುಕೊಂಡರೆ, ಇದರಲ್ಲಿ ಸಾಕಷ್ಟು ಒಮ್ಮತ ಇದೆ ಎಂದು ನೀವು ಕಂಡುಹಿಡಿಯುವ ಸಂಭವವಿದೆ. ಭಾರತದ ಓದುಗರನ್ನು ಮತ್ತು ಪುಸ್ತಕ ಕೊಳ್ಳುವವರನ್ನು ಸ್ಥೂಲವಾಗಿ ಎರಡು ಭಾಗಗಳಾಗಿ ವಿಂಗಡಿಸಬಹುದಾದರೆ – ವ್ಯಾಸಂಗ ಮಾಡುವ 'ಶ್ರದ್ಧಾವಂತ'. ಓದುಗರು ಹಾಗೂ ವ್ಯಾಸಂಗ ಮಾಡದ 'ಸಾಮಾನ್ಯ' ಓದುಗರು – ಈ ಎರಡೂ ವರ್ಗಗಳ ಓದುಗರು ತಮ್ಮತಮ್ಮ ಕ್ಷೇತ್ರಗಳಲ್ಲಿ ಸಾಮಾನ್ಯವಾಗಿ ಉತ್ತಮ ಪ್ರಕಾಶನ ಯಾವುದು ಹಾಗೂ ಯಾವುದೇ ಒಂದು ಉತ್ತಮ ಪ್ರಕಾಶನ ಪಟ್ಟಿಯಲ್ಲಿ ಒಳ್ಳೆಯ ಭಾಗಗಳು ಯಾವುವು, ಸಾಧಾರಣ ಭಾಗಗಳು ಯಾವುವು ಎಂಬ ಬಗ್ಗೆ ಬಹುತೇಕ ಒಮ್ಮತ ಹೊಂದಿರುತ್ತಾರೆ ಎಂಬುದು ನಿಮಗೆ ತಿಳಿಯುತ್ತದೆ. ಹೀಗಿರುವಾಗ, ಹಸ್ತಪ್ರತಿಗಳನ್ನು ಸಂಗ್ರಹಿಸುವ ಸಂಪಾದಕ ಅವುಗಳ ಸಂಗ್ರಹಣೆಗೆ ಹೇಗೆ ತೊಡಗಬೇಕೆಂಬುದರ ಬಗ್ಗೆ ಒಂದು ಪ್ರಜ್ಞಾವಂತ ಮತ್ತು ಅರಿವುಳ್ಳ ನಿಲುವನ್ನು ತಲುಪಬೇಕಾದರೆ ಉತ್ತಮವಾದ ಮತ್ತು ಗೌರವಾನ್ವಿತ ಪ್ರಕಾಶನ ಯಾವುದರಿಂದ ಆಗುತ್ತದೆ ಎಂಬುದನ್ನು ಕುರಿತ ಅಭಿಪ್ರಾಯಗಳು, ವಿಮರ್ಶೆ, ಹರಟೆಯ ಮಾತುಗಳು ಮತ್ತು ಎಲ್ಲ ಲಭ್ಯ ಪ್ರತಿಕ್ರಿಯಾ ಮಾಹಿತಿಯ ಬಗ್ಗೆ ನಿಕಟ ಸಂಪರ್ಕ ಹೊಂದಿರಬೇಕಾದ್ದು ಅವನ ನೈತಿಕ ಕರ್ತವ್ಯದ ಒಂದು ಭಾಗ. ವ್ಯಾಸಂಗ ಪ್ರಕಾಶನ ಸಂಸ್ಥೆಯಲ್ಲಿ ಸಂಗ್ರಾಹಕ ಕೆಲಸ ಮಾಡುತ್ತಿದ್ದರೆ ಈ ಮಾಹಿತಿಯ ಜಾಲ ನಿಯತಕಾಲಿಕಗಳಲ್ಲಿ ಹಾಗೂ ದೇಶದ ವಿಶ್ವವಿದ್ಯಾಲಯಗಳು ಮತ್ತು ಅಧ್ಯಯನ ಸಂಸ್ಥೆಗಳಲ್ಲಿ ದೊರೆಯುತ್ತದೆ. ಸಾಮಾನ್ಯ ಆಸಕ್ತಿಯ ವಿಷಯಗಳಿಗೆ

ಸಂಬಂಧಿಸಿದಂತೆ ಹಸ್ತಪ್ರತಿಗಳನ್ನು ಸಂಗ್ರಹಿಸುವುದಾದರೆ, ಈ ಮಾಹಿತಿ ಜಾಲದಲ್ಲಿ ಕಾದಂಬರಿಕಾರರು, ಕವಿಗಳು, ವಿಮರ್ಶಕರು, ಅನುವಾದಕರು ಮತ್ತು ಶ್ರದ್ಧಾವಂತ ಪತ್ರಕರ್ತರು ಇರುತ್ತಾರೆ. ಹೀಗೆ ಹಸ್ತಪ್ರತಿ ಸಂಗ್ರಹ ಕಾರ್ಯ, ಓದುವ ಬರೆಯುವ ಎಲ್ಲ ವ್ಯವಹಾರದಂತೆ, ಸಮಕಾಲೀನ ಸಮಾಜವಿಜ್ಞಾನ ಭಾಷೆಯಲ್ಲಿ ಯಾವುದನ್ನು ಸಾಂಸ್ಕೃತಿಕ ಆಚರಣೆ ಎನ್ನುತ್ತಾರೋ ಅದರ ಒಂದು ಪ್ರಮುಖ ಮುಖವಾಗಿದೆ. ಒಂದು ಸಂಸ್ಕೃತಿಯ ನೆಲೆಯಲ್ಲಿ ನಿಮ್ಮ ಓದುಗಾರಿಕೆ ಮತ್ತು ಬರೆವಣಿಗೆಯಂತೆಯೇ ನಿಮ್ಮ ಹಸ್ತಪ್ರತಿ ಸಂಗ್ರಹ ಮತ್ತು ಪ್ರಕಾಶನ ಕಾರ್ಯವೂ ನಿಮ್ಮ ನೈತಿಕ ಮತ್ತು ಸೈದ್ಧಾಂತಿಕ ನಿಲುವನ್ನು ತೋರಿಸುತ್ತದೆ. ಈ ಅರ್ಥದಲ್ಲಿ ಪರಿಣಾಮಕಾರಿಯಾಗಿ ಹಸ್ತಪ್ರತಿ ಸಂಗ್ರಹಿಸಿ, ಮೌಲ್ಯಮಾಪನ ಮಾಡಿ, ಒಳ್ಳೆಯದು ಯಾವುದು, ಕೆಟ್ಟದ್ದು ಯಾವುದು ಎಂಬುದನ್ನು ಗುರುತಿಸುವುದು ಉತ್ತಮ ಪ್ರಕಾಶಕನಾಗಿ ಇರುವುದಕ್ಕೆ ಸಮಾನವಾದದ್ದು.

ಸ್ವಲ್ಪ ಜಾಳಾಗಿ ಕರೆಯಬಹುದಾದ ಒಂದು ವ್ಯವಹಾರ ಅರ್ಹತೆ ಪರಿಣಾಮಕಾರಿ ಹಸ್ತಪ್ರತಿ ಸಂಗ್ರಹಣೆಗೆ ಎರಡನೆಯ ಮೂಲಭೂತ ಅರ್ಹತೆ; ಪುಸ್ತಕಗಳು ನೈತಿಕ ವಸ್ತು ಎಂದು ನಾವು ಗುರುತಿಸಿದ್ದೇವೆ; ಈಗ ನಾವು ಅದನ್ನು ಮಾರಾಟಯೋಗ್ಯ ವಸ್ತು ಎಂದು ಗುರುತಿಸಬೇಕಾಗಿದೆ. ಅಂದರೆ ಹಸ್ತಪ್ರತಿಗಳನ್ನು ಸಂಗ್ರಹಿಸುವ ವ್ಯಕ್ತಿ ತನ್ನ ನೈತಿಕ ವಸ್ತುಗಳನ್ನು ಮಾರುಕಟ್ಟೆಯಲ್ಲಿ ಮಾರಬೇಕಾಗಿದೆ. ಇದಕ್ಕೆ ಅನೇಕ ವಿಷಯಗಳನ್ನು ತಿಳಿದುಕೊಳ್ಳಬೇಕಾಗುತ್ತದೆ. ಇವೆಲ್ಲವೂ ಒಂದು ಉತ್ಪನ್ನದಲ್ಲಿ ಬಂಡವಾಳ ಹೂಡಿ, ಆ ಹೂಡಿಕೆಯ ಮೇಲೆ ಅಲ್ಪ ಅಥವಾ ಮಧ್ಯಮ ಅಥವಾ ದೀರ್ಘಾವಧಿ ಪ್ರತಿಫಲವನ್ನು ಪಡೆಯುವುದಕ್ಕೆ ಸಂಬಂಧಿಸಿವೆ.

ಒಂದು ಪ್ರಕಾಶನ ಕಾರ್ಯಕ್ರಮದಲ್ಲಿ ಬಂಡವಾಳ ಹೂಡಬೇಕೇ, ಹೂಡುವುದಾದರೆ ಹೇಗೆ ಹೂಡಬೇಕು ಎಂಬುದನ್ನು ನಿರ್ಧರಿಸಲು ಪ್ರಕಾಶನ ಕ್ಷೇತ್ರದ ಪ್ರತಿಯೊಂದು ಕಾರ್ಯದ ಬಗ್ಗೆ ಸ್ವಲ್ಪ ಮಟ್ಟಿನ ಅನುಭವ, ತಿಳುವಳಿಕೆ ಅಗತ್ಯ. ಸಂಪಾದಕ ಪೂರ್ಣ ಪ್ರಮಾಣದ ಪ್ರಕಾಶನ ವ್ಯಕ್ತಿಯಾಗಿದ್ದರೆ ಮಾತ್ರ ವ್ಯಾಪಕವಾಗಿ ಯಶಸ್ವಿ ಮತ್ತು (ನನ್ನ ದೃಷ್ಟಿಯಲ್ಲಿ ಇನ್ನೂ ಹೆಚ್ಚು ಮುಖ್ಯವಾದ) ಗೌರವಾನ್ವಿತ ಹಸ್ತಪ್ರತಿ ಸಂಗ್ರಹ ಹಾಗೂ ಗ್ರಂಥಗಳ ಪಟ್ಟಿಯ ನಿರ್ಮಾಣ ಸಾಧ್ಯ. ನಾನಿಲ್ಲಿ ಹೇಳುವುದೇನೆಂದರೆ, ಇಂತಹ ವ್ಯಕ್ತಿ ಒಂದು ಮೇಜಿನ ಹಿಂದೆ, ಒಂದು ಊಟದ ಮೇಜಿನ ಹಿಂದೆ, ರಕ್ಷಾಪುಟಗಳ ವಿನ್ಯಾಸ ಮಾಡುವುದರಲ್ಲಿ ಸಾಕಷ್ಟು ನಿಪುಣತೆಯಿಂದ ಕೆಲಸ ಮಾಡಲು ಸಮರ್ಥನಿರಬೇಕು; ಆತ ಮಾರಾಟದ ಅಂಕಿಅಂಶಗಳನ್ನು ನಿಕಟವಾಗಿ ಮತ್ತು ನಿಯಮಿತವಾಗಿ ವಿಶ್ಲೇಷಿಸುವವನಾಗಬೇಕು, ಮಾರಾಟ ಮತ್ತು ಪ್ರಚಾರ ಕಾರ್ಯತಂತ್ರಗಳನ್ನು ಚರ್ಚಿಸುವವನಾಗಬೇಕು, ಬಂಡವಾಳ ಹೂಡಿಕೆಯ ಬಗ್ಗೆ ನಿರ್ಧಾರ ಕೈಗೊಳ್ಳಲು ಖರ್ಚು ವೆಚ್ಚಗಳ ಅಂದಾಜು ಮಾಡಲು ಸಮರ್ಥನಿರಬೇಕು ಹಾಗೂ ಮಾರ್ಕೆಟ್‌ನ ಸ್ವರೂಪದ ಬಗ್ಗೆ ಅತ್ಯುತ್ತಮವಾಗಿ ಪಕ್ವಗೊಂಡ ಹುಟ್ಟರಿವು ಇರಬೇಕು ಹಾಗೂ ತನ್ನ ಪ್ರಕಾಶನದ

ಪ್ರತಿಯೊಂದು ಪುಸ್ತಕವೂ ಎಷ್ಟು ಮಾರಾಟವಾಗಬಹುದು ಎಂಬ ಅಂದಾಜನ್ನು ಹೊಂದಿರಬೇಕು.

ಬಹುತೇಕ ಪ್ರಕಾಶನ ಸಂಸ್ಥೆಗಳಲ್ಲಿ ಹಸ್ತಪ್ರತಿ ಸಂಪಾದಕನನ್ನು ಒಬ್ಬ ಕೆಳವರ್ಗದ ನೌಕರನಂತೆ ಕಾಣುವುದಕ್ಕೆ ಬದಲಾಗಿ ಸಮಾನಸ್ಕಂದನಂತೆ ನೋಡುವುದರಿಂದ ಸಾಕಷ್ಟು ಒಳ್ಳೆಯದಾಗುತ್ತದೆ. ಫೇಬರ್ ಸಂಸ್ಥೆ ಟಿ.ಎಸ್. ಈಲಿಯಟ್ ಅವರನ್ನು ತನ್ನ ಕಾವ್ಯ ಸಂಪಾದಕನನ್ನಾಗಿ ಬಳಸಿತು. ಏಕೆಂದರೆ ಅವರು ಒಳ್ಳೆಯ ಮತ್ತು ಕೆಟ್ಟ ಕಾವ್ಯದ ನಡುವಣ ವ್ಯತ್ಯಾಸವನ್ನು ಕಾಣಬಲ್ಲರಾಗಿದ್ದರು ಹಾಗೂ ಎಂತಹ ಕಾವ್ಯವನ್ನು ಮಾರಾಟ ಮಾಡಬಹುದು ಎಂದು ಬಹುಶಃ ಅವರಿಗೆ ತಿಳಿದಿತ್ತು – ಅಥವಾ ತಿಳಿಯುವಂತಹ ಬುದ್ಧಿಶಕ್ತಿ ಇತ್ತು – ಹಾಗೂ ಸಂಸ್ಥೆಯಲ್ಲಿ ಅವರಿದ್ದದ್ದರಿಂದ ಫೇಬರ್ ಸಂಸ್ಥೆಯಡಿ ತಮ್ಮ ಕೃತಿಗಳ ಪ್ರಕಟಣೆ ಮಾಡಿಸಲು ಅತ್ಯುತ್ತಮ ಕವಿಗಳನ್ನು ಮತ್ತು ಕವಿತಾ ಸಾಮರ್ಥ್ಯವನ್ನು ಹೊಂದಿದ್ದ ಕವಿಗಳನ್ನು ಸಂಸ್ಥೆ ಆಕರ್ಷಿಸುವ ಸಂಭವವಿತ್ತು. ಅಮೆರಿಕದ ವಿಶ್ವವಿದ್ಯಾಲಯಗಳ ಮುದ್ರಣ ವಿಭಾಗಗಳು ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ವಿಷಯಗಳ ಪಟ್ಟಿಯೊಂದನ್ನು ಬೆಳೆಸಲು ವಿದ್ವಾಂಸರನ್ನು ಆಗಿಂದಾಗ ನೇಮಿಸಿಕೊಳ್ಳುತ್ತವೆ. ಉದಾಹರಣೆಗೆ, ಯೂನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯದ ಮುದ್ರಣ ವಿಭಾಗ ತನ್ನ ವಿಶ್ವವಿದ್ಯಾಲಯದ ದಕ್ಷಿಣ ಏಷ್ಯ ಅಧ್ಯಯನ ಕುರಿತ ಪಟ್ಟಿಗೆ ಗ್ರಂಥಗಳನ್ನು ಸಂಪಾದಿಸಲು ದಕ್ಷಿಣ ಏಷ್ಯದ ಒಬ್ಬ ಗಣ್ಯ ತಜ್ಞರನ್ನು ನಿಯಮಿತವಾಗಿ ನೇಮಿಸುತ್ತಿತ್ತು. ಆಕ್ಸ್‌ಫರ್ಡ್ ಮತ್ತು ಭಾರತದಲ್ಲಿ ಒಯುಪಿ ತಮ್ಮ ವಿದ್ವತ್ತಿನ ಪಟ್ಟಿಗೆ ಕೃತಿ ಸಂಗ್ರಹಿಸಲು ವ್ಯಾಸಂಗದಲ್ಲಿ ಅನುತ್ತೀರ್ಣರಾದ ನನ್ನಂತಹವರನ್ನು ಮತ್ತು ನನ್ನ ಸಹೋದ್ಯೋಗಿಗಳಂತಹವರನ್ನು ಅಥವಾ ಅಧ್ಯಯನದಲ್ಲಿ ವಿಶೇಷ ಪರಿಣತಿಯನ್ನು ಹೊಂದುವ ಬಗ್ಗೆ, ಅಧ್ಯಯನ ವಲಯದಲ್ಲಿ ಬೆನ್ನಿಗೆ ಚೂರಿ ಹಾಕುವುದರ ಬಗ್ಗೆ ಮತ್ತು ಅಧ್ಯಯನ ಕ್ಷೇತ್ರದ ಸಂಬಳಗಳ ಬಗ್ಗೆ ಭ್ರಮನಿರಸನಗೊಂಡ ಅಥವಾ ಬೇಸರಗೊಂಡ, ಗೊತ್ತುಗುರಿಯಿಲ್ಲದೆ ಹಸ್ತಪ್ರತಿ ಸಂಗ್ರಹಿಸುವ ತಜ್ಞರಲ್ಲದವರನ್ನು ನಿಯಮಿತವಾಗಿ ನೇಮಿಸುತ್ತದೆ. ಒಂದು ವಿದ್ವತ್ತಿನ ಕಾರ್ಯಕ್ರಮಕ್ಕೆ ಹಸ್ತಪ್ರತಿ ಪಡೆಯಲು ಅಧ್ಯಯನ ಕ್ಷೇತ್ರದ ಅನುಭವ ನೆರವಾಗುತ್ತದೆ. ಏಕೆಂದರೆ ಯಾರಿಂದ ಹಸ್ತಪ್ರತಿಗಳನ್ನು ಪಡೆಯಲಾಗುತ್ತದೋ ಅಂತಹವರ ಕಣ್ಣಿನಲ್ಲಿ ಹಸ್ತಪ್ರತಿ ಸಂಗ್ರಾಹಕನ ಅಸ್ತಿತ್ವಕ್ಕೆ ಒಂದು ಅಸ್ಪಷ್ಟ ಮರ್ಯಾದೆ ದೊರೆಯುತ್ತದೆ. ವಿದ್ವಾಂಸರಿಗೆ ನೀವು ಪೂರ್ಣವಾಗಿ ಮನಸೋಲದೆಯೇ, ಅವರು ತಮ್ಮನ್ನು ತಾವೇ ಹೇಗೆ ಗಂಭೀರವಾಗಿ ಪರಿಗಣಿಸುತ್ತಾರೋ, ಅಂತಹ ಪರಿಗಣನೆಯಿಂದ ನೀವು ಸಾಕಷ್ಟು ನಿರ್ಲಿಪ್ತವಾಗಿದ್ದರೂ ನಿಮ್ಮ ಕೆಲಸಕ್ಕೆ ಬಹಳ ಸಹಾಯವಾಗುತ್ತದೆ. ಇದು ಹೇಗೋ ಇಂತಹ ಜನರ ಕಣ್ಣುಗಳಲ್ಲಿ ಇನ್ನೂ ಹೆಚ್ಚಿನ ಮರ್ಯಾದೆಯನ್ನು ಕೊಡುತ್ತದೆ. ಇದಕ್ಕೆ ಭಾಗಶಃ ಕಾರಣವೆಂದರೆ ಈ ವಿದ್ವಾಂಸರ ಕೃತಿಗಳ ಮೌಲ್ಯಮಾಪನ ಮಾಡುವಾಗ ಸಂಗ್ರಾಹಕ ತಟಸ್ಥನೂ, ನಿರಾಸಕ್ತನೂ ಆಗಿದ್ದಾನೆ ಎಂಬ ಸಮಸ್ಯಾಯುತ ಅಭಿಪ್ರಾಯ ಅವರಿಗೆ ಮುಟ್ಟುವುದೇ ಆಗಿದೆ. ಈ ಅಭಿಪ್ರಾಯ ಸಮಸ್ಯಾಯುತ ಏಕೆಂದರೆ,

ಹಸ್ತಪ್ರತಿ ಸಂಗ್ರಾಹಕನಿಗೆ, ಮೌಲ್ಯಮಾಪನವೆನ್ನುವುದು ಒಂದು ಹಸ್ತಪ್ರತಿಯ ಗಂಭೀರತೆ ಅಥವಾ ವಿದ್ವತ್ ಗುಣ ಅಥವಾ ಕಾಲ್ಪನಿಕ ಮೌಲ್ಯವನ್ನು ಸ್ಥಾಪಿಸುವುದಕ್ಕಿಂತಲೂ ಬಹಳ ಹೆಚ್ಚಿನದಾದ ಕಾರ್ಯವಾಗಿರುವುದೇ ಆಗಿದೆ. ಅದಕ್ಕೆ ಇತರ ಪರಿಗಣನೆಗಳೂ ಮಾನದಂಡಗಳೂ ಇವೆ ಹಾಗೂ ಇವುಗಳನ್ನು ನಾನು ಈ ಲೇಖನದ ಕೊನೆಯಲ್ಲಿ ವಿವರಿಸುತ್ತೇನೆ.

ಹಸ್ತಪ್ರತಿಗಳ ಮೌಲ್ಯಮಾಪನ ಮಾಡುವ ಸಂಗ್ರಾಹಕನ ಇಂತಹ ಸಾಮರ್ಥ್ಯದಿಂದ ಪ್ರಕಾಶನ ಸಂಸ್ಥೆ ಓದುಗರ ಶುಲ್ಕದ ರೂಪದಲ್ಲಿ ವೆಚ್ಚ ಮಾಡಬಹುದಾದ ಒಂದು ಸಣ್ಣ ಗಂಟೇ ಬಹುಶಃ ಉಳಿಯುತ್ತದೆ. ಇದಕ್ಕೂ ಮುಖ್ಯವಾದದ್ದೆಂದರೆ, ಇಂತಹ ಸಂಪಾದಕನೊಬ್ಬ ಇರುವುದರಿಂದ ಜೇನುನೊಣಗಳ ಹಿಂಡಿಗೆ ಪರಾಗವನ್ನು ತೋರಿಸುವ ಕೆಲಸವೂ ನಡೆಯುತ್ತದೆ. ಇದು ಯಾವಾಗಲೂ ಯಶಸ್ವಿಯಾಗುತ್ತದೆಂದಲ್ಲ ಅಥವಾ ವಿಫಲವಾಗದ ಕೃತಿಸಂಪಾದನಾ ಕಾರ್ಯ ತಂತ್ರವೆಂದು ಇದನ್ನು ಶಿಫಾರಸು ಮಾಡಬಹುದೆಂದೂ ಅಲ್ಲ. ಏಕೆಂದರೆ ಸಂಪಾದಕರಾಗಿ ಪರಿವರ್ತನೆಗೊಂಡ ಕವಿಗಳು ಮತ್ತು ವಿದ್ವಾಂಸರ ಒಂದು ಕೃತಿ, ಪಟ್ಟಿಯನ್ನು ಬೆಳೆಸುವುದರ ಬದಲು ಅದಕ್ಕೆ ಅಡ್ಡಿಯಾದ ಉದಾಹರಣೆಗಳು ಇವೆ. ಆಗ ಪ್ರಕಾಶನ ಸಂಸ್ಥೆಯ ಮಾಲೀಕ ಅಥವಾ ವ್ಯವಸ್ಥಾಪಕನಿಗೆ ಇದು ಸ್ಪಷ್ಟವಾಗಿ ಕಂಡಾಗ, ಕಾರ್ಯತಂತ್ರವನ್ನು ಕೈಬಿಡುವುದಕ್ಕಿಂತ ಆ ನಿರ್ದಿಷ್ಟ ವ್ಯಕ್ತಿಯನ್ನು ಬದಲಾಯಿಸುವುದೇ ಸರಿಯಾದ ಕ್ರಮವಾಗುತ್ತದೆ ಎಂಬುದು ಸುಸ್ಪಷ್ಟ. ಕೃತಿ ಹಸ್ತಪ್ರತಿ ಸಂಗ್ರಾಹಕ ತನ್ನ ಸ್ಥಾನದ ಔಚಿತ್ಯವನ್ನು ಮೀರಿ ಹೋಗುವುದೂ ಸಾಧ್ಯ. ಹಾಗಾದಾಗ ಲೇಖಕರಾಗುವ ಸಾಮರ್ಥ್ಯವಿರುವವರು ಅಂತಹ ವ್ಯಕ್ತಿಯಿಂದ ದೂರವಾಗುತ್ತಾರೆ. ಉದಾಹರಣೆಗೆ, ಟಿ.ಎಸ್. ಈಲಿಯಟ್ ಎಷ್ಟು ಅನರ್ಥಕಾರಕವಾಗಿ ಖ್ಯಾತರಾದರೆಂದರೆ ಸಾಮರ್ಥ್ಯವಿದ್ದ ಕವಿಗಳು ಫೇಬರ್ ಸಂಸ್ಥೆಗೆ ಹೋಗಲು ಹೆದರುತ್ತಿದ್ದರು. ಹೀಗಾಗಿ ಈಲಿಯಟ್ ಅವರಿಗೆ ಬಡತಿ ಕೊಟ್ಟು ಅವರನ್ನು ಸಂಸ್ಥೆಯ ನಿರ್ದೇಶಕರನ್ನಾಗಿ ಮಾಡಲಾಯಿತು. ಇದರಿಂದ ವಿಶ್ವದ ಇಂಗ್ಲಿಷ್ ಕವಿಗಳು ಸಾಮೂಹಿಕವಾಗಿ ಸಮಾಧಾನದ ನಿಟ್ಟುಸಿರನ್ನು ಬಿಡುವಂತಾಯಿತು. ಅವರುಗಳು ಬುಲ್ ಬುಲ್ ಹಕ್ಕಿಗಳು, ಬಾನಾಡಿಗಳು, ಮತ್ಸ್ಯಕನ್ಯೆಯರು ಮತ್ತು ಕಾಫಿ ಚಮಚಗಳ ಬಗ್ಗೆ ನಿಟ್ಟುಸಿರು ಬಿಡುವುದರ ಬದಲಾಗಿ ಹೀಗೆ ನಿಟ್ಟುಸಿರು ಬಿಡುವುದು ಸಾಧ್ಯವಾಯಿತು.

ಸಂಪಾದಕನ ಅಥವಾ ಹಸ್ತಪ್ರತಿ ಸಂಗ್ರಾಹಕನ ಕೆಲಸ ಏನು ಅಥವಾ ಏನಾಗಿರಬೇಕು ಎಂಬುದು ಪ್ರಕಾಶನದ ಎಲ್ಲ ವ್ಯವಹಾರವನ್ನೂ ತಿಳಿದುಕೊಂಡಿರುವುದಕ್ಕೆ ಸಮನಾದ್ದು. ಹೀಗೇಕೆ ಎಂದು ತಿಳಿದುಕೊಳ್ಳುವುದಕ್ಕೆ ಬಹಳ ಬುದ್ಧಿವಂತಿಕೆ ಬೇಕಿಲ್ಲ. ವ್ಯವಹಾರವನ್ನು ತರಬೇಕಾದ – ಅಂದರೆ ಹಸ್ತಪ್ರತಿಯೊಂದನ್ನು ತರಬೇಕಾದ – ವ್ಯಕ್ತಿ ಅದರಲ್ಲಿ ಬಂಡವಾಳ ಹೂಡಬೇಕಾದ್ದಕ್ಕೆ ಸಂಬಂಧಿಸಿದ್ದೆಲ್ಲವನ್ನೂ ಸರಿಯಾಗಿ ತಿಳಿದುಕೊಳ್ಳದಿದ್ದರೆ – ಎಂದರೆ ವಾಸ್ತವಿಕವಾಗಿ ಹಾಗೂ ಹಸ್ತಪ್ರತಿ ಪರಿಷ್ಕರಣೆಗೆ ಹಿಡಿಯುವ ಸಮಯ, ಮುದ್ರಣಕ್ಕೆ ತಗಲುವ

ಸಮಯ, ಟೈಪ್‌ಸೆಟ್ಟಿಂಗ್, ಕಾಗದ, ಬೈಂಡಿಂಗ್ ಇತ್ಯಾದಿಗಳಿಗೆ ತಗಲುವ ವೆಚ್ಚ, ತನ್ನ ಸ್ವಂತ ಸಂಸ್ಥೆಯ ಮಾರುಕಟ್ಟೆ ಬಲಗಳು ಮತ್ತು ಮಿತಿಗಳು, ತನ್ನ ಸಂಸ್ಥೆ ಮಾರುಕಟ್ಟೆ ಬಗ್ಗೆ ಹೊಂದಿರುವ ವಿಚಾರಗಳು ಹಾಗೂ ಹಸ್ತಪ್ರತಿ ಪುಸ್ತಕವಾದಾಗ ಮಾರುಕಟ್ಟೆಯಲ್ಲಿ ಅದಕ್ಕೆ ದೊರೆಯಬಹುದಾದ ಪ್ರತಿಕ್ರಿಯೆ – ಹಸ್ತಪ್ರತಿ ಸಂಗ್ರಾಹಕನಾಗಿ ಆತ ಪರಿಣಾಮಕಾರಿಯಾಗಿ ಕೆಲಸ ಮಾಡುವುದು ಅಸಂಭವ. 'ಬಂಡವಾಳ ಹೂಡಿಕೆ' ಎನ್ನುವ ಪದಗಳನ್ನು ನಾನು ಅವುಗಳ ಅತ್ಯಂತ ವಿಶಾಲವಾದ ಅರ್ಥದಲ್ಲಿ ಬಳಸುತ್ತಿದ್ದೇನೆ. ಬಂಡವಾಳ ಹೂಡಿಕೆಯಿಂದ ಬರುವ ಐಹಿಕ ಪ್ರತಿಫಲ ಅಲ್ಪವೇ ಆಗಿದ್ದರೂ, ಇದರಲ್ಲಿ ಕೇವಲ ಮುದ್ರಣದ ವೆಚ್ಚಗಳು ಮಾತ್ರವಲ್ಲದೆ, ಒಂದು ಪುಸ್ತಕದ ಒಟ್ಟಾರೆ ಮೌಲ್ಯ ಅಥವಾ ಒಬ್ಬ ಪ್ರಕಾಶಕನ ಪಟ್ಟಿಗೆ ಒಬ್ಬ ಲೇಖಕನ ಮೌಲ್ಯವೂ ಸೇರಿದೆ. ಫೇಬರ್ ಸಂಸ್ಥೆಯನ್ನೇ ಪುನಃ ಒಂದು ಉದಾಹರಣೆಯನ್ನಾಗಿ ತೆಗೆದುಕೊಂಡರೆ, ಫಸ್ಟ್ ಫಿಕ್ಷನ್ಸ್ ಎಂಬ ಸರಣಿಯನ್ನು ಅವರು ಹೊಂದಿದ್ದಾರೆ; ಅದರಲ್ಲಿ ಅಪರಿಚಿತ ಲೇಖಕರ ಸಣ್ಣ ಕಥೆಗಳಿರುತ್ತವೆ. ಅವರು ಈ ಸರಣಿಯಲ್ಲಿ ಏಕೆ ಹಣ ಹಾಕುತ್ತಾರೆಂದರೆ, ಅವುಗಳ ಮಾರಾಟ ಅದ್ಭುತವಾಗಿ ಆಗದೆ ಹೋದರೂ, ಇಂತಹ ಪ್ರಯತ್ನ ಒಂದು ಪರಿಣಾಮಕಾರಿ ಹಸ್ತಪ್ರತಿ ಸಂಗ್ರಹ ಕಾರ್ಯತಂತ್ರವಾಗಿದೆ, ಭರವಸೆ ಮೂಡಿಸುವ ಒಬ್ಬ ಅಪರಿಚಿತ ಲೇಖಕನ ಕೃತಿಯನ್ನು ಪ್ರಕಟಿಸುವುದರಿಂದ ಆ ಅಪರಿಚಿತ ಲೇಖಕ ಕಾದಂಬರಿಯೊಂದನ್ನು ಬರೆದಾಗ – ಅದು ಬಹಳ ಸಂಭವನೀಯ – ತನ್ನ ಕೃತಿಯನ್ನು ಫೇಬರ್ ಪ್ರಕಟಿಸಬೇಕೆಂದು ಇಚ್ಛಿಸುವುದನ್ನು ಖಚಿತಪಡಿಸಿಕೊಂಡಂತಾಗುತ್ತದೆ. ಹೀಗೆ ಅಷ್ಟೇನೂ ಖ್ಯಾತಿ ಹೊಂದಿರದಿದ್ದ, ಆದರೆ ನಂತರ ಪ್ರಖ್ಯಾತರಾದ ಸಣ್ಣ ಕತೆಗಳ ಇಬ್ಬರು ಲೇಖಕರೆಂದರೆ ಟೆಡ್ ಹ್ಯೂಜ್ಸ್ ಮತ್ತು ಕಾಜುವೊ ಇಶಿಗುರೊ.

ಈ ಹಸ್ತಪ್ರತಿ ಸಂಗ್ರಹಣಾ ಕಾರ್ಯತಂತ್ರದಲ್ಲೂ ಅದರದೇ ಆದ ಅಪಾಯಗಳಿವೆ. ಉದಾಹರಣೆಗೆ, ನಮ್ಮ ಪರಿಸ್ಥಿತಿಯಲ್ಲೇ, ಪ್ರಕಾಶಕರು ಮೇಲಿಂದ ಮೇಲೆ ಗುಣಾವಗುಣಗಳನ್ನು ಗಮನಿಸುವ ಪ್ರಯತ್ನ ಮಾಡದೆಯೇ ಕಾವ್ಯವನ್ನೋ, ಕಾಲ್ಪನಿಕ ಕೃತಿಗಳನ್ನೋ ಅಥವಾ ವ್ಯಾಸಂಗದ ಕೃತಿಗಳನ್ನೋ ಪ್ರಕಟಣೆಗೆ ತೆಗೆದುಕೊಳ್ಳಲು ಸಿದ್ಧರಿರುವಂತೆ ತೋರುತ್ತದೆ. ಒಬ್ಬ ಸಾಹಿತಿಯನ್ನು ಬಲೆಗೆ ಹಾಕಿಕೊಂಡಿದ್ದೇವೆ ಎಂದೋ, ಇತರ ಲೇಖಕರನ್ನು ಸೆಳೆಯಲು ನೆರವಾಗುವಂತಹ ಒಂದು ರೀತಿಯ ಪಟ್ಟಿಯನ್ನು ತಯಾರಿಸಿದೆವೆಂತಲೋ, ಒಂದು ಆಸೆಯಿಂದ ಪ್ರಕಾಶಕರು ಹೀಗೆ ಮಾಡುತ್ತಾರೆ. ಕನಿಷ್ಠ ಎರಡು ದೃಷ್ಟಿಗಳಿಂದ ಇದು ಪ್ರೋತ್ಸಾಹದಾಯಕ – ಜನರು ಬರೆಯುವಂತೆ ಮಾಡುವ ಮತ್ತು ತಮ್ಮ ಬುದ್ಧಿಗಳನ್ನು ಬಳಸಲು ಪ್ರಯತ್ನಿಸುವಂತೆ ಮಾಡುವ ಸಂಸ್ಕೃತಿಯನ್ನು ಬೆಳೆಸಲು ಅದು ಪ್ರೋತ್ಸಾಹಿಸುತ್ತದೆ; ಇದು ಸಾಮಾನ್ಯವಾಗಿ ಪ್ರೋತ್ಸಾಹಿಸಬೇಕಾದ ಒಂದು ಒಳ್ಳೆಯ ಕೆಲಸವೇ ಆಗಿದೆ; ಇದು ಇನ್ನೊಂದು ದೃಷ್ಟಿಯಲ್ಲಿ ಹೇಗೆ ಪ್ರೋತ್ಸಾಹದಾಯಕವೆಂದರೆ ಭಾರತೀಯ ಪ್ರಕಾಶಕರು ಸಾಮಾನ್ಯವಾಗಿ ಚುರುಕು ಬುದ್ಧಿಯವರು, ವ್ಯವಹಾರ ನಿಪುಣರು; ಆದ್ದರಿಂದ ಕೇವಲ ಎರಡನೆಯ ಮತ್ತು ಮೂರನೆಯ ಕೃತಿ ದೊರೆಯುತ್ತದೆಂಬ ಆಸೆಯಿಂದ

ಮಾತ್ರ ಅವರು ಮೊದಲನೆಯ ಕೃತಿಯಲ್ಲಿ ಬಂಡವಾಳ ಹಾಕುವ ಸಂಭವವಿಲ್ಲ. ಕನಿಷ್ಠ ತಾವು ಪುಸ್ತಕಕ್ಕೆ ಹಾಕಿದ ಹಣ ಹಿಂತಿರುಗಿ ಬರುವಂತಿದ್ದರೆ ಅವರು ಹಣ ಹಾಕುವ ಸಂಭವ ಹೆಚ್ಚು. ಮುದ್ರಣ ವೆಚ್ಚವನ್ನು ಅಥವಾ ಅದರ ಒಂದು ಭಾಗವನ್ನು ಲೇಖಕ ಭರಿಸುವಂತೆ ಮಾಡುವುದರಿಂದ ಅಥವಾ ಲೇಖಕನಿಗೆ ಗೌರವ ಧನವನ್ನು ಕೊಡದೆ ಮೋಸ ಮಾಡುವುದರಿಂದ ಕೆಲವೊಮ್ಮೆ ಕೃತಿಯನ್ನು ಪ್ರಕಟಿಸಲಾಗುವುದಾದರೂ ಸಾಮಾನ್ಯವಾಗಿ ಹಸ್ತಪ್ರತಿ ಸಂಗ್ರಹಣೆ ಮತ್ತು ಮುದ್ರಣಕ್ಕೆ ಆದ ವೆಚ್ಚವನ್ನು ಸಮರ್ಥಿಸಿಕೊಳ್ಳುವಷ್ಟರ ಮಟ್ಟಿಗೆ ಮಾರಾಟವಾಗುತ್ತದೆ ಎಂಬ ತಿಳಿವಳಿಕೆಯಿಂದ ಕೃತಿ ಪ್ರಕಟಣೆ ಕೈಗೊಳ್ಳಲಾಗುವುದು. ಆದರೆ ಇತರ ಮತ್ತು ಇನ್ನೂ ಮೂಲಭೂತವಾದ ದೃಷ್ಟಿಗಳಿಂದ ನೋಡಿದಾಗ, ಭವಿಷ್ಯದಲ್ಲಿ ಇನ್ನಷ್ಟು ಒಳ್ಳೆಯದಾಗಬಹುದು ಎಂಬ ಆಸೆಯಿಂದ ಎರಡನೆ ದರ್ಜೆಯ ಕೃತಿಗಳನ್ನು ಪ್ರಕಟಿಸುವುದು ವಿವೇಕವಲ್ಲ. ಸಾಮಾನ್ಯವಾಗಿ ಗೌರವಾನ್ವಿತವಾದ ಪಟ್ಟಿಯಲ್ಲಿ ಕೆಲವೇ ಎರಡನೆ ದರ್ಜೆಯ ಕೃತಿಗಳು ಪ್ರಕಟವಾದರೆ ಗುಣಾವಗುಣಗಳನ್ನು ತೂಗಿ ನೋಡುವ ಓದುಗರ ದೃಷ್ಟಿಯಲ್ಲಿ ಆ ಇಡೀ ಪಟ್ಟಿ ಕಳೆಗುಂದುತ್ತದೆ ಮತ್ತು ದೂಷಿತವಾಗುತ್ತದೆ. ಸಂಸ್ಥೆಗೆ ಪ್ರತಿಷ್ಠೆ ಮತ್ತು ಗೌರವ ಮುಖ್ಯವಾಗಿದ್ದರೆ – ಭಾರತದಲ್ಲಿ ಇದು ಬಹಳ ವಿರಳ – ಮಾರಾಟದ ಪ್ರಮಾಣಕ್ಕಿಂತಲೂ ವಸ್ತುವಿನ ಗುಣಕ್ಕೆ ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ಒತ್ತು ನೀಡಲಾಗುತ್ತದೆ. ಹೀಗೆ ಒತ್ತು ನೀಡುವುದಾದರೆ, ಹಸ್ತಪ್ರತಿ ಸಂಪಾದಕ ಕೀಳು ಅಭಿರುಚಿಯ ಪುಸ್ತಕಗಳ ಬೇಡಿಕೆಯನ್ನು ಮುಂದಿಡುವ ಮಾರುಕಟ್ಟೆಯ ಸತತ ಒತ್ತಡಗಳನ್ನು ವಿರೋಧಿಸಬೇಕಾಗುತ್ತದೆ. *ಸ್ಟಾರ್‌ಡಸ್ಟ್*‌ನಲ್ಲಿ ಪ್ರಕಟಿಸಬೇಕಾದ ಇಂತಹ ವಸ್ತು ತೆಳು ರಕ್ಷಾಕವಚವನ್ನು ಹೊಂದಿದ ಪುಸ್ತಕದ ರೂಪದಲ್ಲಿ ಅಲಂಕೃತಗೊಳ್ಳುತ್ತದೆ. ಪ್ರತಿಯೊಂದು ಆಧುನಿಕ ಸಮಾಜದಲ್ಲಿರುವಂತೆ, ಕೀಳು ಅಭಿರುಚಿಯ ಪುಸ್ತಕಗಳಿಗೆ ಬೇಡಿಕೆ ಇದೆ ಎನ್ನುವುದರಲ್ಲಿ ಅನುಮಾನವಿಲ್ಲ. ಉದ್ರೇಕಗೊಳಿಸುವ ಪತ್ರಿಕೋದ್ಯಮ ಮತ್ತು ಕಾದಂಬರಿಗಳ ರಚನೆ ಭಾರತದಲ್ಲಿ ಗಳಿಸಿರುವ ಅಪಾರ ಯಶಸ್ಸು ಹಾಗೂ ವ್ಯಾಸಂಗಕ್ಕೆ ಸಂಬಂಧಿಸಿದ ಕಳಪೆ ಕೃತಿಗಳು ಸುಲಭವಾಗಿ ಪ್ರಕಟಗೊಂಡು ಭಾರತೀಯ ಗ್ರಂಥಾಲಯಗಳಿಗೆ ನುಸುಳುವುದರಲ್ಲಿ ಗಳಿಸುವ ಯಶಸ್ಸು, ಹಸ್ತಪ್ರತಿಗಳನ್ನು ಸಂಗ್ರಹಿಸುವುದು ಮತ್ತು ಪ್ರಕಾಶನ ವ್ಯವಹಾರವನ್ನು ಹೆಚ್ಚಿಸುವುದು ಬಹಳ ಯಶಸ್ವಿಯಾದ ಆದರೆ ಗುಣಾವಗುಣಗಳನ್ನು ಲೆಕ್ಕಿಸದ ವ್ಯವಹಾರವಾಗಿದೆ ಎಂಬುದನ್ನು ತೋರಿಸುತ್ತದೆ. ಒಂದು ದೃಷ್ಟಿಯಲ್ಲಿ ಜನರು ಬರೆವಣಿಗೆಯಲ್ಲಿ ತೊಡಗುವಂತಹ ಸಂಸ್ಕೃತಿಯೊಂದನ್ನು ಪ್ರೋತ್ಸಾಹಿಸುವುದು ಅಪೇಕ್ಷಣೀಯವಾದರೂ, ಎಲ್ಲ ರೀತಿಯ ಪದ್ಯ ಮತ್ತು ಗದ್ಯಗಳಿಗೆ ಸ್ಥಳ ಮತ್ತು ಮಾರುಕಟ್ಟೆ ಲಭ್ಯವಿದ್ದರೆ ಇನ್ನೂ ಹೆಚ್ಚಿನ ಅಮಿತಾವ್ ಘೋಷ್‌ಗಳು ಮತ್ತು ವಿಕ್ರಮ್ ಸೇಠ್‌ಗಳು ಕಾಣಿಸಿಕೊಳ್ಳುವ ಸಂಭವವಿದೆ ಎಂಬುದು ನಿಜವಾದರೂ, ಭಾರತದಲ್ಲಿನ ಪ್ರವೃತ್ತಿಯಂತೆ ಪ್ರಕಾಶನ ವ್ಯವಹಾರ ವಿವೇಚನಾರಹಿತ ವ್ಯವಹಾರವಾಗಿರಬೇಕೆಂದೇನೂ ಇಲ್ಲ. ಒಂದು ಪುಸ್ತಕ

ಮಾರಾಟವಾಗುತ್ತದೆ ಎಂಬುದೇ ಅದನ್ನು ಪ್ರಕಟಿಸುವುದಕ್ಕೆ ಸಾಕಷ್ಟು ಕಾರಣವಲ್ಲ. ಇದು, ನಾನು ಹಿಂದೆ ಹೇಳಿದಂತೆ, ಒಂದು ನೈತಿಕ ವಾದ. ಇದು ನೈತಿಕ ವಾದ ಏಕೆಂದರೆ ಜನರನ್ನು ಮೂಲಭೂತವಾದ ದೃಷ್ಟಿಯಲ್ಲಿ ರೂಪಿಸುವ ವಸ್ತುಗಳಲ್ಲಿ ನಾವು ವ್ಯವಹಾರ ಮಾಡುತ್ತಿದ್ದೇವೆ. ಪ್ರಕಾಶನ ವ್ಯವಹಾರದಲ್ಲಿ ನೈತಿಕತೆ, ಸಿದ್ಧಾಂತ ಮತ್ತು ವ್ಯಾಪಾರ ಮೂರೂ ಅವಿಭಾಜ್ಯ ಸಂಬಂಧ ಹೊಂದಿವೆ. ಆದ್ದರಿಂದ ಪ್ರಕಾಶನ ಸಂಸ್ಥೆಯ ಹಸ್ತಪ್ರತಿ ಸಂಗ್ರಾಹಕ ಅತ್ಯಂತ ತಿಳಿವಳಿಕೆಯ ಮಾರಾಟ ವ್ಯಕ್ತಿಯಾಗಿರಬೇಕು ಅಂದರೆ ಪುಸ್ತಕಗಳಿಗೆ ಯಾವ ರೀತಿಯ ಮಾರುಕಟ್ಟೆ ಇದೆ ಎಂದು ತಿಳಿದ ವ್ಯವಹಾರ ಜಾಣ್ಮೆಯವನಾಗಿರಬೇಕು ಹಾಗೂ ಅವನ ಪುಸ್ತಕಗಳು ಎಷ್ಟು ಚೆನ್ನಾಗಿ ಮಾರಾಟವಾಗುತ್ತವೆ ಎಂಬುದರ ಮೇಲೆ ಅವನ ಯಶಸ್ಸನ್ನು ಅಳೆಯಲಾಗುತ್ತದೋ ಅಂತಹ ವ್ಯಕ್ತಿಯಾಗಿರಬೇಕು ಎಂದು ವಾದಿಸುವುದು ದಡ್ಡತನವೂ ಹೌದು, ಅನೈತಿಕವೂ ಹೌದು. ಪುಸ್ತಕಗಳ ಪ್ರಕಾಶನದ ತತ್ವ ನಿರ್ದಿಷ್ಟವಾಗಿ ಏನೆಂದರೆ ಅಥವಾ ಏನಾಗಿರಬೇಕೆಂದರೆ, ಒಂದು ಸಂಸ್ಕೃತಿಯಲ್ಲಿ ವಿಚಾರದ ಪ್ರಕ್ರಿಯೆಗಳನ್ನು ಮತ್ತು ಭಾವನಾ ತರಂಗಗಳನ್ನು ಹೀನಾಯಗೊಳಿಸಿ ಕೆಳದರ್ಜೆಗೆ ಎಳೆಯುವಂತಹ ವಸ್ತುಗಳನ್ನು ತಯಾರಿಸಿ ಮಾರುವ ಚಟುವಟಿಕೆಗಳಿಗಿಂತ ಭಿನ್ನವಾದ್ದು ಎಂದು ಪ್ರಕಾಶನವನ್ನು ಗುರುತಿಸುವ ಚಟುವಟಿಕೆಯಾಗಿರಬೇಕು. ಹಸ್ತಪ್ರತಿ ಸಂಗ್ರಹ ಕಾರ್ಯ, ಹಣವನ್ನು ಬಾಚಿಕೊಳ್ಳುವುದೇ ಮುಖ್ಯ ಗುರಿಯಾದ ಕೀಳು ಮಟ್ಟದ ವ್ಯವಹಾರಕ್ಕೆ ಇಳಿಯುವುದಾದರೆ ನಾವೆಲ್ಲರೂ ತೆಳುವಾದ ವೇಷ ತೊಟ್ಟ ಗೊಡ್ಡು ಬರೆವಣಿಗೆಯನ್ನೋ ಅಥವಾ ಹೆಂಗಸರು ಸದಾ ಅಸಹಾಯಕರೂ, ಅಪೇಕ್ಷಣೀಯರೂ, ತಾವು ಆರಾಧಿಸುವ ಪುರುಷಶ್ರೇಷ್ಠರ ವಶವಾಗಲು ಹಾತೊರೆಯುವವರೂ ಆಗಿರುವಂತಹ ಲಘು ಅಶ್ಲೀಲ ಸಾಹಿತ್ಯವನ್ನೋ ಪ್ರಕಟಿಸುವ ವ್ಯವಹಾರಕ್ಕೆ ತೊಡಗುವುದೇ ಸರಿಯಾಗಬಹುದು.

ಇಲ್ಲೇ ಯುಕ್ತಾಯುಕ್ತ ವಿವೇಚನೆ ಮತ್ತು ಮೌಲ್ಯಮಾಪನ – ಯಾವುದನ್ನು ನೈತಿಕ, ಸಾಂಸ್ಕೃತಿಕ ಮತ್ತು ಸೈದ್ಧಾಂತಿಕ ಕಾರ್ಯ ಎಂದು ಗುರುತಿಸಲಾಗಿದೆಯೋ ಅದು – ಹಸ್ತಪ್ರತಿ ಸಂಗ್ರಹ ಕಾರ್ಯದ ವ್ಯವಹಾರ ಅಂಶದೊಂದಿಗೆ ಕೀಳಲಾಗದಂತೆ ಬೆರೆಯುತ್ತದೆ. ನೀವು ಪುಸ್ತಕಗಳ ವ್ಯವಹಾರದಲ್ಲಿದ್ದರೆ, ಕೇವಲ ಒಂದು ಮಾರುಕಟ್ಟೆಯ 'ಲಾಭ' ಪಡೆಯುವುದರ ಬದಲಿಗೆ ಅದನ್ನು ರೂಪಿಸಿ ನಿರ್ಮಿಸುವುದು ನಿಮ್ಮ ವ್ಯವಹಾರದ ಒಂದು ಅಂಶವಾಗಬೇಕು. ಯಾವುದು ಮೊದಲೇ ಇದೆಯೆಂದು ಭಾವಿಸಲಾಗಿದೆಯೋ ಅದರ 'ಲಾಭ' ಪಡೆಯುವುದಕ್ಕೂ 'ಇಲ್ಲದೆ ಇರುವ' ಮಾರುಕಟ್ಟೆಯನ್ನು ಸೃಷ್ಟಿಸುವುದಕ್ಕೂ ಅಥವಾ ರೂಪಿಸುವುದಕ್ಕೂ ನಡುವಣ ವ್ಯತ್ಯಾಸವನ್ನು ಮಾರಾಟದ ಜನರು ಬಹಳ ಸರಾಗವಾಗಿ ಮಾಡುತ್ತಾರೆ. ಆದರೆ ವಾಸ್ತವವಾಗಿ ಇಂತಹ ವ್ಯತ್ಯಾಸ, ಸಾಂಸ್ಕೃತಿಕ ಅಧ್ಯಯನಗಳ ವಿದ್ಯಾರ್ಥಿಗಳಿಗೆ ತಿಳಿದಿರುವಂತೆ, ಸಂಪೂರ್ಣವಾಗಿ ದೋಷಯುಕ್ತವಾದದ್ದು. ಗೊಡ್ಡು ಬರೆವಣಿಗೆ ಅಥವಾ ಲಘು ಅಶ್ಲೀಲ ಸಾಹಿತ್ಯಕ್ಕೆ ಮೊದಲೇ ಇರುವ ಮಾರುಕಟ್ಟೆಯ 'ಲಾಭ'ವನ್ನು

ಜನರು ಪಡೆಯುತ್ತಿದ್ದಾರೆ ಎಂದು ತೋರಿದಾಗ ಅವರು ಅದೇ ಕಾಲಕ್ಕೆ ಆ ಮಾರುಕಟ್ಟೆಯಲ್ಲಿ ಒಂದು ನಿರ್ದಿಷ್ಟ ಪ್ರವೃತ್ತಿಯನ್ನು ಮತ್ತು ಒಂದು ನಿರ್ದಿಷ್ಟ ದಿಸೆಯನ್ನು ರೂಪಿಸುತ್ತಿದ್ದಾರೆ, ಸೃಷ್ಟಿಸುತ್ತಿದ್ದಾರೆ, ಬಲಗೊಳಿಸುತ್ತಿದ್ದಾರೆ ಮತ್ತು ಶಕ್ತಿ ವರ್ಧಿಸುತ್ತಿದ್ದಾರೆ. ಅಡ್ಡಿ ಅಡಚಣೆಗಳಿದ್ದರೂ, ಅವರು ಇರಬೇಕಾದ ಮಾರುಕಟ್ಟೆಯನ್ನು 'ಸೃಷ್ಟಿಸಲು' ಪುಸ್ತಕಗಳನ್ನು ಪ್ರಕಟಿಸಿದರೆ, ಅವರು ಒಂದು ಸಾಮರ್ಥ್ಯದ ಲಾಭ ಗಳಿಸಲೂ, ಸಣ್ಣದಾದರೂ ಪ್ರಶಂಸಾರ್ಹ ರೀತಿಯಲ್ಲಿ ಒಂದು ಸಂಸ್ಕೃತಿಯನ್ನು ರೂಪಿಸಲು ಪ್ರಯತ್ನಿಸುವ ಸಲುವಾಗಿಯೂ ಪ್ರಕಟಿಸುತ್ತಿದ್ದಾರೆ. ಮಾರುಕಟ್ಟೆಯ 'ಲಾಭ' ಪಡೆಯುವುದು ಎಂಬ ಹಣೆಪಟ್ಟಿ ಪಡೆದ ಹಸ್ತಪ್ರತಿ ಸಂಗ್ರಹಣಾ ಕೆಲಸ, ಪ್ರಕಾಶನ ಕಾರ್ಯ ಒಂದು ವ್ಯವಹಾರಕ್ಕಿಂತಲೂ ಉತ್ತಮವಾಗಿರಬೇಕೆಂಬುದನ್ನು ಕಾಣದೆ ಇರುವ ಜನರ ಕಣ್ಣುಗಳಲ್ಲಿ ಸದಾ ದೋಷಯುಕ್ತವಾಗಿರುತ್ತದೆ. ಅಧಿಕ ಮಾರಾಟ, ಅಧಿಕ ವಹಿವಾಟು, ಅಧಿಕ ಲಾಭ ಇವಷ್ಟನ್ನೇ ಅವರು ನೋಡುತ್ತಾರೆ. ಆದರೆ 'ಸೃಜನಾತ್ಮಕ' ಎಂಬ ಹಣೆಪಟ್ಟಿಯನ್ನು ಪಡೆದ ಹಸ್ತಪ್ರತಿ ಸಂಗ್ರಹ ಕಾರ್ಯ ಅನೇಕ ರೀತಿಯಲ್ಲಿ ಫಲಪ್ರದವಾಗಬಲ್ಲದು. ಅದು – ಬಹುಶಃ ನಿಧಾನವಾಗಿ ಮತ್ತು ದೀರ್ಘಾವಧಿಯಲ್ಲಿ – ಯುಕ್ತಾಯುಕ್ತ ವಿವೇಚನೆಯಿಂದ ಮಾಡುವ ಪ್ರಕಾಶನ ಕಾರ್ಯದಲ್ಲಿ ಹೂಡಿದ ಹಣಕ್ಕೆ ಪ್ರತಿಫಲವನ್ನೂ, ಹೆಚ್ಚು ಸದಭಿರುಚಿಯ, ಬೌದ್ಧಿಕ ಮತ್ತು ಭಾವನಾತ್ಮಕ ತೃಪ್ತಿಯನ್ನೂ ಪಡೆಯುವುದರ ಜೊತೆಗೆ ಯುಕ್ತಾಯುಕ್ತ ವಿವೇಚನೆಯುಳ್ಳ ಹಸ್ತಪ್ರತಿ ಸಂಗ್ರಾಹಕನ ಕಣ್ಣುಗಳಲ್ಲಿ ಹಾಗೂ ವಿಚಾರ ಮಾಡುವ, ಪುಸ್ತಕ ಓದುವ ಸಾರ್ವಜನಿಕರ ಕಣ್ಣುಗಳಲ್ಲಿ ಸ್ವಲ್ಪಮಟ್ಟಿನ ಆದರೆ ನಿಸ್ಸಂದಿಗ್ಧವಾಗಿ ಪ್ರಶಂಸನೀಯ ರೀತಿಯಲ್ಲಿ ತನ್ನ ಸಂಸ್ಕೃತಿಯನ್ನು ಸುಧಾರಿಸಬಲ್ಲಂತಹ ಓದುಗಾರಿಕೆಯನ್ನು ನಿರ್ಮಿಸಲು ನೆರವಾಗಬಲ್ಲದು.

ನಾನು ಇದುವರೆಗೆ ಹೇಳಲು ಪ್ರಯತ್ನಿಸಿರುವುದೇನೆಂದರೆ ಮೊದಲಿಗೆ, ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ಸಾಮಾನ್ಯವಾಗಿ ಏನು ಒಳಗೊಂಡಿರುತ್ತದೆಂಬುದನ್ನು ಸೂಚಿಸುವುದೇ ಆಗಿದೆ. ಒಂದು ಕಡೆ ನೈತಿಕತೆ ಮತ್ತು ಸಾಂಸ್ಕೃತಿಕ ಸಂವೇದನೆ ಇವೆರಡರ ಅಪೇಕ್ಷಣೀಯತೆ ಹಾಗೂ ಇನ್ನೊಂದು ಕಡೆ ವ್ಯಾಪಾರದಲ್ಲಿ ನಿಪುಣತೆ. ಇವುಗಳಿಂದ ಹಸ್ತಪ್ರತಿ ಸಂಗ್ರಹಕಾರ್ಯ ಪರಿಣಾಮಕಾರಿಯಾಗುವುದೇ ಅಲ್ಲದೆ ಗೌರವಾನ್ವಿತವೂ ಆಗುತ್ತದೆ. ಈಗ ನಾನು ನಮ್ಮದೇ ಸಂಸ್ಕೃತಿಯಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸುವ ಮತ್ತು ಅವುಗಳ ಮೌಲ್ಯಮಾಪನ ಮಾಡುವ ವ್ಯವಹಾರದಲ್ಲಿ ಇರುವ ಇನ್ನೂ ಕಠಿಣವಾದ ಸಮಸ್ಯೆಗಳನ್ನು ಪ್ರಸ್ತಾಪಿಸುತ್ತೇನೆ.

ಮಾರಾಟಯೋಗ್ಯ ಪುಸ್ತಕಗಳಾಗಬಹುದಾದ ಕೃತಿಗಳಿಗೆ ಪ್ರಕಾಶಕರಲ್ಲಿ ಸ್ಪರ್ಧೆ ಇರುವಂತಹ ಆರ್ಥಿಕತೆಯಲ್ಲಿ, ಉತ್ತಮ ಕೃತಿಗಳ ಕೊರತೆ ಮತ್ತು ಅವುಗಳ ಬೆನ್ನಟ್ಟಿ ಹೋಗುವ ಪ್ರಕಾಶಕರ ಸಂಖ್ಯೆಯ ಪ್ರಮಾಣಕ್ಕೆ ತಕ್ಕಂತೆ ಹಸ್ತಪ್ರತಿ ಸಂಗ್ರಹಕಾರ್ಯ ಬಿರುಸಿನದೂ, ಹುರುಪಿನದೂ ಆಗಿರುತ್ತದೆ. ಭಾರತದಲ್ಲಿ ಅತ್ಯಂತ ತೀವ್ರವಾದ ಸ್ಪರ್ಧೆ ಶಾಲೆ ಮತ್ತು ಕಾಲೇಜು ಪಠ್ಯಪುಸ್ತಕಗಳ ಕ್ಷೇತ್ರಗಳಲ್ಲಿದೆ. ಏಕೆಂದರೆ ಕಡಿಮೆ ಬೆಲೆಗಳಲ್ಲಿ

ಕಡಿಮೆ `ಯೋಗ್ಯತೆಯ ಪುಸ್ತಕಗಳನ್ನು ಜನರು ಬಲವಂತವಾಗಿ ಕೊಳ್ಳುವಂತೆ ಮಾಡುವ ಸರ್ಕಾರಿ ಪ್ರಕಾಶನದ ಉಸಿರು ಕಟ್ಟಿಸುವ ವಾತಾವರಣವಿದ್ದರೂ, ಖಾಸಗಿ ಪ್ರಕಾಶಕರು ಹೆಚ್ಚಿನ ಹಣವನ್ನು ಪಠ್ಯಪುಸ್ತಕ ಮಾರುಕಟ್ಟೆಯಲ್ಲೇ ಗಳಿಸಬೇಕಾಗಿದೆ. ಈ ಕ್ಷೇತ್ರದಲ್ಲಿ ಹಸ್ತಪ್ರತಿ ಸಂಗ್ರಹಿಸುವುದೆಂದರೆ ಮೊದಲಿಗೆ ಅನೇಕ ಪಠ್ಯವಿಷಯಗಳು, ಪರೀಕ್ಷೆಗಳಲ್ಲಿ ನಿರೀಕ್ಷಿಸಲಾಗುವ ಉತ್ತರಗಳ ಮಟ್ಟಗಳನ್ನು ಕೂಲಂಕಷವಾಗಿ ತಿಳಿದುಕೊಂಡಿರಬೇಕಾಗುತ್ತದೆ. ಏಕೆಂದರೆ ಈ ಅಗತ್ಯಗಳಿಗೆ ತಕ್ಕಂತೆ ಪಠ್ಯಪುಸ್ತಕಗಳನ್ನು ಹೊರತರಬೇಕಾಗುತ್ತದೆ. ಎರಡನೆಯದಾಗಿ, ಈ ಪುಸ್ತಕಗಳನ್ನು ಬರೆಯುವ ಪ್ರಮುಖ ಶಾಲೆಗಳು ಮತ್ತು ಕಾಲೇಜುಗಳಲ್ಲಿರುವ ಅನುಭವಿ ಮತ್ತು ಗೌರವಾನ್ವಿತ ಲೇಖಕರ ಪರಿಚಯ ಹೊಂದಿರಬೇಕಾಗುತ್ತದೆ. ಈ ಕ್ಷೇತ್ರದಲ್ಲಿ ದೊಡ್ಡ ಸಂಖ್ಯೆಯಲ್ಲಿರುವ ಹೆಚ್ಚು ನೀತಿಗೆಟ್ಟ ಪ್ರಕಾಶಕರು ಅನೇಕ ಸಲ ಅಂತಹ ಪಠ್ಯಪುಸ್ತಕಗಳಿಗೆ ಸಹ ಲೇಖಕರಾಗುವಂತೆ ಸಂಬಂಧಪಟ್ಟ ಪರೀಕ್ಷಾ ಮಂಡಳಿಯಿಂದ ಯಾರನ್ನಾದರೂ ಸೆಳೆದುಕೊಳ್ಳುತ್ತಾರೆ. ಆ ಪಠ್ಯಪುಸ್ತಕವನ್ನು ಅಧಿಕೃತವಾಗಿ ಶಿಫಾರಸ್ಸು ಮಾಡಲು ಅಥವಾ ನಿಗದಿ ಮಾಡಲು ಪರೀಕ್ಷಾ ಮಂಡಳಿಯ ಈ ಸದಸ್ಯನಿಗೆ ಸಾಮಾನ್ಯವಾಗಿ ರಾಯಲ್ಟಿಯ ರೂಪದಲ್ಲೋ, ಹೆಂಡತಿ ಮತ್ತು ಕುಟುಂಬದ ಸಮೇತ ಗೋವೆಯಲ್ಲಿ ರಜಾದಿನಗಳನ್ನು ಕಳೆಯುವ ಸೌಲಭ್ಯದ ರೂಪದಲ್ಲೋ ಲಂಚವನ್ನು ಕೊಡಲಾಗುತ್ತದೆ. ಆದ್ದರಿಂದ ಪಠ್ಯಪುಸ್ತಕಗಳಿಗೆ ಕೃತಿಗಳನ್ನು ಸಂಗ್ರಹಿಸುವ ಸಂಪಾದಕನ ಕೆಲಸದಲ್ಲಿ ಪಠ್ಯವಿಷಯಗಳು ಮತ್ತು ಪಠ್ಯಪುಸ್ತಕಗಳ ಲೇಖಕರಿಗಿಂತಲೂ ಹೆಚ್ಚಾಗಿ ಈ ಕ್ಷೇತ್ರದ ಪ್ರಮುಖ ವ್ಯಕ್ತಿಗಳನ್ನು ಇನ್ನೂ ಹೆಚ್ಚು ಕೂಲಂಕಷವಾಗಿ ತಿಳಿದಿರಬೇಕಾದ್ದು ಸೇರಿರುತ್ತದೆ. ಪ್ರಕಾಶನ ವ್ಯವಹಾರದ ಈ ಕ್ಷೇತ್ರ ಬಹಳ ಭ್ರಷ್ಟಾಚಾರದಿಂದ ಕೂಡಿದೆ ಎಂದು ಹೇಳುವ ಮೂಲಕ ನಾನು ನೈತಿಕ ಅಸಹ್ಯವನ್ನು ವ್ಯಕ್ತಪಡಿಸುತ್ತಿಲ್ಲ – ಇದು ಭಾರತದ ವ್ಯಾಪಾರಿ ಜಗತ್ತಿನಲ್ಲಿ ಪ್ರಕಾಶನ ವ್ಯವಹಾರದ ಒಳಗಿನ ಮತ್ತು ಹೊರಗಿನ ಸಾಮಾನ್ಯ ಸಂಸ್ಕೃತಿಯಲ್ಲಿ ಯಾವುದು ಭ್ರಷ್ಟಾಚಾರದ ಗ್ರಾಹ್ಯ ಮಟ್ಟವಾಗಿದೆಯೋ ಅದಕ್ಕಿಂತ ಹೆಚ್ಚೇನೂ ಭ್ರಷ್ಟವಲ್ಲ. ಯಾವ ಸಂಸ್ಕೃತಿಯಲ್ಲಿ, ಕೃತಿಗಳ ಸಂಗ್ರಹಣಾ ಕಾರ್ಯದಲ್ಲಿ ಏನೆಲ್ಲ ವ್ಯತ್ಯಾಸಗಳನ್ನು ಪರಿಗಣಿಸಬೇಕಾಗುತ್ತದೋ ಆ ಸಂಸ್ಕೃತಿಯನ್ನು ನಾನು ಮೂಲತಃ ವಿವರಿಸುತ್ತಿದ್ದೇನೆ. ಅಧಿಕಾರದಲ್ಲಿರುವ ಜನರಿಗೆ ಎಲ್ಲ ರೀತಿಯ ಆಮಿಷಗಳನ್ನು ಮುಂದೊಡ್ಡಲಾಗುವ ಸ್ಪರ್ಧೆಯ ಕ್ಷೇತ್ರದಲ್ಲಿ ನಿರ್ದಿಷ್ಟವಾಗಿ ಪಠ್ಯಪುಸ್ತಕಗಳ ಪಟ್ಟಿಯೊಂದನ್ನು ಬೆಳೆಸುವ ಪ್ರಕ್ರಿಯೆಯಲ್ಲಿ ಮಾಡಿಕೊಳ್ಳಬೇಕಾದ ರಾಜಿಗಳ ಸ್ವರೂಪವೂ ಈ ವ್ಯತ್ಯಾಸಗಳಲ್ಲಿ ಸೇರಿದೆ.

ಇವುಗಳ ಜೊತೆಗೆ, ಹಸ್ತಪ್ರತಿ ಸಂಪಾದಕ ತನ್ನ ಪುಸ್ತಕಗಳು ಸ್ಪರ್ಧಿಸಬೇಕಾಗುವ ಇತರ ಪ್ರಕಾಶಕರ ಪುಸ್ತಕಗಳನ್ನು ತಿಳಿದಿರಬೇಕಾದ ಅಗತ್ಯವಿದೆ. ಕೆಲವೊಮ್ಮೆ ಇದರಿಂದ ಪ್ರತಿಸ್ಪರ್ಧಿ ಪ್ರಕಾಶಕರು ಪ್ರಕಟಿಸುವ ಪುಸ್ತಕಗಳ ಪ್ರಕಟಣೆಯಲ್ಲಿ ಕಂಡುಬರುವ ಬುದ್ಧಿವಂತಿಕೆ ಮತ್ತು ಕಲ್ಪನಾ ಶಕ್ತಿಗಿಂತಲೂ ಕಡಿಮೆ ಬುದ್ಧಿವಂತಿಕೆ ಮತ್ತು ಕಲ್ಪನಾಶಕ್ತಿ ಇರುವ ಪುಸ್ತಕಗಳನ್ನು ಹಾಗೂ ಪ್ರತಿಸ್ಪರ್ಧಿ ಪ್ರಕಾಶಕರು ನಿಗದಿ ಮಾಡಿದ

ಬೆಲೆಗಿಂತಲೂ ಕಡಿಮೆ ಬೆಲೆಯಲ್ಲಿ ಪುಸ್ತಕಗಳನ್ನು ಹೊರತರಬೇಕಾಗುತ್ತದೆ. ಉದಾಹರಣೆಗೆ, ಒಯುಪಿಯ ಹಸ್ತಪ್ರತಿ ಸಂಪಾದಕ ಮಾರುಕಟ್ಟೆ ಸಂಶೋಧನೆಯ ನಂತರ ತನ್ನ ಹಾಲಿ ಸಮಾಜ ಅಧ್ಯಯನ ಪಠ್ಯಪುಸ್ತಕಗಳಲ್ಲಿ ವಿಷಯಗಳ ಕಲ್ಪನಾತ್ಮಕ ನಿರೂಪಣೆಯ ಬದಲಿಗೆ ಕಡಿಮೆ ಕಲ್ಪನಾ ಶಕ್ತಿಯ, ನೆನಪಿಗೆ ಹೆಚ್ಚು ಒತ್ತು ಕೊಡುವ ಹಾಗೂ ಕಡಿಮೆ ಚಿತ್ರಗಳುಳ್ಳ ನಿರೂಪಣೆಯಿದ್ದರೆ ಪಠ್ಯಪುಸ್ತಕಗಳ ಮಾರಾಟ ಗಮನಾರ್ಹವಾಗಿ ಸುಧಾರಿಸುತ್ತದೆ ಎಂಬ ತೀರ್ಮಾನಕ್ಕೆ ಬಂದ ಎಂದಿಟ್ಟುಕೊಳ್ಳೋಣ. ಇದರಿಂದ ಪ್ರತಿ ಪುಸ್ತಕಕ್ಕೆ ತಗಲುವ ವೆಚ್ಚ ಕಡಿಮೆಯಾಗುತ್ತದೆ: ಅದರಿಂದ ಈ ಪುಸ್ತಕಗಳ ಪ್ರಕಟಿತ ಬೆಲೆಗಳು ಕಡಿಮೆಯಾಗುತ್ತವೆ; ಆಗ ಪ್ರತಿಸ್ಪರ್ಧಿ ಪಠ್ಯಪುಸ್ತಕಗಳೊಡನೆ ಹೆಚ್ಚು ಪರಿಣಾಮಕಾರಿಯಾಗಿ ಸ್ಪರ್ಧಿಸಲು ಅವುಗಳಿಗೆ ಸಾಧ್ಯವಾಗುತ್ತದೆ; ಪರೀಕ್ಷೆಗಳಿಗೇ ಗಮನ ಕೊಡುವ ಉಪಾಧ್ಯಾಯರ ಮತ್ತು ವಿಚಾರ ಮಾಡುವುದಕ್ಕಿಂತಲೂ ಹೆಚ್ಚಾಗಿ ಪಾಠಗಳನ್ನು ಉರು ಹೊಡೆಯುವುದನ್ನೇ ಬಯಸುವ ವಿದ್ಯಾರ್ಥಿಗಳ ಅಗತ್ಯಗಳಿಗೆ ಈ ಪುಸ್ತಕಗಳು ಸರಿಹೊಂದುತ್ತವೆ. ಕಲ್ಪನಾ ಶಕ್ತಿಯನ್ನು ಬಳಸುವ ಮತ್ತು ವಿಚಾರಾತ್ಮಕ ಚಟುವಟಿಕೆಗಿಂತ ಹೆಚ್ಚಾಗಿ ವಿಷಯಗಳನ್ನು ನೆನಪಿನಲ್ಲಿಟ್ಟುಕೊಳ್ಳುವುದಕ್ಕೆ ಒಲವು ತೋರುವ ಭಾರತದ ಶೈಕ್ಷಣಿಕ ನೀತಿಗಳು ಪಠ್ಯವಿಷಯಗಳನ್ನೂ, ಪರೀಕ್ಷೆಗಳನ್ನೂ, ಶಿಕ್ಷಣ ಕ್ರಮ, ಪದ್ಧತಿಗಳನ್ನೂ ತೀರ್ಮಾನಿಸುವುದರಿಂದ, ಪಠ್ಯಪುಸ್ತಕಗಳ ಪ್ರಕಟಣೆಯನ್ನೂ ಅವೇ ತೀರ್ಮಾನಿಸುತ್ತವೆ. ಹೀಗಾಗಿ ವೈಯಕ್ತಿಕವಾಗಿ ಆಲೋಚಿಸುವುದಕ್ಕಿಂತಲೂ ಯಾಂತ್ರಿಕವಾಗಿ ನೆನಪಿನಲ್ಲಿಟ್ಟುಕೊಳ್ಳುವುದಕ್ಕೆ ಒಲವು ತೋರುವ ಪ್ರಬಲ ಸೈದ್ಧಾಂತಿಕ ಪರಂಪರೆಗೆ ತಾಳ ಹಾಕದೆ ಇರುವ ಪಠ್ಯಪುಸ್ತಕಗಳ ಮುದ್ರಣಕ್ಕೆ ಅವಕಾಶ ಕಡಿಮೆಯಾಗುತ್ತಾ ಹೋದಂತೆ ತೋರುತ್ತಿದೆ. ಇದರಿಂದ ಮಾರುಕಟ್ಟೆ ಒತ್ತಡಗಳು ಮತ್ತು ವ್ಯಾಪಾರದ ಲೆಕ್ಕಾಚಾರಗಳು ತೀವ್ರ ಪ್ರಾಬಲ್ಯ ಹೊಂದಿರುವ ಹಾಗೂ ಮಾರುಕಟ್ಟೆಯನ್ನು ರೂಪಿಸುವ ಪ್ರಯತ್ನಗಳು ನಿಜಕ್ಕೂ ಅಲ್ಪವಾಗಿರುವ ಪರಿಸ್ಥಿತಿಗಳಲ್ಲಿ ಪಠ್ಯಪುಸ್ತಕಗಳ ಸಂಗ್ರಹ ಕಾರ್ಯ ನಡೆಯುವುದು ಅನಿವಾರ್ಯವಾಗುತ್ತದೆ.

ವ್ಯಾಸಂಗಿಕ ಮತ್ತು ಸಾಮಾನ್ಯ ಪುಸ್ತಕಗಳಿಗೆ ಇರುವ ಹೆಚ್ಚು ಮುಕ್ತವಾದ ಮಾರುಕಟ್ಟೆಗಳಲ್ಲಿ ಪರಿಸ್ಥಿತಿ ಹೀಗಿಲ್ಲ. ಭಾರತಕ್ಕೆ ಪುಸ್ತಕಗಳನ್ನು ಆಯಾತ ಮಾಡಿಕೊಳ್ಳುವ ಬಗೆಗೆ ಇತ್ತೀಚೆಗೆ ನಿಯಮಗಳನ್ನು ವಿಧಿಸುವವರೆಗೆ ಈ ಕ್ಷೇತ್ರ ಸರ್ಕಾರದ ವಿಕೃತ ಹಸ್ತಕ್ಷೇಪದಿಂದ ಮುಕ್ತವಾಗಿದ್ದದ್ದು ಒಂದು ದೊಡ್ಡ ದಯೆ. ಕಾಗದದ ಬೆಲೆಗಳಿಗೆ ಸಂಬಂಧಿಸಿದಂತೆ ಸರ್ಕಾರದ ನೀತಿಗೆ ಒಳಪಟ್ಟಿದ್ದರೂ ಸಹ ದೇಶೀಯವಾಗಿ ಸೃಷ್ಟಿಗೊಂಡ ಸಾಹಿತ್ಯಕ್ಕೆ ವ್ಯಾಸಂಗಿಕ ಮತ್ತು ಸಾಮಾನ್ಯ ಮಾರುಕಟ್ಟೆ ಇನ್ನೂ ಹೆಚ್ಚಿನ ಮಟ್ಟಿಗೆ ಮುಕ್ತವಾಗಿಯೇ ಇದೆ. ಇಲ್ಲಿ ಸಾಮಾನ್ಯವಾಗಿ ಆಗುವುದೇಂದರೆ, ಲೇಖಕರು ಅಥವಾ ವಿದ್ವಾಂಸರು ತಾವಾಗಿಯೇ ತಮ್ಮ ಕೃತಿಗಳನ್ನು ಪ್ರಕಟಣೆಗೆ ಕಳಿಸುತ್ತಾರೆ ಅಥವಾ ಸಂಪಾದಕರು ತಮ್ಮ ಪಟ್ಟಿಗಳಿಗೆ ಹೊಂದುವ

ಯೋಜನೆಗಳಿಗೆ ಸಂಬಂಧಿಸಿದಂತೆ ಬರೆಯಲು ತಾವು ಕೋರಿರುವ ಲೇಖಕರ ಬೆನ್ನಟ್ಟಿ ಹೋಗುತ್ತಾರೆ. ಕೋರದೆ ಬಂದ ಕೃತಿಗಳನ್ನು ಮೊದಲು ಪ್ರಕಾಶನ ಸಂಸ್ಥೆಯಲ್ಲೇ ಪರಿಶೀಲಿಸಲಾಗುತ್ತದೆ; ವಿಷಯದ ಪ್ರತಿಪಾದನೆ ಎಷ್ಟು ಸಮಗ್ರವಾಗಿದೆ, ಬರವಣಿಗೆಯ ತರ್ಕ ಮತ್ತು ಸ್ಫುಟತೆ, ಮಾಹಿತಿಯ ಆಧಾರ ಮತ್ತು ತೂಕ ಮತ್ತಿತರ ಅಂತಹ ಸೂಚನೆಗಳಿಂದ, ತುಂಬಾ ಒಳ್ಳೆಯ ಮತ್ತು ತುಂಬಾ ಕೆಟ್ಟ ಕೃತಿಗಳನ್ನು ಬೇಗನೆ ಗುರುತಿಸಬಹುದು. ಹೊರಗಡೆಯ ಓದುಗರೊಬ್ಬರಿಗೆ ಕೃತಿಯನ್ನು ತೋರಿಸದೆಯೇ ಒಂದಷ್ಟು ಸಮಯ ಕಳೆದ ನಂತರ ಕೆಟ್ಟ ಕೃತಿಗಳನ್ನು ಆಯಾ ಲೇಖಕರಿಗೆ ಹಿಂತಿರುಗಿಸಲಾಗುತ್ತದೆ. ಉತ್ತಮ ಎಂದು ಕಂಡುಬರುವ ಮತ್ತು ಬಹುಶಃ ಉತ್ತಮ ಎಂದು ಕಂಡುಬರುವ ಕೃತಿಗಳನ್ನು ನಂತರ ಪ್ರಕಾಶನದ ಅನೇಕ ಅಳತೆಗೋಲುಗಳ ಮೂಲಕ ಮೌಲ್ಯಮಾಪನ ಮಾಡಲಾಗುವುದು. ಈ ಅಳತೆಗೋಲುಗಳಿಗೂ ಕೃತಿಯ ವ್ಯಾಸಂಗಿಕ ಅಥವಾ ಕಾಲ್ಪನಿಕ ಗುಣಮಟ್ಟಕ್ಕೂ ಹೇಳಿಕೊಳ್ಳುವಂತಹ ಸಂಬಂಧವಿರುವುದಿಲ್ಲ. ಇವುಗಳಲ್ಲಿ ಕೆಲವನ್ನು ವಿವರವಾಗಿ ಇಲ್ಲಿ ಪ್ರಸ್ತಾಪಿಸುತ್ತೇನೆ.

ಮೊದಲಿಗೆ ಹಸ್ತಪ್ರತಿಗಳನ್ನು ನಿಷ್ಪಕ್ಷಪಾತವಾದ ಅಭಿಪ್ರಾಯಕ್ಕಾಗಿ ಹೊರಗಡೆಯ ಓದುಗರೊಬ್ಬರಿಗೆ ಕಳಿಸಲಾಗುವುದು. ಹಸ್ತಪ್ರತಿಯ ಲೇಖಕನೊಂದಿಗೆ ಯಾವುದೇ ಸಂಬಂಧ ಹೊಂದದ ಹಾಗೂ ಸಮಂಜಸವಾದ ಮತ್ತು ನಿಷ್ಪಕ್ಷಪಾತವಾದ ಅಭಿಪ್ರಾಯವನ್ನು ಕೊಡಲು ಸಮರ್ಥನಾದ ಓದುಗನನ್ನು ಆರಿಸುವುದು ಯುಕ್ತ. ಇದು ಕಠಿಣವಾದ ಕೆಲಸ. ಏಕೆಂದರೆ ಭಾರತದಲ್ಲಿ ಲೇಖಕರ ಸಮುದಾಯ ಚಿಕ್ಕದು – ಮುಜುಗರವಾಗುವಷ್ಟು ಚಿಕ್ಕದು. ಎಲ್ಲರೂ ಪರಸ್ಪರರ ಪರಿಚಯವನ್ನು ಹೊಂದಿದಂತೆ ತೋರುತ್ತದೆ ಅಥವಾ ಪರಸ್ಪರರ ಬೆನ್ನುಗಳ ನವೆಯನ್ನು ತಿಕ್ಕಲು ಉದಾರ ಮನೋಭಾವನೆಯಿಂದ ಮುಂದಾಗುತ್ತಾರೆಂದು ತೋರುತ್ತದೆ. ಇದರರ್ಥ ಹಸ್ತಪ್ರತಿ ಸಂಗ್ರಹಿಸುವ ವ್ಯಕ್ತಿ ಸಾಧ್ಯವಿದ್ದಷ್ಟೂ ವೈವಿಧ್ಯಮಯ ವಿಷಯಗಳ ಬಗ್ಗೆ ಸಾಕಷ್ಟು ವಿವೇಚನೆಯ ತೀರ್ಮಾನ ಕೈಗೊಳ್ಳಲು ಸಮರ್ಥನಿರಬೇಕು. ಒಂದು ಸಮಂಜಸವಾದ ಮತ್ತು ನಿಷ್ಪಕ್ಷಪಾತವಾದ ಅಭಿಪ್ರಾಯವನ್ನು ಒದಗಿಸುವುದಕ್ಕೆ ಯಾರು ಅತ್ಯಂತ ಸೂಕ್ತ ಎಂಬುದನ್ನು ತೀರ್ಮಾನಿಸಲು ಸಮಯ ಬೇಕಾಗುತ್ತದೆ, ಎಚ್ಚರ ವಹಿಸಬೇಕಾಗುತ್ತದೆ. ಇಂತಹ ಅಭಿಪ್ರಾಯಕ್ಕೆ ಓದುಗರಿಗೆ ಸೂಕ್ತ ಶುಲ್ಕವನ್ನು ಕೊಡಲು ನೀವು ತಯಾರಿದ್ದರೆ ಈ ಕೆಲಸ ಇನ್ನೂ ಸುಲಭವಾಗಿ ಆಗುತ್ತದೆ. ಒಂದು ಸಮಂಜಸವಾದ ಮೊತ್ತದ ಹಣವನ್ನು ಕೊಡುವುದು ಔಚಿತ್ಯಪೂರ್ಣವಾಗುತ್ತದೆ. ಏಕೆಂದರೆ ನಿಮ್ಮ ಪ್ರಕಾಶನ ಪಟ್ಟಿಯನ್ನು ಸ್ವಚ್ಛವಾಗಿಡಲು ನೆರವಾಗುವ ತಜ್ಞರ ಸಲಹೆಯನ್ನು ನೀವು ಪಡೆಯುತ್ತಿದ್ದೀರಿ ಹಾಗೂ ಅವರು ನಿಮ್ಮನ್ನು ಗೆಳೆಯರೆಂದು ಭಾವಿಸಿ ಮುಂದೆಂದಾದರೂ ತಮ್ಮದೇ ಹಸ್ತಪ್ರತಿಯನ್ನು ನಿಮಗೆ ಕೊಡಬಹುದು. ಯಾರ ಸ್ವಂತ ಕೃತಿಗಳನ್ನು ನಾವು ಪ್ರಕಟಿಸುವುದು ಬಹುತೇಕವಾಗಿ ಖಚಿತ ಎಂದು ತಿಳಿದಿರುತ್ತೇವೋ ಅಂತಹ ವ್ಯಕ್ತಿಗಳ ಹೊರತಾಗಿ ಉಳಿದವರನ್ನು ಕೃತಿಯ ಬಗ್ಗೆ ಅಭಿಪ್ರಾಯ ಕೊಡಿ ಎಂದು ನಾವು ಸಾಮಾನ್ಯವಾಗಿ ಕೇಳುವುದಿಲ್ಲ. ಇದಕ್ಕೆ ಕೆಲವು

ಅಪವಾದಗಳಿರುವುದು ಸ್ಪಷ್ಟ. ಅಂತಿಮವಾಗಿ ಕೃತಿ ಯಾರದೇ ಆದರೂ ಅದನ್ನು ಅದರದೇ ಆದ ನಿಯಮಗಳಿಗೊಳಪಟ್ಟೇ ಪರಿಶೀಲಿಸಬೇಕಾಗುತ್ತದೆ. ಓದುಗರ ವರದಿಗಳನ್ನು ಸಾಮಾನ್ಯವಾಗಿ ವಿವೇಚನೆಯಿಂದ ಪರಿಷ್ಕರಿಸಲಾಗುತ್ತದೆ ಹಾಗೂ ಕೆಲವು ಬದಲಾವಣೆಗಳೊಂದಿಗೆ ಕೃತಿಯನ್ನು ಪ್ರಕಟಿಸಬೇಕೆಂಬ ಒಲವು ಮೂಡಿದರೆ ಹಾಗೂ ಪ್ರಕಾಶನಕ್ಕೆ ಅರ್ಹ ಎಂದು ತೀರ್ಮಾನಿಸಲು ಬಳಸುವ ಅನೇಕ ಅಳತೆಗೋಲುಗಳಿಂದ ತೃಪ್ತಿಕರ ಫಲಿತಾಂಶ ಉಂಟಾದರೆ, ಸಂಬಂಧಪಟ್ಟ ಉದ್ಧೃತ ಭಾಗಗಳನ್ನು ಲೇಖಕರಿಗೆ ಕಳಿಸಲಾಗುವುದು. ಸಾಮಾನ್ಯವಾಗಿ ಕೃತಿಯನ್ನು ತಿದ್ದುವುದಕ್ಕೆ ಲೇಖಕ ತುದಿಗಾಲಲ್ಲಿ ನಿಲ್ಲುವಂತಾಗಲು ತನ್ನ ಕೃತಿ ಪ್ರಕಟಗೊಳ್ಳಬೇಕು ಎಂಬ ಆತನ ಉತ್ಸಾಹವೇ ಸಾಕಾಗುತ್ತದೆ. ಆದರೆ ಇದು ಇನ್ನೊಬ್ಬ ಪ್ರಕಾಶಕರ ಬಳಿ ಹೋಗುವ ಆಯ್ಕೆ ಹೊಂದಿದ ಲೇಖಕರಿಗಿಂತಲೂ ಚೊಚ್ಚಲ ಕೃತಿ ಬರೆದ ಲೇಖಕರಿಗೇ ಹೆಚ್ಚು ಅನ್ವಯಿಸುತ್ತದೆ. ಇಂತಹ ಲೇಖಕರೂ ಸಹ ಅವರು ನಿಜವಾಗಿ ವಿದ್ವಾಂಸರಾಗಿದ್ದ ಓದುಗರಿಂದ ಬರುವ ತಿಳಿವಳಿಕೆಯ ಟೀಕೆಗಳಿಗೆ ಬೆಲೆ ಕೊಡುತ್ತಾರೆ. ಏಕೆಂದರೆ ಅನೇಕ ಸಲ ಒಬ್ಬ ಲೇಖಕನ ಕೃತಿ ನಿಯತಕಾಲಿಕಗಳಲ್ಲಿ ಅಥವಾ ವೃತ್ತಪತ್ರಿಕೆಗಳಲ್ಲಿ ವಿಮರ್ಶೆಗೊಳಗಾಗುವವರೆಗೆ ತನ್ನ ಕೃತಿಯ ಬಗ್ಗೆ ಅತ್ಯಂತ ವಿವರಪೂರ್ಣ ಹಾಗೂ ಕೂಲಂಕಷವಾದ ಪ್ರತಿಕ್ರಿಯೆಗಳು ಆತನಿಗೆ ದೊರೆಯುವುದು ಓದುಗರ ವರದಿಗಳಿಂದಲೇ. ಇನ್ನೊಬ್ಬ ಪ್ರಕಾಶಕ ಮತ್ತು ಆ ನಂತರ ಬಹುಶಃ ಮೂರನೆ ಪ್ರಕಾಶಕನ ಬಳಿ ಹೋಗುವುದರಲ್ಲಿ ಆಗುವ ಸಾಕಷ್ಟು ತೊಂದರೆ, ಅನಿಶ್ಚಿತತೆ ಮತ್ತು ಹಿಡಿಯುವ ಸಮಯ – ಇವೆಲ್ಲವುಗಳನ್ನು ತಪ್ಪಿಸಲು ಎಲ್ಲ ರೀತಿಯ ಲೇಖಕರು ಸಾಮಾನ್ಯವಾಗಿ ತಮ್ಮ ಕೃತಿಯನ್ನು ಪರಿಷ್ಕರಿಸಲು ಒಪ್ಪುತ್ತಾರೆ. ಲೇಖಕರು ಒಂದು ಪುಸ್ತಕ ಬರೆಯಲು ತಮ್ಮ ಜೀವನದ ಒಂದು ದಶಕವನ್ನೇ ಕಳೆಯಲು ಸಿದ್ಧರಿರುತ್ತಾರೆ. ಆದರೆ ಕೃತಿ ಪ್ರಕಟವಾಗಬೇಕಾದಾಗ, ಅವರ ಬರೆವಣಿಗೆಯನ್ನು ಪರಿಶೀಲಿಸಲು ನೀವು ಶ್ರಮ ವಹಿಸುತ್ತಿದ್ದೀರಿ ಎಂದು ಅವರಿಗೆ ಅನಿಸಿದರೆ ಇನ್ನೊಬ್ಬ ಪ್ರಕಾಶಕರ ಬಳಿ ಹೋಗಲು ಇಚ್ಛಿಸದೆ ನಿಮ್ಮಿಂದ ಪುಸ್ತಕ ಮೊನ್ನೆಯೇ ಪ್ರಕಟವಾಗಬೇಕೆಂದು ಬಯಸುತ್ತಾರೆ.

ಎರಡನೆಯದಾಗಿ, ಪಂಡಿತರ ಪರಿಶೀಲನೆ ಮೌಲ್ಯಮಾಪನಕ್ಕೆ ಎಂದೂ ಸಾಕಾಗದು. ಏಕೆಂದರೆ ಕೆಲವು ರೀತಿಯ ವ್ಯಾಸಂಗಿಕ ಉತ್ಕೃಷ್ಟತೆ ಮಾರಾಟವಾಗದಂತಹುದು. ಮಾರುಕಟ್ಟೆ ಯಾವ ಗಾತ್ರದ್ದಿರಬಹುದು ಹಾಗೂ ಮಾರುಕಟ್ಟೆಯ ನಿಖರವಾದ ಸ್ವರೂಪ ಎಂತಹದು – ಇವು ಹಸ್ತಪ್ರತಿಗಳ ಸಂಗ್ರಹ ಮತ್ತು ಪ್ರಕಾಶನದ ಮೌಲ್ಯಮಾಪನವನ್ನು ನಿರ್ಧರಿಸುತ್ತವೆ. ಸದ್ಯದಲ್ಲಿ, ಅರ್ಥಶಾಸ್ತ್ರ ಮತ್ತು ಮ್ಯಾನೇಜ್‌ಮೆಂಟ್ ಅಧ್ಯಯನಗಳ ಬಗ್ಗೆ ಸ್ಥಳೀಯವಾಗಿ ಬರೆದ ಸಾಮಗ್ರಿಯನ್ನು ಕೊಳ್ಳಲು ಈಗ ಸಾಕಷ್ಟು ಹಣವಿದೆ. ಆದ್ದರಿಂದ ಹಸ್ತಪ್ರತಿ ಸಂಗ್ರಹಿಸುವವರು ಈ ಕ್ಷೇತ್ರದಲ್ಲಿ ಚುರುಕಾಗಿದ್ದಾರೆ. ತದ್ವಿರುದ್ಧವಾಗಿ, ತತ್ವಜ್ಞಾನ ಕುರಿತ ಕೃತಿಗಳು ಎಷ್ಟು ಕಳಪೆಯಾಗಿ ಮಾರಾಟವಾಗುತ್ತವೆಂದರೆ, ತತ್ವಜ್ಞಾನ ಕುರಿತ ಒಂದು ಕೃತಿಯನ್ನು ವ್ಯವಹಾರಸಾಧ್ಯ ಪ್ರಕಾಶನ ಯೋಜನೆಯನ್ನಾಗಿ ಮಾಡಲು

ಅದರ ಉತ್ಕೃಷ್ಟತೆಯನ್ನು ಪ್ರತಿಪಾದಿಸುವ ಒಂದು ವ್ಯಾಸಂಗಿಕ ವರದಿಯಷ್ಟೇ ಅಲ್ಲದೇ ಒಬ್ಬ ವಿದೇಶಿ ಪ್ರಕಾಶಕರೊಂದಿಗೆ ಸಹ-ಪ್ರಕಾಶನ ಒಪ್ಪಂದವೊಂದರ ಬೆಂಬಲವೂ ಬೇಕಾಗುತ್ತದೆ. ಒಂದು ಒಳ್ಳೆಯ ಆದರೆ ಬಹಳ ಹೆಚ್ಚಿನ ಪ್ರಮಾಣದಲ್ಲಿ ಮಾರಾಟಯೋಗ್ಯವಲ್ಲದ ಹಸ್ತಪ್ರತಿಯನ್ನು ಪ್ರಕಟಣೆಗೆ ಒಪ್ಪಿಕೊಳ್ಳುವ ಮುನ್ನ, ಅದರಲ್ಲಿ ಹೂಡುವ ಬಂಡವಾಳವನ್ನು ಸಮರ್ಥಿಸುವಷ್ಟು ಅದರಿಂದ ಪ್ರತಿಫಲ ದೊರೆಯುತ್ತದೆ ಎಂಬುದು ಸಾಕಷ್ಟು ಸ್ಪಷ್ಟವಾದ ನಂತರವೇ ಅದನ್ನು ಒಪ್ಪಿಕೊಳ್ಳುವುದು ಹಸ್ತಪ್ರತಿ ಸಂಗ್ರಹಣೆಯ ಸಮಂಜಸ ಕಾರ್ಯತಂತ್ರ. 'ಪ್ರತಿಫಲ' ಎಂದು ನಾನು ಹೇಳುವಾಗ ಕೇವಲ 'ಹಣಕಾಸಿನ ಪ್ರತಿಫಲ'ವಷ್ಟೇ ನಾನು ಹೇಳುತ್ತಿಲ್ಲ; ಅದಕ್ಕೂ ದೊಡ್ಡದಾದ, ಹಣಕಾಸಿನ ಸೀಮಿತ ಎಲ್ಲೆಯನ್ನು ಮೀರಿ ನಿಲ್ಲುವ ಒಂದು ಸಮಗ್ರ ಪ್ರಕಾಶನ ದರ್ಶನವೇ ಅದು. ಉದಾಹರಣೆಗೆ, ಹಣಕಾಸಿನ ದೃಷ್ಟಿಯಿಂದ, ಹಾಕಿದ ಹಣವೂ ಬರದೆ ಇರುವಂತಹ ಒಂದು ಹಸ್ತಪ್ರತಿಯಲ್ಲಿ ಹಣ ಹಾಕುವುದು ಸಂಸ್ಥೆ ಕುರಿತ ಸಾರ್ವಜನಿಕ ಅಭಿಪ್ರಾಯ, ಗೌರವದ ದೃಷ್ಟಿಯಿಂದ ಬಹಳ ಉತ್ತಮವಾದ ಕಾರ್ಯವಾಗಬಹುದು.

ಮೂರನೆಯದಾಗಿ, ಸಾಂಸ್ಥಿಕ ಇತಿಮಿತಿಗಳು ಪ್ರಕಾಶನ ಸಂಸ್ಥೆಗಳ ಮೌಲ್ಯಮಾಪನಗಳಲ್ಲಿ ಸಾಕಷ್ಟು ಪಾತ್ರವನ್ನು ವಹಿಸುತ್ತವೆ. ಉದಾಹರಣೆಗೆ, ಸೇಜ್ ಸಂಸ್ಥೆ ಆರ್ಥಿಕ ಇತಿಹಾಸ ಕುರಿತ ಒಂದು ಉತ್ತಮ ಹಸ್ತಪ್ರತಿಗೆ ಬಹಳಷ್ಟು ಸಲ 'ಬೇಡ' ಎನ್ನುತ್ತದೆ. ಏಕೆಂದರೆ ಅಂತಹ ಕೃತಿಗಳು ಅವರಿಗೆ ಬೇಕಿಲ್ಲ; ಮ್ಯಾನೇಜ್‌ಮೆಂಟ್ ಅಧ್ಯಯನಗಳಿಗೆ ಸಂಬಂಧಿಸಿದ ಉತ್ತಮ ಕೃತಿಯೊಂದನ್ನು ಓಯುಪಿ 'ಬೇಡ' ಎನ್ನುತ್ತದೆ. ಏಕೆಂದರೆ ಈ ಕ್ಷೇತ್ರದಲ್ಲಿ ಕೃತಿಗಳ ಬೆಲೆ ಅಳೆಯಲು ಅಗತ್ಯವಾದ ವ್ಯಾಸಂಗಿಕ ಜಾಲವನ್ನು ಅದು ಹೊಂದಿಲ್ಲ. ಹಾಗೂ ಅದರ ಬಂಡವಾಳ ಬೇರೆ ಕ್ಷೇತ್ರಗಳಲ್ಲಿ ಸಿಕ್ಕಿಕೊಂಡಿದೆ ಹಾಗೂ ಮ್ಯಾನೇಜ್‌ಮೆಂಟ್‌ಗೆ ಸಂಬಂಧಿಸಿದ ಪುಸ್ತಕಗಳನ್ನು ಮಾರಲು ಅದು ಸಜ್ಜುಗೊಂಡಿಲ್ಲ; ವ್ಯಾಸಂಗಿಕ ಪರಾಮರ್ಶೆಯ ದೊಡ್ಡ ಯೋಜನೆಯಲ್ಲಿ ಹಣ ತೊಡಗಿಸುವುದಕ್ಕೆ ಕಾಳಿ ಸಂಸ್ಥೆ ಬಹುಶಃ 'ಬೇಡ' ಎಂದು ಹೇಳಬಹುದು. ಏಕೆಂದರೆ ಅವರ ಆಸಕ್ತಿಯ ಕಾರ್ಯಕ್ಷೇತ್ರ ಹೆಚ್ಚು ಕೇಂದ್ರೀಕೃತವಾದದ್ದು ಮತ್ತು ದೀರ್ಘಾವಧಿ ಹಿಡಿಯಬಹುದಾದ ಯೋಜನೆಗೆ ಹಣಕಾಸು ಒದಗಿಸುವ ಅದರ ಸಾಮರ್ಥ್ಯದ ಬಗ್ಗೆಯೂ ಬಹುಶಃ ಅನಿಶ್ಚಯತೆ ಇದೆ.

ನಾಲ್ಕನೆಯದಾಗಿ, ಸಮಂಜಸವಾದ ಹಸ್ತಪ್ರತಿ ಸಂಗ್ರಹ ಕಾರ್ಯಕ್ಕೆ ಅನೇಕ ರೀತಿಯ ಸಾಂಸ್ಥಿಕ ಮತ್ತು ಮಾರುಕಟ್ಟೆ ಮಿತಿಗಳ ತಿಳುವಳಿಕೆ ಮುಖ್ಯ. ಉದಾಹರಣೆಗೆ, ಯಾವುದೇ ಒಂದು ವರ್ಷದಲ್ಲಿ ನೀವು ಚರಿತ್ರೆಯ ಬಗ್ಗೆ 20 ಪುಸ್ತಕಗಳನ್ನು ಪ್ರಕಟಿಸಿದ್ದರೆ ಸಂಸ್ಥೆಯ ಮಾಲಿಕ ಅಥವಾ ವ್ಯವಸ್ಥಾಪಕ ಅದರ ಮುಂದಿನ ವರ್ಷ ಅದೇ ವಿಷಯದ ಮೇಲೆ 23 ಅಥವಾ 24 ಪುಸ್ತಕಗಳನ್ನು ಪ್ರಕಟಿಸಬೇಕೆಂದು ಸಂಪಾದಕನ ಮೇಲೆ ನವಿರಾದ ಅಥವಾ ಸೂಕ್ಷ್ಮವಾದ ಅಥವಾ ಕ್ರೂರವಾದ ಒತ್ತಡ ಹಾಕುತ್ತಾನೆ. ಪ್ರಕಟಿಸುವ ಪುಸ್ತಕಗಳ ಸಂಖ್ಯೆಯನ್ನು ಹೆಚ್ಚಿಸಲು

ಹಾಗೂ ಆ ಮೂಲಕ ವಹಿವಾಟನ್ನು ಹೆಚ್ಚಿಸಲು ಹಸ್ತಪ್ರತಿ ಸಂಗ್ರಹಿಸುವ ಸಂಪಾದಕರ ಮೇಲೆ ಸಾಮಾನ್ಯವಾಗಿ ಒತ್ತಡವಿರುತ್ತದೆ. ಸಂಸ್ಥೆ ಗುಣಮಟ್ಟದ ಬಗ್ಗೆ ಪ್ರಜ್ಞೆ ಹೊಂದಿದ್ದರೆ ಇಂತಹ ಒತ್ತಡ ಒಳ್ಳೆಯದಲ್ಲ. ಏಕೆಂದರೆ ಪ್ರಕಟಣಾ ಯೋಗ್ಯ ಕೃತಿಗಳ ಹೆಚ್ಚಳದ ಪ್ರಮಾಣ ಪ್ರತಿ ವರ್ಷ ಹೆಚ್ಚು ಹೆಚ್ಚು ಲಾಭ ಗಳಿಸಬೇಕೆಂಬ ಪ್ರಕಾಶಕರ ದುರಾಸೆಯ ಪ್ರಮಾಣಕ್ಕೆ ತಕ್ಕಂತೆ ಇಲ್ಲ. ವಹಿವಾಟನ್ನು ಹೆಚ್ಚಿಸಲು ಆಡಳಿತವರ್ಗ ಹಾಕುವ ಒತ್ತಡದಿಂದಾಗಿ ತನ್ನ ಪಟ್ಟಿ ವಿವೇಚನಾರಹಿತವಾಗುತ್ತದೆ ಎಂದು ಹಸ್ತಪ್ರತಿ ಸಂಗ್ರಹಿಸುವ ವ್ಯಕ್ತಿಗೆ ತೋರಿದರೆ, ಆತ ಅಥವಾ ಆಕೆ ನಿರ್ದಾಕ್ಷಿಣ್ಯವಾಗಿ ಅಂತಹ ಒತ್ತಡವನ್ನು ವಿರೋಧಿಸಬೇಕಾಗುತ್ತದೆ. ಭಾರತದಲ್ಲಿ, ಸಾಮಾನ್ಯವಾಗಿ, ಹಿತಾಸಕ್ತಿಗಳ ಈ ತಾಕಲಾಟ ಸದಾ ಬಹುತೇಕ ಅಧಿಕ ವಹಿವಾಟಿನ ಪರವಾಗಿ ಬಗೆಹರಿಯುತ್ತಿರುವುದು ದುರದೃಷ್ಟಕರ. ಇದು ಹೀಗೇಕೆಂದರೆ ಪ್ರಕಾಶನದ ವ್ಯಾಪಾರಿ ಗುರಿ ಅಥವಾ ಪುಸ್ತಕಗಳು ಮಾರಾಟದ ವಸ್ತು ಎಂಬ ಅಭಿಪ್ರಾಯ, ಸಾಮಾನ್ಯವಾಗಿ ಪ್ರಕಾಶನದ ನೈತಿಕ ಮತ್ತು ಸಾಂಸ್ಕೃತಿಕ ಗುರಿ ಅಥವಾ ಪುಸ್ತಕಗಳು ಸಮಾಜಕ್ಕೆ ಯಾವುದೋ ಒಂದು ರೂಪದಲ್ಲಿ ಏನನ್ನಾದರೂ ಕೊಡುವುದಿದ್ದರೆ ಮಾತ್ರ ಅವುಗಳು ಮಾರಾಟದ ವಸ್ತುವಾಗುತ್ತವೆ ಎಂಬ ಅಭಿಪ್ರಾಯದ ಮೇಲೆ, ವಿಜಯ ಸಾಧಿಸುತ್ತದೆ. ವಿಶೇಷವಾಗಿ ಭಾರತದಲ್ಲಿ ಹೀಗಾಗುತ್ತಿದೆ. ಏಕೆಂದರೆ ದಪ್ಪ ರಟ್ಟು ಹಾಕಿದ ಗ್ರಂಥಾಲಯ ಪುಸ್ತಕಗಳ ವಹಿವಾಟು ಈಗ ಹೆಚ್ಚಾಗಿ ಸಣ್ಣ ಸಂಖ್ಯೆಯಲ್ಲಿರುವ ಒಳ್ಳೆಯ ಪುಸ್ತಕಗಳ ಭಾರಿ ಪ್ರಮಾಣದ ಮಾರಾಟದಿಂದ ಆಗುತ್ತಿಲ್ಲ; ಬದಲಿಗೆ ಭಾರಿ ಸಂಖ್ಯೆಯ ಒಳ್ಳೆಯ, ಕೆಟ್ಟ ಮತ್ತು ಸಾಧಾರಣವಾದ ಪುಸ್ತಕಗಳ ಸಣ್ಣ ಪ್ರಮಾಣದ ಮಾರಾಟದಿಂದ ಆಗುತ್ತಿದೆ. ಉದಾಹರಣೆಗೆ, ಭಾರತೀಯ ಪ್ರಕಾಶಕರಲ್ಲಿ ಅತ್ಯಂತ ಹೆಚ್ಚಿನ ಗೌರವಾನ್ವಿತ ಪ್ರಕಾಶಕರು ನಿರಾಕರಿಸಿದ ಕೃತಿಗಳಲ್ಲಿ ಹೆಚ್ಚಿನವು, ಅವು ಬೇರೆಲ್ಲಾದರೂ ಪ್ರಕಟಣೆಗೆ ಅರ್ಹವಾಗಿದ್ದರೂ ಇಲ್ಲದಿದ್ದರೂ, ಸಣ್ಣ ಪ್ರಕಾಶನ ಸಂಸ್ಥೆಗಳಿಂದ ಪ್ರಕಟವಾಗುತ್ತಿವೆ. ಈ ಸಣ್ಣ ಸಂಸ್ಥೆಗಳ ನಿರ್ವಹಣೆಯ ಮೇಲ್ ಖರ್ಚುಗಳು ಕಡಿಮೆ ಇರುವುದರಿಂದ, ಇವುಗಳಿಗೆ ಸಣ್ಣ ಪ್ರಮಾಣದಲ್ಲಿ ಮುದ್ರಣ ಕೈಗೊಳ್ಳುವುದು ಆರ್ಥಿಕವಾಗಿ ಅನುಕೂಲಕರವಾಗಿ ಕಾಣುತ್ತದೆ. ಆದರೆ ದೊಡ್ಡ ಪ್ರಕಾಶಕರಿಗೆ ಇದು ಹಾಗೆ ಕಾಣುವುದಿಲ್ಲ. ಸಣ್ಣ ಪ್ರಕಾಶಕರು ತಮ್ಮ ಪ್ರಕಟಿತ ಬೆಲೆಗಳಲ್ಲಿ ದೊಡ್ಡ ಪ್ರಕಾಶಕರಿಗೆ ಕೊಡುವುದು ಸಾಧ್ಯವಾಗುವುದಕ್ಕಿಂತಲೂ ಹೆಚ್ಚಿನ ಡಿಸ್ಕೌಂಟ್ ಅನ್ನು ಕೊಡಬಲ್ಲರು. ಈ ವಿಧಾನದಿಂದ ಸಗಟು ವ್ಯಾಪಾರಸ್ಥರಿಗೆ ಮತ್ತು ಅನೇಕ ಸಲ ಗ್ರಂಥಾಲಯಗಳಿಗೆ, ಕೊಳ್ಳಲು ಒಂದು ಬಲವಾದ ಹಣಕಾಸಿನ ಉತ್ತೇಜನವನ್ನು ನೀಡುವುದರಿಂದ ಇಂತಹ ಪುಸ್ತಕಗಳು, ಭಾರತೀಯ ಗ್ರಂಥಾಲಯಗಳಿಗೆ ಪುಸ್ತಕ ಕೊಳ್ಳಲು ಲಭ್ಯವಿರುವ ವಾರ್ಷಿಕ ಅನುದಾನಗಳ ಸೀಮಿತ ಗಂಟಿಗೆ ಬಾಯಿ ಹಾಕುತ್ತವೆ. ಪ್ರಕಟಿಸುವ ಪುಸ್ತಕಗಳ ಸಂಖ್ಯೆ ಹೆಚ್ಚಾಗುವ ಪ್ರಮಾಣದಲ್ಲಿ ಈ ಗಂಟಿನ ಗಾತ್ರ ಹೆಚ್ಚಾಗುವುದಿಲ್ಲ. ಅಂದರೆ ಪುಸ್ತಕಗಳಿಗೆ ಲಭ್ಯವಿರುವ ಅನುದಾನ ವಾರ್ಷಿಕ ಶೇಕಡ 10 ರಷ್ಟು ಹೆಚ್ಚಾಗಬಹುದು ಅಥವಾ ಆರ್ಥಿಕತೆ ಅಹಿತಕರ ಸ್ಥಿತಿಯಲ್ಲಿದ್ದರೆ (ಭಾರತದಲ್ಲಿ ಸರ್ಕಾರವನ್ನು ನಡೆಸುವ ಜಾಣ

ಜನರು ಮೊದಲು ಕತ್ತರಿಸುವುದು ಪುಸ್ತಕಗಳ ಮೇಲಿನ ವೆಚ್ಚವನ್ನೇ ಹೊರತು ರಕ್ಷಣಾ ವೆಚ್ಚವನ್ನಲ್ಲ) ಕಡಿಮೆಯೂ ಆಗಬಹುದು; ಆದರೆ ಪ್ರಕಟಿಸಲಾಗುವ ಪುಸ್ತಕಗಳ ಸಂಖ್ಯೆ ಹಿಂದಿನ ವರ್ಷ ಪ್ರಕಟಿಸಿದ ಸಂಖ್ಯೆಯ ಶೇಕಡ 20ರಷ್ಟು ಹೆಚ್ಚಾಗಿರಬಹುದು. ಇವುಗಳ ಒಟ್ಟಾರೆ ಪರಿಣಾಮವೆಂದರೆ ಮುದ್ರಿಸುವ ಪ್ರತಿ ಪುಸ್ತಕದ ಪ್ರತಿಗಳ ಸಂಖ್ಯೆ ಕಡಿಮೆಯಾಗುತ್ತದೆ ಹಾಗೂ ವಾರ್ಷಿಕವಾಗಿ ಪ್ರಕಟವಾಗುವ ಪುಸ್ತಕಗಳ ಸಂಖ್ಯೆ ಅಧಿಕವಾಗುತ್ತದೆ. ಇಂತಹ ಒಂದು ಪ್ರವೃತ್ತಿ ಗುಣಮಟ್ಟದ ಬಗ್ಗೆ ಪ್ರಜ್ಞೆ ಇರುವ ಪ್ರಕಾಶನಕ್ಕೆ ವಿರುದ್ಧವಾದದ್ದು.

ದಪ್ಪ ರಟ್ಟಿನ ಹೆಚ್ಚು ಹೆಚ್ಚು ಪುಸ್ತಕಗಳನ್ನು ಸ್ಥಳೀಯವಾಗಿ ಬರೆಯಲಾಗುತ್ತಿದೆ ಹಾಗೂ ಹೆಚ್ಚು ಹೆಚ್ಚು ಭಾರತೀಯ ಪ್ರಕಾಶಕರು ಅವುಗಳನ್ನು ಪ್ರಕಟಿಸುತ್ತಿದ್ದಾರೆ ಹಾಗೂ ಇವರೆಲ್ಲರೂ ಅದೇ ಸಣ್ಣ ಮತ್ತು ಕೆಲವೊಮ್ಮೆ ಕರಗುತ್ತಿರುವ ಗಂಟಿಗೇ ಬಾಯಿ ಹಾಕಿದ್ದಾರೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲವೆಂದು ತೋರುತ್ತಿದೆ. ಈ ಪುಸ್ತಕಗಳ ಮುದ್ರಣದ ಹೆಚ್ಚಳದ ಶೇಕಡಾವಾರು ಪ್ರಮಾಣದ ಬಗ್ಗೆ ಖಚಿತವಾಗಿ ನನಗೆ ತಿಳಿದಿಲ್ಲ. ಸರ್ಕಾರಿ ಸಂಸ್ಥೆಗಳ ಸಹಾಯಧನ ನೀತಿಯಿಂದ ಈ ಪರಿಸ್ಥಿತಿ ಸುಧಾರಿಸಿಲ್ಲ. ಈ ಸಂಸ್ಥೆಗಳು ಎಲ್ಲ ರೀತಿಯ ಸಾಮಗ್ರಿ ಅಥವಾ ವಿದ್ವತ್ಪ್ರಬಂಧಗಳ ಪ್ರಕಟಣೆಗೆ ನೆರವಾಗಲು ಸಣ್ಣ ಅಥವಾ ದೊಡ್ಡ ಅನುದಾನವನ್ನು ಕೊಡಲು ತಯಾರಿರುವಂತೆ ತೋರುತ್ತದೆ. ಈ ಅನುದಾನಗಳ ಗಾತ್ರ ಮತ್ತು ಲಭ್ಯತೆ (ವಿದ್ವಾಂಸರಿಗೆ ದೊರೆಯುವ ಪ್ರಯಾಣ ಅನುದಾನಗಳಿಗೂ ಈ ಮಾತು ನಿಜವಾಗಿರುವಂತೆ) ಕೃತಿಯ ಸಮಂಜಸ ಮೌಲ್ಯಮಾಪನಕ್ಕಿಂತಲೂ ಹೆಚ್ಚಾಗಿ 'ವಿದ್ವಾಂಸರ' ಸ್ಥಾನ ಅಥವಾ ಅಧಿಕಾರ ಶ್ರೇಣಿಗಳಲ್ಲಿ ಆತನಿಗಿರುವ ವರ್ಚಸ್ಸನ್ನು ಅವಲಂಬಿಸಿರುವಂತೆ ತೋರುತ್ತದೆ. ಸಂಕ್ಷಿಪ್ತವಾಗಿ ಹೇಳುವುದಾದರೆ, ಎಂತಹುದೇ ಸಾಮಗ್ರಿಯಾದರೂ ಭಾರತದಲ್ಲಿ ಪ್ರಕಟಗೊಳ್ಳಬಹುದು ಹಾಗೂ ಹೆಚ್ಚು ಹೆಚ್ಚಾಗಿ ಪ್ರಕಟಗೊಳ್ಳುತ್ತಿದೆ ಕೂಡ. ಸಂಪನ್ಮೂಲಗಳು ದುರ್ಲಭವಾಗಿರುವ ಮತ್ತು ಅವುಗಳಿಗೆ ಸ್ಪರ್ಧೆ ಅಧಿಕಾಧಿಕವಾಗಿ ಘೋರವಾಗುತ್ತಿರುವ ದೇಶದಲ್ಲಿ, ಹಣವಿರುವ ಯಾವುದೇ ವಲಯಕ್ಕೆ ಎಲ್ಲ ರೀತಿಯ ಜನರು ಮುಗಿಬಿದ್ದು ಗಂಟನ್ನೆ ಬಾಚುತ್ತಾರೆ. ಅವರ ಉದ್ದೇಶ ಹಣ ಮಾಡುವುದೇ ಹೊರತು ಸಾಬೂನಿನ ಮಾರಾಟಕ್ಕಿಂತ ಭಿನ್ನ ಎಂದು ಗುರುತಿಸಬಹುದಾದ ರೀತಿಯಲ್ಲಿ ಪುಸ್ತಕಗಳನ್ನು ಪ್ರಕಟಿಸುವುದಲ್ಲ. ಇಂತಹ ಸಂಸ್ಕೃತಿ ಇರುವಾಗ ಮತ್ತು ಸರ್ಕಾರದ ನೀತಿಗಳು ಹೀಗಿರುವಾಗ, ಪ್ರಕಾಶನ ಕಾರ್ಯದ ಬಂಡೆಯ ಆಕೃತಿಯನ್ನು ಕಾಪಾಡಿಕೊಂಡು ಅದು ಗುಡ್ಡದಿಂದ ಸರ್‍ರನೆ ಜಾರಿ ಬೀಳುವುದನ್ನು ತಪ್ಪಿಸುವುದು, ಬಂಡೆಯನ್ನು ಗುಡ್ಡದ ಮೇಲಕ್ಕೆ ಒಯ್ಯುವಷ್ಟೇ ಅತ್ಯಂತ ಕಠಿಣವಾದ ಕಾರ್ಯ. ಇದರಿಂದಾಗಿ ಹಸ್ತಪ್ರತಿಗಳನ್ನು ಸಂಗ್ರಹಿಸುವಾಗ ಗುಣಮಟ್ಟದ ಬಗ್ಗೆ ಪ್ರಜ್ಞೆ ಹೊಂದಿರುವುದೂ ಅವುಗಳನ್ನು ನಿಷ್ಪಕ್ಷಪಾತವಾಗಿ ಮೌಲ್ಯಮಾಪನ ಮಾಡುವುದೂ ಗುಣಮಟ್ಟದ ಬಗ್ಗೆ ಪ್ರಜ್ಞಾವಂತರಾದ ವಿದ್ವಾಂಸರು ಮತ್ತು ವಿದ್ಯಾಕೇಂದ್ರಗಳು ಕಾಣೆಯಾಗುತ್ತಿರುವ ರೀತಿಯಲ್ಲಿ, ಸತತವಾಗಿ ನಶಿಸುತ್ತಿದ್ದು, ಲೆಕ್ಕಕ್ಕೆ ಬಾರದೆ ಹೋಗುತ್ತಿದೆ. ಬಹುಶಃ ಇದರ ಪ್ರಮಾಣ ಇನ್ನೂ

ಗಾಬರಿಯಾಗುವ ಮಟ್ಟ ತಲುಪಿಲ್ಲ; ಏಕೆಂದರೆ ಭಾರತದಲ್ಲಿ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ವಿದ್ವಾಂಸರಿದ್ದಾರೆ, ಉತ್ತಮ ಲೇಖಕರಿದ್ದಾರೆ, ಸಾಕಷ್ಟು ಸಂಖ್ಯೆಯಲ್ಲಿ ನುರಿತ ಸಂಪಾದಕರಿದ್ದಾರೆ. ಆದರೆ ಕತ್ತಲಿನ ಒಂದು ವಾತಾವರಣದಲ್ಲಿ ಆಗಾಗ ಖಿನ್ನಗೊಂಡ ಮತ್ತು ತೃಣವಾದ ರೀತಿಯಲ್ಲಿ ಒಂದಿಷ್ಟು ಬೆಳಕು ಹರಡುವಂತೆ ತೋರುತ್ತದೆ.

ಐದನೆಯದಾಗಿ, ಹಸ್ತಪ್ರತಿಯನ್ನು ಪುಸ್ತಕವನ್ನಾಗಿ ಪರಿವರ್ತಿಸಲು ಬೇಕಾದ ಹಣಕಾಸು, ಹಾಕಿದ ಹಣದ ಮೇಲೆ ಬರಬಹುದಾದ ಹಣ, ಲಾಭ ಬರುವುದಕ್ಕೆ ಹಿಡಿಯುವ ಸಮಯ – ಇವು ಹಸ್ತಪ್ರತಿ ಸಂಗ್ರಹ ಮತ್ತು ಪ್ರಕಾಶನದ ಮೌಲ್ಯಮಾಪನವನ್ನು ಹೆಚ್ಚಾಗಿ ತೀರ್ಮಾನಿಸುತ್ತವೆ. ಭಾರಿ ಪ್ರಮಾಣದ ಸಂಪಾದಕೀಯ ಸಮಯ ಮತ್ತು ಮುದ್ರಣ ಸಮಯ, ಉತ್ತಮವಾದ ಕಾಗದ, ಪೂರ್ಣವಾಗಿ ಬಣ್ಣದ ಚಿತ್ರಗಳು – ಇವುಗಳ ಮೇಲೆ ಹೂಡುವ ಬಂಡವಾಳದ ಜೊತೆಗೆ, ಅಧಿಕ ಬೆಲೆ ಮತ್ತು ವೆಚ್ಚದ ಬಗ್ಗೆ ಜಾಗೃತವಾಗಿರುವ ಮಾರುಕಟ್ಟೆಯಲ್ಲಿ ಮಾರಾಟ ವಿಳಂಬವಾಗಿ ಆಗುವುದು ಸೇರುವುದರಿಂದ ಪ್ರಕಾಶಕರು ಎಚ್ಚರಿಕೆಯಿಂದ ಹೆಜ್ಜೆಯನ್ನಿಡುತ್ತಾರೆ. ಭಾರತೀಯ ಪ್ರಕಾಶನ ರಂಗದಲ್ಲಿ ಅಧಿಕ ಬಂಡವಾಳ ಹೂಡಿಕೆಯ ಅಭಾವವಿರುವುದರಿಂದ, ಸಾಲದ ಅವಧಿಗಳು ದೀರ್ಘವಾಗಿರುವುದರಿಂದ ಹಾಗೂ ಹಾಕಿದ ಹಣವನ್ನು ಮರಳಿ ಪಡೆಯುವುದು ನೋವಿನ ಹಾಗೂ ಕೆಲವೊಮ್ಮೆ ಅಸಾಧ್ಯ ವ್ಯವಹಾರವಾಗಿರುವುದರಿಂದ ಪ್ರಕಾಶಕರು ಎಚ್ಚರಿಕೆಯಿಂದ ಮುಂದೆ ನಡೆಯುತ್ತಾರೆ. ಇದರಿಂದಾಗಿಯೇ ಅನೇಕ ಪ್ರಕಾಶಕರು ನಿರರ್ಥಕ ಮುದ್ರಣ ಸಂಸ್ಥೆಗಳನ್ನು ಹೋಲುತ್ತಾರೆ; ಈ ಪ್ರಕಾಶಕರು ಅನುದಾನಗಳನ್ನೂ, ಸಹಾಯಧನಗಳನ್ನೂ ಕೇಳುತ್ತಾರೆ ಹಾಗೂ ಅವರು ಹೂಡಿದ ಹಣಕ್ಕೆ ನಷ್ಟವಾಗದ ರೀತಿಯಲ್ಲಿ ಇವು ದೊರೆತರೆ ಆಗ ಇದ್ದಕ್ಕಿದ್ದಂತೆ ಹಸ್ತಪ್ರತಿ, ಸಾಹಿತ್ಯಕ್ಕೆ ಅದರ ಮೌಲ್ಯ ಏನೇ ಇರಲಿ ಅಥವಾ ವಿಚಾರಗಳು ಮತ್ತು ಸಂಸ್ಕೃತಿಗೆ ಅದರ ಕೊಡುಗೆ ಏನೇ ಇರಲಿ, ಪ್ರಕಟಣೆಗೆ ಯೋಗ್ಯವಾಗಿಬಿಡುತ್ತದೆ.

ಆರನೆಯದಾಗಿ, ಮಾರಾಟ ಖಚಿತವಾಗಿರುವಂತಹ ಮಾರುಕಟ್ಟೆ ಮುದ್ರಣದ ಒಂದು ಸಹಾಯಧನ ಏನು ಮಾಡುತ್ತದೋ ಅದನ್ನೇ ಮಾಡುತ್ತದೆ. ಮಾರಾಟ ಖಚಿತವಿರುವ ಮಾರುಕಟ್ಟೆ ಇದ್ದರೆ ಅಥವಾ ಖರ್ಚಾಗದ ಪುಸ್ತಕಗಳನ್ನು ವಾಪಸ್ಸು ಕೊಳ್ಳುವ ವ್ಯವಸ್ಥೆ ಇದ್ದರೆ ಪ್ರಕಾಶಕ ಸಂತೋಷವಾಗಿ ಮುದ್ರಣವನ್ನು ವಹಿಸಿಕೊಳ್ಳುತ್ತಾನೆ, ಹಸ್ತಪ್ರತಿಯನ್ನು ಬಾಚಿಕೊಳ್ಳುತ್ತಾನೆ, ಅದರ ಮೌಲ್ಯಮಾಪನವನ್ನು ಅನುಕೂಲಕರವಾಗಿ ಮಾಡುತ್ತಾನೆ, ಅದನ್ನು ಬೇಗ ಮುದ್ರಿಸುತ್ತಾನೆ, ಬಂದ ಹಣವನ್ನು ಬ್ಯಾಂಕ್‌ನಲ್ಲಿಟ್ಟು ಗೋವೆಗೆ ವಿಹಾರ ಹೋಗುತ್ತಾನೆ. ಕೆಲವೊಮ್ಮೆ ಪುಸ್ತಕಗಳನ್ನು ಖಚಿತವಾಗಿ ಹಿಂದಕ್ಕೆ ಕೊಳ್ಳುವ ವ್ಯವಸ್ಥೆಯನ್ನು, ಪುಸ್ತಕಗಳನ್ನು ಕೊಳ್ಳಲು ಸರಿಯಾದ ಸ್ಥಾನದಲ್ಲಿರುವ ರಾಜಕಾರಣಿಗಳು ಮತ್ತು ಅಧಿಕಾರಿಗಳು ಮಾಡುತ್ತಾರೆ. ಇನ್ನು ಕೆಲವು ಸಲ ವ್ಯವಹಾರ ನೇರವಾಗಿ, ಚೊಕ್ಕವಾಗಿರುತ್ತದೆ. ಅಂದರೆ ಕೊಳ್ಳುವುದಕ್ಕೆ ನಿರ್ದಿಷ್ಟ

ಖಚಿತತೆ ಇದ್ದರೂ ಸರಿ, ಇಲ್ಲದಿದ್ದರೂ ಸರಿ, ಅಂತಹ ಪುಸ್ತಕದ ಪ್ರಕಟಣೆಯಂತೂ ನಿಶ್ಚಿತವಾಗಿದ್ದಾಗ ಅದರ ಅನೇಕ ಪ್ರತಿಗಳನ್ನು ಕೊಳ್ಳಲು ಯಾರೋ ಒಪ್ಪಿರುತ್ತಾರೆ.

ಕೊನೆಯದಾಗಿ ಮತ್ತು ಬಹುಶಃ ಅತಿ ಮುಖ್ಯವಾಗಿ ಹಸ್ತಪ್ರತಿ ಸಂಗ್ರಹ, ಹಸ್ತಪ್ರತಿ ಸಂಗ್ರಹಿಸುವವರ ಮನೋಧರ್ಮ ಮತ್ತು ಒಲವುಗಳನ್ನು ಅವಲಂಬಿಸಿರುತ್ತದೆ. ಆದ್ದರಿಂದಲೇ ಪ್ರಕಾಶಕರು ಕೃತಿಗಳನ್ನು ಆರಿಸುವುದಕ್ಕಿಂತಲೂ ಹೆಚ್ಚು ಎಚ್ಚರಿಕೆಯಿಂದ ತಮ್ಮ ಹಸ್ತಪ್ರತಿ ಸಂಪಾದಕರನ್ನು ಆರಿಸುವುದು ಅತ್ಯಂತ ಮುಖ್ಯ. ಭಾರತದಲ್ಲಿ ಒಮ್ಮೆ ಬಹಳಷ್ಟು ಭರವಸೆಯನ್ನು ತೋರಿದ ಪ್ರಕಾಶನ ಸಂಸ್ಥೆಗಳ ಅವನತಿಗೆ ಒಂದು ನಿಸ್ಸಂದಿಗ್ಧ ಕಾರಣವೆಂದರೆ ಈ ಸಂಸ್ಥೆಗಳು ಎಂತಹ ಹಸ್ತಪ್ರತಿ ಸಂಗ್ರಾಹಕರನ್ನು ಬಳಸಿದರೆಂದರೆ ಅವರು ಕೃತಿಗಳ ಪಟ್ಟಿಗಳನ್ನು ಬೆಳೆಸುವುದರಲ್ಲಿ ವಿವೇಚನೆಯನ್ನು ತೋರದೆ ಇದ್ದುದರ ಜೊತೆಗೆ ಪುಸ್ತಕಗಳನ್ನು ಓದುವವರು ಒಂದು ಪ್ರಕಾಶನ ಸಂಸ್ಥೆಯ ಪ್ರಕಟಣೆಗಳಿಗೆ ಗೌರವ ಕೊಡುವ ರೀತಿಯಲ್ಲಿ ಸಂಸ್ಥೆಯ ದೀರ್ಘಾವಧಿ ಅಗತ್ಯಗಳಿಗೆ ಸ್ಪಂದಿಸದೆ ಇದ್ದುದೂ ಆಗಿದೆ. ಭಾರತದಲ್ಲಿ ಈಗಿನ ಪ್ರವೃತ್ತಿ ಅದರಲ್ಲೂ ಸಣ್ಣ ಮತ್ತು ಅಲ್ಪ ಬಂಡವಾಳ ತೊಡಗಿಸುವ ವ್ಯಾಪಾರಿ ಸಂಸ್ಥೆಗಳ ಪ್ರವೃತ್ತಿ ಏನೆಂದರೆ ಎಷ್ಟು ಬೇಗ ಸಾಧ್ಯವೋ ಅಷ್ಟು ಬೇಗ ಹಣ ಗಳಿಸುವುದು ಮತ್ತು ಆ ಬಂಡವಾಳವನ್ನು ಜಮೀನು, ಮನೆ ಅಥವಾ ಚಿನ್ನದಂತಹ ಹೆಚ್ಚು ಭದ್ರವಾದ ಕ್ಷೇತ್ರಗಳಲ್ಲಿ ಹಾಕುವುದೇ ಆಗಿದೆ. ಬಾಡಿಗೆ ಹುಡುಕುವುದು ಎಂದು ಅರ್ಥಶಾಸ್ತ್ರಜ್ಞರು ಈ ಪ್ರವೃತ್ತಿಯನ್ನು ಕರೆಯುತ್ತಾರೆ. ಈ ಪ್ರವೃತ್ತಿ ಸಾಮಾನ್ಯವಾಗಿ ಒಂದು ಬೃಹತ್ ಪ್ರಕಾಶನ ಸಂಸ್ಥೆಯನ್ನು ಅಭಿವೃದ್ಧಿಪಡಿಸುವ, ಒಂದು ಪ್ರಕಾಶನ ಸಂಸ್ಕೃತಿಯನ್ನು ಬೆಳೆಸುವ ಮತ್ತು ಒಂದು ಮರ್ಯಾದೆಯ ಪ್ರಕಾಶನ ಪಟ್ಟಿಯನ್ನು ರಚಿಸುವಂತಹ ಸಾಂಸ್ಥಿಕ ನಿರ್ಮಾಣ ಮತ್ತು ದೀರ್ಘಾವಧಿ ಕಾರ್ಯತಂತ್ರಗಳನ್ನು ಹೊಂದುವ ಯಾವುದೇ ಪ್ರಯತ್ನವನ್ನು ವಿರೋಧಿಸುತ್ತದೆ. ಏನೆಲ್ಲ ಅಡಚಣೆಗಳಿದ್ದರೂ, ಈ ಗುರಿಗಳನ್ನು ಸಾಧಿಸಲು ಶ್ರಮಿಸುವುದು ಉತ್ತಮ ಹಸ್ತಪ್ರತಿ ಸಂಪಾದಕನ ಕರ್ತವ್ಯವೆಂದು ನಾನು ಹೇಳುತ್ತೇನೆ.

ಹಸ್ತಪ್ರತಿ ಸಂಪಾದನೆ ಮತ್ತು ಅವುಗಳ ಮೌಲ್ಯಮಾಪನ ಇಡೀ ಪ್ರಕಾಶನ ವ್ಯವಹಾರಕ್ಕೆ ಸಮನಾದ್ದು ಎಂದು ಇಲ್ಲಿ ವಿವರಿಸಿರುವುದರಿಂದ – ಅವು ಏನಾದರೂ ಸಾರ್ಥಕ ಅರ್ಥ ಹೊಂದಿರಬೇಕಾದರೆ ಹಾಗಿರಲೇಬೇಕು-ಈ ಬಗ್ಗೆ ಹೇಳುತ್ತಲೇ ಹೋಗಬಹುದು ಹಾಗೂ ಭಾರತದಲ್ಲಿ ಪ್ರಕಾಶನ ಸಂಸ್ಕೃತಿ ಮತ್ತು ವಿಧಾನಗಳ ಬಗ್ಗೆಯೇ ಒಂದು ಇಡೀ ಪುಸ್ತಕವನ್ನೇ ಬರೆಯಬಹುದು. ಒಂದು ಸಣ್ಣ ಲೇಖನದ ಚೌಕಟ್ಟಿನಲ್ಲಿ, ಕೆಲವು ಮೂಲಭೂತ ಉದಾಹರಣೆಗಳೊಂದಿಗೆ, ನನ್ನ ಅನುಭವಕ್ಕೆ ಬಂದಂತೆ, ಹಸ್ತಪ್ರತಿಗಳ ಸಂಗ್ರಹ ಮತ್ತು ಮೌಲ್ಯಮಾಪನದಲ್ಲಿ ಏನೆಲ್ಲ ಮುಖ್ಯವಾಗಿ ಒಳಗೊಂಡಿದೆ ಎಂಬುದನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

# ಗ್ರಂಥ ಸಂಪಾದನೆಯ ಪ್ರಕ್ರಿಯೆ

**ಡೇವಿಡ್ ದಾವಿಡರ್**

ಪ್ರಕಾಶನ ಕೆಲಸ ಬಹಳ ಸರಳವಾಗಿದ್ದ ಕಾಲ ಒಂದಿತ್ತು. ಮುದ್ರಿತ ಅಕ್ಷರದ ಬಗ್ಗೆ ಪ್ರೀತಿ ಮತ್ತು ಒಂದಿಷ್ಟು ವಿನ್ಯಾಸ ಪ್ರಜ್ಞೆ ಇದ್ದ ಅನುಕೂಲವಂತ ಸಂಭಾವಿತರು ಸಮರ್ಥ ಲೇಖಕರಿಂದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಉತ್ತಮ ಮುದ್ರಣ ಸಂಸ್ಥೆಗಳಿಗೆ ಅವುಗಳನ್ನು ಕಳಿಸಿ ಮುದ್ರಿತಗೊಂಡ ಪುಸ್ತಕಗಳನ್ನು ಪುನಃ ಪಡೆದುಕೊಂಡು ಅವುಗಳನ್ನು ಮಾರುತ್ತಿದ್ದರು ಹಾಗೂ ಈ ಕಾರ್ಯವನ್ನು ಮತ್ತೆ ಮುಂದುವರೆಸುತ್ತಿದ್ದರು.

ಇಂದು ನಮಗೆಲ್ಲ ತಿಳಿದಿರುವಂತೆ ಪ್ರಕಾಶನ ಒಂದು ವಾಣಿಜ್ಯೋದ್ಯಮವಾಗಿದೆ. ಅನೇಕ ಉದ್ಯಮಗಳಿಗಿಂತ ಹೆಚ್ಚಿನ ತೃಪ್ತಿ ಕೊಡುವ ಮತ್ತು ಹೆಚ್ಚು ಮುಖ್ಯವಾದ ಉದ್ಯಮವಾಗಿದೆ ಹಾಗೂ ಅಂತಿಮವಾಗಿ ಹಣಕಾಸಿನ ಫಲಿತಾಂಶವನ್ನು ಸಂಪೂರ್ಣವಾಗಿ ಅವಲಂಬಿಸಿದ ಉದ್ಯಮವೂ ಆಗಿದೆ. ಈ ಮಾತು ವರ್ಷಕ್ಕೆ ಎರಡೋ ಮೂರೋ ಶೀರ್ಷಿಕೆಗಳನ್ನು ಪ್ರಕಟಿಸುವ ಸಣ್ಣ ಪ್ರಕಾಶನ ಸಂಸ್ಥೆಗೆ ಎಷ್ಟು ನಿಜವೋ ವರ್ಷಕ್ಕೆ ಸಾವಿರಾರು ಪುಸ್ತಕಗಳನ್ನು ಹೊರತರುವ ಬೃಹತ್ ಪ್ರಕಾಶನ ಸಂಸ್ಥೆಗೂ ಅಷ್ಟೇ ನಿಜ. ಆದರೆ ಪ್ರಕಾಶನ ಕೆಲಸ ಒಂದು ಉದ್ಯಮವಾದರೆ ಅದು ಸಾಬೂನು ತಯಾರಿಸಿ ಮಾರುವುದನ್ನು ಖಂಡಿತ ಮೀರಿಸುತ್ತದೆ. ಏಕೆಂದರೆ ಈ ಉದ್ಯಮದಲ್ಲಿ ತೊಡಗಿರುವ ನಾವೆಲ್ಲರೂ ವಿಚಾರಗಳಿಗೆ ಆಕರ್ಷಣೀಯವಾದ ತೊಡುಗೆ ತೊಡಿಸಿ ಪ್ರದರ್ಶಿಸುವ ಹಾಗೂ-ಈ ಮಾತನ್ನು ಹೇಳಿಬಿಡುತ್ತೇನೆ-ಒಂದಲ್ಲ ಒಂದು ರೀತಿಯಲ್ಲಿ ಜ್ಞಾನವನ್ನು ಉಂಟುಮಾಡುವ ಮಹತ್ಕಾರ್ಯದಲ್ಲಿ ಭಾಗಿಗಳಾಗಿದ್ದೇವೆ. (ನಾನಿದನ್ನು ಹೇಳುವಾಗ ಸ್ವಪ್ರತಿಷ್ಠೆಯನ್ನು ತೋರಿಸುತ್ತಿಲ್ಲ ಅಥವಾ ಯೋಗ್ಯತೆ ಇದೆ ಎಂದು ನಟಿಸುತ್ತಿಲ್ಲ.) ಪ್ರಕಾಶನ ಉದ್ಯಮ ಅದರ ಅತ್ಯುತ್ತಮ ಕಲ್ಪನೆಯಲ್ಲಿ ಒಲವಿನ ವೃತ್ತಿಯಾಗಬಹುದು, ಆದರ ಅತ್ಯಂತ ಕೆಟ್ಟ ಕಲ್ಪನೆಯಲ್ಲಿ ಇನ್ನಾವುದೇ ರೀತಿಯ ಕಸುಬಾಗಬಹುದು. ಆದರೆ ಒಂದು

ಸತ್ಯಾಂಶವನ್ನು ಎಂದೂ ಮರೆಯಬಾರದು – ಪ್ರಕಾಶನ ಒಂದು ಉದ್ಯಮ. ಈ ಸತ್ಯಾಂಶವನ್ನು ಪ್ರಕಾಶನ ಕ್ಷೇತ್ರವನ್ನು ಟೀಕಿಸುವವರು ಕಲಿಯಲು ಸಿದ್ಧರಿಲ್ಲವೆಂದು ತೋರುತ್ತದೆ. ನಾವು ಉದ್ಯಮದಲ್ಲಿ ಸರಿಯಿಲ್ಲದಿದ್ದರೆ ನಾವು (ಸೃಜನಾತ್ಮಕವಾಗಿ ಹೇಳುವುದಾದರೆ) ಒಳ್ಳೆಯ ಅಥವಾ ಕೆಟ್ಟ ಪ್ರಕಾಶಕರಾಗಲಾರೆವು.

ಈ ಅಂಶವನ್ನು ಆಧಾರವಾಗಿಟ್ಟುಕೊಂಡಾಗ ಪ್ರಕಾಶನ ಪ್ರಕ್ರಿಯೆಯ ಮೊದಲ ಕಾರ್ಯನಿರ್ವಾಹಕನಾದ ಸಂಪಾದಕ ತನ್ನ ಅತ್ಯುತ್ತಮ ಸಾಮರ್ಥ್ಯಕ್ಕನುಗುಣವಾಗಿ ಒಬ್ಬ ಒಳ್ಳೆಯ ವ್ಯವಹಾರಸ್ಥನೂ ಆಗಿರಬೇಕಾಗುತ್ತದೆ. ಪುಸ್ತಕಗಳನ್ನು ಪ್ರೀತಿಸುವುದಷ್ಟೇ ಸಾಲದು, ಕೇವಲ ಬರೆವಣಿಗೆಯ ದೃಷ್ಟಿಯಿಂದ ಉತ್ತಮ ಬರವಣಿಗೆಯನ್ನು ಮೆಚ್ಚಿಕೊಂಡರೆ ಸಾಲದು, (ಇದೂ ಸಹ ಉತ್ತಮ ಸಂಪಾದಕನಾಗುವುದಕ್ಕೆ ಬಹಳ ಮುಖ್ಯವೇ) ನೀವು ಪ್ರಕಟಿಸಲು ಇಚ್ಛಿಸುವ ಪುಸ್ತಕ ಚೆನ್ನಾಗಿ ಮಾರಾಟವಾಗಬೇಕಾದರೆ ಆ ಪುಸ್ತಕ ಹೇಗಿರಬೇಕು ಎಂಬ ಪ್ರಜ್ಞೆಯೂ ಇರಬೇಕಾದ್ದು ಅಗತ್ಯ.

ಇಲ್ಲೊಂದು ವಿರೋಧಾಭಾಸವಿದೆ. ಏನು ಮಾರಾಟವಾಗುತ್ತದೆ ಎಂಬುದು ಪ್ರತಿಯೊಂದು ಪ್ರಕಾಶನ ಸಂಸ್ಥೆಗೂ ತಿಳಿದಿದ್ದರೆ, ಆಗ ಪ್ರಕಾಶನ ಅದ್ಭುತವಾದ ಶ್ರೀಮಂತ ವೃತ್ತಿಯಾಗುತ್ತದೆ. (ಹಣದ ದೃಷ್ಟಿಯಲ್ಲಿ ಶ್ರೀಮಂತ) ವಾಸ್ತವಾಂಶವೆಂದರೆ – ಇಲ್ಲಿ ನಾನು ವಿಶೇಷವಾಗಿ ವೃತ್ತಿ ಪ್ರಕಾಶನ ಅಥವಾ ಸಾಮಾನ್ಯ ಪ್ರಕಾಶನದ ಬಗ್ಗೆ ಮಾತನಾಡುತ್ತಿದ್ದೇನೆ – ಪ್ರಕಾಶನದ ಉದ್ಯಮ ಒಂದು ಖಚಿತವಲ್ಲದ ವಿಜ್ಞಾನ. ಒಮ್ಮೆ ಲೆಕ್ಕಾಚಾರ ಹಾಕಿದ ಮೇಲೆ, ಪುಸ್ತಕ ಪ್ರಕಟವಾದ ನಂತರ ಅವುಗಳನ್ನು ದಾಸ್ತಾನು ಸ್ಥಳಕ್ಕೆ ಕಳಿಸಿದ್ದಾದ ಮೇಲೆ ಅದು ತನ್ನ ಓದುಗರನ್ನು (ಅವರ ಸಂಖ್ಯೆ ಹತ್ತು ಸಾವಿರಗಟ್ಟಳೆ ಆದರೆ ಒಳ್ಳೆಯದು) ಕಂಡುಕೊಳ್ಳುವುದರಿಂದ, ಅದಕ್ಕೆ ತಕ್ಕ ಮರ್ಯಾದೆ ದೊರೆಯುವಂತೆ ಮಾಡುವ ವರ್ಣಿಸಲಾಗದ ಅಂಶವೊಂದು ಕೆಲಸ ಮಾಡುತ್ತದೆ ಎಂದು ನನಗೆ ಪರಿಚಯವಿರುವ ಪ್ರತಿಯೊಬ್ಬ ಪ್ರಕಾಶಕ ಆಶಿಸುತ್ತಾನೆ.

ನಾನು ಈ ಮೊದಲೇ ಹೇಳಿದಂತೆ ಸಂಪಾದಕ ಪ್ರಕಾಶನ ಸಂಸ್ಥೆಯ ಕೇಂದ್ರ ಬಿಂದು. ಪ್ರಕಾಶನ ಸಂಸ್ಥೆಗೆ ಹಸ್ತಪ್ರತಿಯೊಂದನ್ನು ಪಡೆದುಕೊಳ್ಳುವ, ಅದನ್ನು ಪರಿಷ್ಕರಿಸುವ, ಕಚ್ಚಾ ಹಸ್ತಪ್ರತಿ ತನ್ನ ಕೊನೆಯ ಸ್ವರೂಪವನ್ನು ಪಡೆಯುವಂತೆ ಮಾಡಲು ವಿನ್ಯಾಸ ಮತ್ತು ಮುದ್ರಣ ವಿಭಾಗಗಳೊಂದಿಗೆ ಸಂಪರ್ಕವನ್ನಿಟ್ಟುಕೊಳ್ಳುವ ಹಾಗೂ ನಂತರ ಪ್ರಚಾರ, ಮಾರುಕಟ್ಟೆ ಮತ್ತು ಮಾರಾಟ ವಿಭಾಗಗಳೊಂದಿಗೆ ಸಮನ್ವಯ ಹೊಂದಿ, ಪುಸ್ತಕದ ಮಾರಾಟದಲ್ಲಿ ಪಾಲ್ಗೊಳ್ಳುವ ವ್ಯಕ್ತಿ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹಸ್ತಪ್ರತಿ ಪುಸ್ತಕವಾಗಿ ರೂಪುಗೊಳ್ಳುವ ಪ್ರತಿಯೊಂದು ಹಂತದಲ್ಲೂ ಮತ್ತು ನಂತರವೂ ಸಂಪಾದಕನ ಪಾತ್ರ ಇದ್ದೇ ಇರುತ್ತದೆ. ಅದರಿಂದಾಗಿ ಆತ ಹಲವು ವಿಷಯಗಳಲ್ಲಿ ಕೌಶಲ್ಯ ಹೊಂದಿರಬೇಕಾಗುತ್ತದೆ. ಕೌಶಲ್ಯ ಎನ್ನುವ ಪದವನ್ನು ನಾನು ಕರಕುಶಲತೆ ಎನ್ನುವ ಅರ್ಥದಲ್ಲಿ ಬಳಸುತ್ತೇನೆ, ಕಲೆ ಎಂಬರ್ಥದಲ್ಲಲ್ಲ. ಏಕೆಂದರೆ ಒಬ್ಬ ಸಂಪಾದಕ ಒಬ್ಬ ಬಡಗಿಯಂತೆ ಕರಕುಶಲಿಯೇ ಹೊರತು ಕಲಾವಿದನಲ್ಲ. ಇಲ್ಲಿ ಲೇಖಕ ಕಲಾವಿದ ಎನ್ನುವ ಅಂಶವನ್ನು ಸಂಪಾದಕರು ಎಂದೂ

ಮರೆಯಬಾರದು. ಬಹುತೇಕ ಪ್ರಕಾಶನ ಸಂಸ್ಥೆಗಳು ಸಂಪಾದಕೀಯ ಕಾರ್ಯವನ್ನು ಎರಡು, ಕೆಲವೊಮ್ಮೆ ಮೂರು, ಸ್ಪಷ್ಟ ಮತ್ತು ಪ್ರತ್ಯೇಕ ವಿಭಾಗಗಳಾಗಿ ವಿಂಗಡಿಸುತ್ತವೆ ಹಾಗೂ ಪ್ರತಿ ವಿಭಾಗಕ್ಕೂ ಒಂದು ನಿರ್ದಿಷ್ಟ ರೀತಿಯ ಸಂಪಾದಕರಿರುತ್ತಾರೆ – ಹಸ್ತಪ್ರತಿ ಸಂಗ್ರಹಿಸುವ ಸಂಪಾದಕರು, ಸಾಲು ಸಂಪಾದಕರು ಮತ್ತು ಪಠ್ಯ ಸಂಪಾದಕರು. ನಿಯೋಜಿಸುವ ಸಂಪಾದಕರು ಅಥವಾ ಪ್ರವರ್ತಕ ಸಂಪಾದಕರು ಎಂದೂ ಕರೆಯಲಾಗುವ ಹಸ್ತಪ್ರತಿ ಸಂಗ್ರಾಹಕ ಸಂಪಾದಕರು ಒಂದು ಹಸ್ತಪ್ರತಿಯನ್ನು ಕೊಂಡು ಅದರ ಪ್ರಮುಖ ಪರಿಷ್ಕರಣೆಯನ್ನು ಕೈಗೊಂಡು ನಂತರ ಅದನ್ನು ಸಾಲು ಸಂಪಾದಕರಿಗೆ ಕಳಿಸುತ್ತಾರೆ. ಈ ಸಂಪಾದಕರು ಹಸ್ತಪ್ರತಿಯನ್ನು ಸಾಲುಸಾಲಾಗಿ ಪರಿಶೀಲಿಸುತ್ತಾರೆ ಹಾಗೂ ಒಪ್ಪ ಮಾಡುತ್ತಾ ಹೋಗುತ್ತಾರೆ ಮತ್ತು ನಂತರ ಪಠ್ಯ ಸಂಪಾದಕರಿಗೆ ಒಪ್ಪಿಸುತ್ತಾರೆ. ಇವರು ಕಾಗುಣಿತದ ತಪ್ಪುಗಳನ್ನು, ವಾಕ್ಯ ರಚನೆಯ ದೋಷಗಳನ್ನು ಪತ್ತೆ ಮಾಡಿ ಅವುಗಳನ್ನು ಟೈಪ್‌ಸೆಟ್ಟರ್‌ಗೆ ಗುರುತು ಹಾಕಿಕೊಡುತ್ತಾರೆ. ಆದರೆ ಕೆಲಸ ಆಗುವಾಗ ಈ ವಿಭಾಗಗಳಲ್ಲಿನ ವ್ಯತ್ಯಾಸಗಳು ಮಸುಕಾಗುತ್ತವೆ. ಸಾಲು ಸಂಪಾದಕರ ಕೆಲಸ ಪಠ್ಯ ಸಂಪಾದಕರ ಕೆಲಸದೊಂದಿಗೆ ಬೆರೆತುಹೋಗುತ್ತದೆ ಹಾಗೂ ಬಹಳಷ್ಟು ಹಸ್ತಪ್ರತಿ ಸಂಪಾದಕರು ಪಠ್ಯವನ್ನು ತಿದ್ದುತ್ತಾರೆ.

ಸಂಪಾದಕನಿಗೆ (ನಾನು ಹಸ್ತಪ್ರತಿ ಸಂಪಾದಕನನ್ನು ಕುರಿತು ಇಲ್ಲಿ ಹೇಳುತ್ತಿದ್ದೇನೆ) ಮೂರು ಮುಖ್ಯ ಕೆಲಸಗಳಿವೆ. ಈ ಪುಸ್ತಕದಲ್ಲಿ ಆತನ ಪಾತ್ರವನ್ನು ಬೇರೆಡೆ ವಿವರವಾಗಿ ವರ್ಣಿಸಲಾಗಿದ್ದರೂ, ಒಂದು ಹಸ್ತಪ್ರತಿ ಪ್ರಕಾಶನ ಪ್ರಕ್ರಿಯೆಗೆ ಹೇಗೆ ಒಳಪಡುತ್ತದೆ ಎಂಬುದನ್ನು ತಿಳಿಯಲು ನಮಗೆ ನೆರವಾಗುವ ಕೆಲವು ಮೂಲಭೂತ ವಿವರಗಳನ್ನು ನಾನಿಲ್ಲಿ ಸಂಕ್ಷಿಪ್ತವಾಗಿ ತಿಳಿಸುತ್ತೇನೆ. ಹಸ್ತಪ್ರತಿ ಸಂಪಾದಕನ ಮುಖ್ಯ ಕಾರ್ಯಗಳೆಂದರೆ: ಹಸ್ತಪ್ರತಿ ಸಂಪಾದನೆ, ಪರಿಷ್ಕರಣೆ ಮತ್ತು ಪ್ರಕಟಣೆ; ಅಂದರೆ ಮೊದಲಿಂದ ಕೊನೆಯವರೆಗೆ ಪುಸ್ತಕವನ್ನು ಪ್ರಕಾಶನ ಪ್ರಕ್ರಿಯೆಗೆ ಒಳಪಡಿಸುವುದು. ಹಸ್ತಪ್ರತಿ ಸಂಪಾದಕ ಲೇಖಕನಿಗೂ ಜವಾಬ್ದಾರ, ಪ್ರಕಾಶನ ಸಂಸ್ಥೆಗೂ ಜವಾಬ್ದಾರ. ಏನೇ ಸಮಸ್ಯೆ ಉಂಟಾದರೂ ಎಲ್ಲರೂ ಮೊರೆ ಹೋಗುವ ಸಾರ್ವತ್ರಿಕ ವ್ಯಕ್ತಿ; ತನ್ನ ಮುಂದಿನ ಪುಸ್ತಕದ ಬಗ್ಗೆ ಯಾವುದೇ ವಿಚಾರ ಹೊಳೆಯಲಿಲ್ಲ, ತನ್ನ ರಾಯಲ್ಟಿಯ ಚೆಕ್ ಬರಲಿಲ್ಲ, ಪುಸ್ತಕದಂಗಡಿಯೊಂದರಲ್ಲಿ ತನ್ನ ಪುಸ್ತಕದ ಒಂದು ಪ್ರತಿ ದೊರೆಯಲಿಲ್ಲ ಎನ್ನುವ ಲೇಖಕ; ಒಬ್ಬ ಪಾತ್ರಧಾರಿಯ ಕೂದಲಿನ ಬಣ್ಣದ ಬಗ್ಗೆ ಒಂದು ಅಸ್ಪಷ್ಟವಾದ ಅಂಶವನ್ನು ಅಥವಾ ಸ್ವಲ್ಪವೂ ಬಳಸಲಾಗದ ಒಂದು ಅಚ್ಚುಮೊಳೆ ಕುರಿತು ಚರ್ಚಿಸಬಯಸುವ ಸಂಪಾದಕೀಯ ಮತ್ತು ವಿನ್ಯಾಸ ವಿಭಾಗ; ಒಪ್ಪಂದದ ಯಾವುದೋ ಒಂದು ಅಂಶದ ಬಗ್ಗೆ ವಿವಾದ ಎತ್ತಲು ಇಚ್ಛಿಸುವ ಒಪ್ಪಂದಗಳ ವಿಭಾಗ; ತಮಗೆ ನೀಡಲಾದ ಪೂರ್ವಭಾವಿ ಮಾಹಿತಿ ಬಹಳ ಅಲ್ಪವಾಗಿತ್ತು ಎಂದು ದೂರುವ ಮಾರುಕಟ್ಟೆ ವಿಭಾಗ; ಸಂಪಾದಕ ಬಹಳ ಪುಸ್ತಕಗಳನ್ನು ಅಥವಾ ಬಹಳ ಕಡಿಮೆ ಪುಸ್ತಕಗಳನ್ನು ಕೊಳ್ಳುತ್ತಿದ್ದಾನೆ ಎಂದು ಭಾವಿಸುವ ಹಣಕಾಸು ವಿಭಾಗ-ಹೀಗೆ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ. ಆದರೆ

ಇದೆಲ್ಲವೂ ಕೆಟ್ಟದ್ದೇನಲ್ಲ. ಸ್ವಲ್ಪ ಮಾರ್ಗದರ್ಶನ ದೊರೆತರೆ ಶ್ರಮವಹಿಸಿ ದುಡಿಯುವ ಹಾಗೂ ಸಹಜ ಒಲವು ಹೊಂದಿದ ಸಂಪಾದಕ ಬೇಗನೆ ತನ್ನ ವೃತ್ತಿಯಲ್ಲಿ ಪರಿಣತನಾಗಬಲ್ಲ.

ಈಗ ಮೂಲಭೂತ ಅಂಶಗಳನ್ನು ಗಮನಿಸೋಣ. ನಾನೀಗಾಗಲೇ ತಿಳಿಸಿರುವಂತೆ ಹಸ್ತಪ್ರತಿ ಸಂಗ್ರಹಿಸುವುದು ಮೊದಲನೆ ಹೆಜ್ಜೆ. ಈ ಹಂತದಲ್ಲಿ ಸಂಪಾದಕ ಈ ಮುಂದಿನ ಪ್ರಶ್ನೆಗಳನ್ನು ತನಗೆ ತಾನೇ ಕೇಳಿಕೊಳ್ಳಬೇಕಾಗುತ್ತದೆ.

1. ಹಸ್ತಪ್ರತಿಯನ್ನು ಅಥವಾ ವಿಚಾರವನ್ನು ಪ್ರಕಟಿಸುವುದಕ್ಕೆ ಮುನ್ನ ಅದರ ಬಗ್ಗೆ ಬಹಳ ಶ್ರಮಿಸಬೇಕೆ ?
2. ವಿಷಯದ ಮೇಲೆ ಈಗಾಗಲೇ ಇರುವ ಪುಸ್ತಕಗಳಿಗಿಂತ ಈ ಪುಸ್ತಕ ಬೇರೆಯದಾಗಿದೆಯೇ ?
3. ಈ ಪುಸ್ತಕಕ್ಕೆ ಎಂತಹ ಮಾರುಕಟ್ಟೆ ಇದೆ ?
4. ಪ್ರಕಾಶನ ಸಂಸ್ಥೆಯ ಚೌಕಟ್ಟಿಗೆ ಅದು ಹೊಂದುತ್ತದೆಯೇ ?
5. ಪುಸ್ತಕ ಪ್ರಕಟಿಸಲು ಏನು ವೆಚ್ಚ ತಗಲುತ್ತದೆ ?
6. ಸಂಸ್ಥೆ ಅದಕ್ಕೆ ಸೂಕ್ತ ಬೆಲೆ ಹಾಕಿ ಸರಿಯಾಗಿ ಮಾರಲಾಗುತ್ತದೆಯೇ ?
7. ಎಲ್ಲ ಶ್ರಮದ ನಂತರ ಕೊನೆಯಲ್ಲಿ ಪುಸ್ತಕ ಲಾಭ ಗಳಿಸುವುದೇ ?

ಬಹುತೇಕ ಹಸ್ತಪ್ರತಿ ಸಂಪಾದಕರು ಈ ಪ್ರಶ್ನೆಗಳನ್ನು ತಂತಾನೇ ಕೇಳಿಕೊಳ್ಳುತ್ತಾರೆ ಹಾಗೂ ಮಾರುಕಟ್ಟೆ, ಹಣಕಾಸು ಮತ್ತು ಗ್ರಂಥಸ್ವಾಮ್ಯ ವಿಭಾಗಗಳ ಸಹೋದ್ಯೋಗಿಗಳಿಂದ ಅವರಿಗೆ ಈ ಬಗ್ಗೆ ಅಮೂಲ್ಯ ನೆರವು ದೊರೆಯುತ್ತದೆ. ಆದರೆ ಅಂತಿಮವಾಗಿ, ಪ್ರೇರಿತವಾಗಿಯೋ ಅಲ್ಲದೆಯೋ, ಅನೇಕ ಸಲ ಕೇವಲ ಎಣಿಕೆಯದಾದ ಮಾಹಿತಿಯ ಆಧಾರದಿಂದ ಹಸ್ತಪ್ರತಿ ಪಡೆಯುವ ನಿರ್ಧಾರವನ್ನು ಕೈಗೊಳ್ಳುವ ಕೆಲಸ ಸಂಪಾದಕರದು. ಏಕೆಂದರೆ ಪುಸ್ತಕಗಳ ಈ ವ್ಯವಹಾರ ಪ್ಲಾಸ್ಟಿಕ್ ಬಕೆಟ್‌ಗಳನ್ನು ಮಾರುವ, ಬೇಡಿಕೆ ಮತ್ತು ಉತ್ಪನ್ನವನ್ನು ಹೆಚ್ಚು ಸುಲಭವಾಗಿ ಗುರುತಿಸುವಂತಹ ವ್ಯವಹಾರವಲ್ಲ.

ಹಸ್ತಪ್ರತಿಯನ್ನು ಒಮ್ಮೆ ಕೊಂಡ ನಂತರ ಲೇಖಕ, ಗ್ರಂಥ ಸಂಪಾದಕೀಯ ವಿಭಾಗ, ಕಲಾ ವಿಭಾಗ, ಮುದ್ರಣ ವಿಭಾಗ, ಪ್ರಚಾರ, ಮಾರಾಟ ಮತ್ತು ಮಾರುಕಟ್ಟೆ ವಿಭಾಗ, ಹಕ್ಕುಗಳ ವಿಭಾಗ, ಮತ್ತು ಹಣಕಾಸಿನ ವಿಭಾಗದೊಂದಿಗೆ ಸಂಬಂಧ ಹೊಂದುವ ಮೂಲಕ ಪುಸ್ತಕದ ಪ್ರಟಣೆಯ ರೂಪರೇಶೆಗಳನ್ನು ಸಂಪಾದಕ ಸಿದ್ಧಪಡಿಸಬೇಕಗುತ್ತದೆ. ಲೇಖಕನ ಹೊರತಾಗಿ ಪ್ರಕಾಶನ ಪ್ರಕ್ರಿಯೆಯಲ್ಲಿ ಬೇರೆ ಯಾರಿಗೂ ಪುಸ್ತಕದ ಪ್ರಕಟಣೆಯ ಬಗ್ಗೆ ಏನೂ ತಿಳಿದಿರುವುದಿಲ್ಲ (ಅದರಲ್ಲೂ ಅದು ದೊಡ್ಡ ಪ್ರಕಾಶನ ಸಂಸ್ಥೆಯಾದರೆ); ಆದ್ದರಿಂದ ಪ್ರಕಟಣೆಯ ದಿನಾಂಕಕ್ಕೆ ಬಹಳ ಮೊದಲೇ ಸೂಕ್ತ ಕ್ರಮ ಕೈಗೊಳ್ಳುವುದಕ್ಕಾಗಿ ಸಂಪಾದಕ ಈ ಎಲ್ಲ ವಿಭಾಗಗಳನ್ನು ಜಾಗರೂಕಗೊಳಿಸಬೇಕಾಗುತ್ತದೆ. ಒಂದು ಪ್ರಕಾಶನ ಸಂಸ್ಥೆ ವರ್ಷಕ್ಕೆ ನೂರಾರು ಪುಸ್ತಕಗಳನ್ನು ಪ್ರಕಟಿಸುತ್ತಿದ್ದರೆ ಅಂತಹ ಕಡೆ ಪೂರ್ವಭಾವಿ ಮಾಹಿತಿ ಸಂಬಂಧಪಟ್ಟ ಎಲ್ಲ ವಿಭಾಗಗಳಿಗೆ ಮುಟ್ಟಬೇಕಾದ್ದು ಅತ್ಯಾವಶ್ಯಕ; ಇಲ್ಲವಾದರೆ ಅವ್ಯವಸ್ಥೆ ಖಂಡಿತ

ಉಂಟಾಗುತ್ತದೆ. ಒಂದು ಮಾಮೂಲಿ ಪುಸ್ತಕವನ್ನು (ಮಾಮೂಲಿ ಪುಸ್ತಕ ಎನ್ನುವಂತಹದು ಯಾವುದೂ ಇಲ್ಲವಾದರೂ) ಮುದ್ರಿಸಲು ಎಂಟರಿಂದ ಹದಿನೆಂಟು ತಿಂಗಳುಗಳಾಗಬಹುದು ಹಾಗೂ ಪ್ರತಿಯೊಂದು ಹಂತದಲ್ಲೂ ಸಂಪಾದಕನ ಪಾತ್ರ ಇರಬೇಕಾಗುತ್ತದೆ. ಇದಕ್ಕೆ ಸಾಕಷ್ಟು ಯೋಜನೆ ಅಗತ್ಯವಿದೆ ಎನ್ನುವುದು ಸ್ಪಷ್ಟ. ಏಕೆಂದರೆ ಸತತವಾಗಿ ದುಡಿಯುವ ಸಂಪಾದಕರು ಮೊದಲೇ ನಿರ್ಧರಿಸಿದ ಪ್ರಕಟಣಾ ಕಾರ್ಯಕ್ರಮದ ಮೇರೆಗೆ ಒಂದು ಡಜನ್ ಅಥವಾ ಅದಕ್ಕೂ ಹೆಚ್ಚು ಪುಸ್ತಕಗಳ ಪ್ರಕಟಣೆಯ ಕಾರ್ಯದಲ್ಲಿ ತೊಡಗಿರುತ್ತಾರೆ ಹಾಗೂ ಅದೇ ಕಾಲಕ್ಕೆ ದೀರ್ಘಕಾಲೀನ ಯೋಜನೆಗಳಿಗೊಳಪಟ್ಟ 50 ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ಪುಸ್ತಕಗಳ ಬಗ್ಗೆ ಗಮನವಿಟ್ಟಿರುತ್ತಾರೆ.

ಒಂದು ಹಸ್ತಪ್ರತಿಯನ್ನು ಒಮ್ಮೆ ಕೊಂಡ ನಂತರ ಅದರ ಬಗ್ಗೆ ಗಮನವಿಡುವ ಅತ್ಯುತ್ತಮ ವಿಧಾನವೆಂದರೆ ಅದರ ಬಗ್ಗೆ ಒಂದು ಟಿಪ್ಪಣಿಯನ್ನು (ಎರಡು ಪುಟಗಳಿಗಿಂತಲೂ ಹೆಚ್ಚು ಉದ್ದವಿರಬಾರದು) ಬರೆಯುವುದು. ಮುಂದೆ ಉದ್ಭವಿಸುವ ಅನೇಕ ಕಾರ್ಯಭಾರಗಳಿಗೆ ಮೂಲ ಮಾಹಿತಿ ಹಾಳೆಯಂತೆ ಅದು ಉಪಯೋಗಕ್ಕೆ ಬರುತ್ತದೆ: ಪಠ್ಯ ಪರಿಷ್ಕರಣೆಯ ಬಗ್ಗೆ ಪಠ್ಯ ಸಂಪಾದಕರಿಗೆ ಸಣ್ಣ ಟಿಪ್ಪಣಿಗಳನ್ನು ಬರೆಯುವುದು, ಮುಖಪುಟ ವಿನ್ಯಾಸಕಾರನಿಗೆ ವಿನ್ಯಾಸದ ಬಗ್ಗೆ ವಿವರಣೆ ನೀಡುವುದು, ಪ್ರಚಾರ ವಿಭಾಗದವರಿಗೆ ಪ್ರಚಾರದ ಬಗ್ಗೆ ಟಿಪ್ಪಣಿ ಬರೆಯುವುದು, ಮಾರಾಟ ಮ್ಯಾನೇಜರಿಗೆ ಮಾರಾಟದ ಬಗ್ಗೆ ಮಾಹಿತಿ ನೀಡುವುದು; ಹಕ್ಕುಗಳ ಮ್ಯಾನೇಜರ್‌ಗೆ ಹಕ್ಕುಗಳ ಬಗ್ಗೆ ತಿಳಿಸುವದು, ಅನುಕ್ರಮಣ ಸೂಚಿ ಮುಂತಾದವು.

ಇದುವರೆಗೆ ನಾನು ಹೇಳಿದ್ದು ಸಂಪಾದಕ ತನ್ನ ಪಾತ್ರದ ಎರಡು ಅಂಶಗಳ ಬಗ್ಗೆ – ಹಸ್ತಪ್ರತಿ ಸಂಪಾದನೆ ಮತ್ತು ಪುಸ್ತಕ ಪ್ರಕಟಣೆಗೆ (ಎರಡನೆಯದರಲ್ಲಿ ಸಂಸ್ಥೆಯ ಇತರ ವಿಭಾಗಗಳ ಮೂಲಕ ಪುಸ್ತಕ ಸರಳವಾಗಿ ಹಾದು ಹೋಗುವುದನ್ನು ನಿರ್ವಹಿಸುವುದೂ ಸೇರಿದೆ) – ಸಿದ್ಧತೆ ನಡೆಸುವುದಕ್ಕೆ ಸಂಬಂಧಿಸಿತ್ತು. ಈಗ ಸಂಪಾದಕನ ಕಾರ್ಯಭಾರದ ಮೂರನೆಯ ಪ್ರಮುಖ ಅಂಶಕ್ಕೆ ನಾವು ಬರೋಣ. ಪುಸ್ತಕವನ್ನು ತಿದ್ದಿ ಪರಿಷ್ಕರಿಸುವುದು. ಇಲ್ಲಿ ಸಂಪಾದಕನ ಪಾತ್ರದ ಇನ್ನೊಂದು ಮುಖ ಕಾಣುತ್ತದೆ: ಒಬ್ಬ ಕರಕುಶಲಿಯ ಮುಖ ಅದು. ಹಸ್ತಪ್ರತಿ ಸಂಪಾದನೆಯ ಕಾರ್ಯದಲ್ಲಿ ಆತ ವಕೀಲ, ಜಗಳಗಂಟ, ಮ್ಯಾನೇಜರ್ ಮತ್ತು ವ್ಯಾಪಾರಿಯ ಪಾತ್ರವನ್ನು ವಹಿಸಿದ್ದರೆ ಲೇಖಕ ಏನು ಹೇಳಲು ಪ್ರಯತ್ನಿಸಿದ್ದಾನೋ ಅದನ್ನು ತನ್ನ ಅತ್ಯುತ್ತಮ ಸಾಮರ್ಥ್ಯಕ್ಕೆ ತಕ್ಕಂತೆ ಒಪ್ಪವಾಗಿ, ಅಂದವಾಗಿ ಮಾಡಲು ತನ್ನೆಲ್ಲ ಕೌಶಲ್ಯವನ್ನು ಈಗ ಉಪಯೋಗಿಸಬೇಕು.

ಸಂಪಾದಕರ ಯೋಗ್ಯತೆಯ ಬಗ್ಗೆ ಲೇಖಕರು ಭಿನ್ನಭಿನ್ನ ಅಭಿಪ್ರಾಯಗಳನ್ನು ಹೊಂದಿದ್ದಾರೆ ಮತ್ತು ನಾನು 20ನೆಯ ಶತಮಾನದ ಎರಡು ಮಹಾನ್ ಸಾಹಿತಿಗಳು ಈ ಬಗ್ಗೆ ಹೇಳಿರುವುದನ್ನು ಉಲ್ಲೇಖಿಸುತ್ತೇನೆ. ಕಾದಂಬರಿಕಾರ, ಅನುವಾದಕ ಮತ್ತು ತೀಕ್ಷ್ಣ ಬುದ್ಧಿಯ ಸಾಹಿತ್ಯ ವಿಮರ್ಶಕ ವ್ಲಾಡಿಮೀರ್ ನಬೊಕೊವ್ ಹೀಗೆ ಹೇಳಿದ್ದಾರೆ:

"ಸಂಪಾದಕರು ಎಂದರೆ ನೀವು ಹೇಳುವುದು ಕರಡಚ್ಚು ತಿದ್ದುವವರು. ಈ ವೈಕಿ ನಾನು ಅರ್ಧವಿರಾಮ ಚಿಹ್ನೆಯ ಬಗ್ಗೆ ಅದೊಂದು ದೊಡ್ಡ ಮರ್ಯಾದೆಯ ಪ್ರಶ್ನೆ ಎಂಬಂತೆ ನನ್ನೊಂದಿಗೆ ಚರ್ಚಿಸುತ್ತಿದ್ದ, ಅಪಾರವಾದ ಔಚಿತ್ಯಪ್ರಜ್ಞೆ ಮತ್ತು ಕೋಮಲತೆಯನ್ನು ಹೊಂದಿದ್ದ ಪ್ರಾಣಿಗಳನ್ನು ಕಂಡಿದ್ದೇನೆ – ಹೌದು, ಅದು ಕಲೆಯ ದೃಷ್ಟಿಯಲ್ಲಿ ನಿಜವೇ ಸರಿ. ಆದರೆ ಕೆಲವು ಒಣ ಪ್ರತಿಷ್ಠೆಯ, ಚಿಕ್ಕಪ್ಪನಂತೆ ದರ್ಪ ತೋರಿಸುವ ಪ್ರಾಣಿಗಳನ್ನು ನಾನು ಕಂಡಿದ್ದೇನೆ. ಅವರು ಮಾಡಲು ಪ್ರಯತ್ನಿಸಿದ ಸಲಹೆಗಳಿಗೆ ಪ್ರತಿಯಾಗಿ ಅವು ಇದ್ದಂತೆ ಇರಲಿ ಎಂದು ನಾನು ಗರ್ಜಿಸಿದ್ದೇನೆ."

ಇರ್ವಿನ್ ಶಾ ಇದಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ಹೊಂದಿದ್ದರು: "ನ್ಯೂಯಾರ್ಕ್‌ನ ಸಂಪಾದಕರು ವಿಚಿತ್ರ ಮತ್ತು ಸರಳವಾದ ರೀತಿಗಳಲ್ಲಿ ನನಗೆ ಸದ್ದುಗದ್ದಲವಿಲ್ಲದೆ ನೆರವಾದರು. ಅವರು ನನಗೆ ಕಲಿಸಿದ ಒಂದು ವಿಷಯವೆಂದರೆ ಕಥೆಗಳ ಕೊನೆಯ ಪ್ಯಾರಾವನ್ನು ತೆಗೆದುಹಾಕುವುದರ ಮೌಲ್ಯವನ್ನು. ಇದನ್ನು ನಾನು ಎಲ್ಲ ಲೇಖಕರಿಗೆ ಒಂದು ಸೂಚನೆಯಂತೆ ತಿಳಿಸುತ್ತೇನೆ. ಕಥೆ ಏನು ಹೇಳುತ್ತದೆಂದು ನೀವು ಬರೆಯುವ ಕೊನೆಯ ಪ್ಯಾರಾವನ್ನು ಬಿಡುವುದು ಸದಾ ಉಚಿತವೆಂದೇ ಹೇಳಬಹುದು."

ಹಾಗಾದರೆ ಇದರಲ್ಲಿ ನಿಜ ಯಾವುದು ? ಸಂಪಾದಕರು ಏನೂ ತಿಳಿಯದ ಪ್ರಾಣಿಗಳೇ ಅಥವಾ ಪುಸ್ತಕ ಪ್ರಕಟಣಾತಂತ್ರ ಅರಿತ ಪ್ರತಿಭಾವಂತರೇ ? ನಿಜ ಇವೆರಡರ ನಡುವೆ ಎಲ್ಲೋ ಇದೆ. ಒಬ್ಬ ಉತ್ತಮ ಸಂಪಾದಕ ತಾನು ಅತ್ಯುತ್ತಮವಾಗಿ ಕೆಲಸ ಮಾಡುವಾಗ ಅಂತಿಮ ಕೃತಿಯಲ್ಲಿ ತನ್ನ ಕೈಚಳಕ ಕಾಣದ ರೀತಿಯಲ್ಲಿ (ಇದು ಮುಖ್ಯ) ತನ್ನ ಲೇಖಕನ ಕೃತಿಯನ್ನು ಹೊಳೆಯುವ ಕನ್ನಡಿಯಂತೆ ಒಪ್ಪ ಮಾಡುತ್ತಾನೆ. ಈ ರೂಪಕಗಳನ್ನು ಬಿಟ್ಟು ಹೇಳುವುದಾದರೆ, ಪರಿಷ್ಕರಣೆಯ ದೃಷ್ಟಿಯಲ್ಲಿ ಒಬ್ಬ ಉತ್ತಮ ಸಂಪಾದಕನಾಗುವ ಬಗೆ ಹೇಗೆ ?

ಮೊದಲಿಗೆ, ಅತ್ಯವಶ್ಯಕವಾಗಿ ಇರಲೇಬೇಕಾದ್ದು: ಒಂದು ಉತ್ತಮ ಸಂವೇದನಾಶೀಲತೆ. ನಂತರ, ಕೃತಿಯ ಅಂತರ್ಗತ ಮೌಲ್ಯವನ್ನು ಹಾಳುಮಾಡಬೇಡ – ಎಂಬ ಕಟ್ಟಳೆಗೆ ಸಂಪೂರ್ಣ ನಿಷ್ಠೆ.

ನಾವು ಬಹಳ ಸಮಯ ವೆಚ್ಚ ಮಾಡಿ ಪಡೆದುಕೊಂಡ ಒಂದು ಹಸ್ತಪ್ರತಿಗೆ ಈ ತತ್ವಗಳನ್ನು ಅನ್ವಯಿಸೋಣ. ನಾವು ಮುಂದೇನು ಮಾಡುವುದು ? ಮೊದಲು ಹಸ್ತಪ್ರತಿಯನ್ನು ಓದಬೇಕಾಗುತ್ತದೆ. ಒಬ್ಬ ಉತ್ತಮ ಸಂಪಾದಕ ಹಸ್ತಪ್ರತಿಯನ್ನು ಓದಿ ಸೂಕ್ತವಾಗಿ ಪ್ರತಿಕ್ರಯಿಸುತ್ತಾನೆ. ಇಲ್ಲಿ ಸೂಕ್ತವಾಗಿ ಎಂದರೆ ಆದರ್ಶ, ಯೋಗ್ಯ ಓದುಗ ಪ್ರತಿಕ್ರಯಿಸುವಂತೆ ಎಂದರ್ಥ. ಹೀಗೆ ಪ್ರತಿಕ್ರಯಿಸುವುದು ಸಂವೇದನಾಶೀಲತೆಯನ್ನು-ಅವಲಂಬಿಸಿದೆ – ಒಂದು ಒಳ್ಳೆಯ ಅಥವಾ ಕೆಟ್ಟ ವಾಕ್ಯ, ಒಂದು ಮರೆಯಲಾಗದ ಅಥವಾ ಸಪ್ಪೆಯ ದೃಶ್ಯ ಕಣ್ಣಿಗೆ ಬಿದ್ದೊಡನೆ ಪ್ರತಿಕ್ರಿಯಿಸುವ ವಸ್ತು. ಒಬ್ಬ ಉತ್ತಮ ಸಂಪಾದಕನ ಸಂವೇದನಾಶೀಲತೆ ಹೇಗಿರುತ್ತದೆಂದರೆ, 'ಯೋಗ್ಯ' ಓದುಗ 'ಎಲ್ಲಿ ತಲ್ಲೀನನಾಗುತ್ತಾನೋ, ಬೇಸರ ಪಡುತ್ತಾನೋ, ಖುಷಿಪಡುತ್ತಾನೋ, ಗೊಂದಲಗೊಳ್ಳುತ್ತಾನೋ ನಂಬದೆ ಹೋಗುತ್ತಾನೋ ಅಥವಾ

ತೃಪ್ತಿಪಟ್ಟುಕೊಳ್ಳುತ್ತಾನೋ ಅದೇ ಸ್ಥಳದಲ್ಲಿ ತಾನೂ ಹಾಗಾಗುತ್ತಾನೆ. ಸಂವೇದನಾಶೀಲತೆಯು ಈ ಗುಣ ಅವಶ್ಯಕ. ನಂತರ ಹಸ್ತಪ್ರತಿಯು ವಿಶ್ಲೇಷಣೆ ಅಥವಾ ಅದರ ಗುಣಾವಗುಣಗಳನ್ನು ಗುರುತಿಸುವ ಹಂತಕ್ಕೆ ಹಾಗೂ ಕೊನೆಯದಾಗಿ ಅದರ ಪರಿಷ್ಕರಣೆಗೆ ನಾವು ಬರುತ್ತೇವೆ.

ಮೊದಲಿಗೆ ಒಬ್ಬ ಸಂಪಾದಕ ಹೇಗೆ ಉತ್ತಮ ಸಂವೇದನಾಶೀಲತೆಯನ್ನು ಬೆಳೆಸಿಕೊಳ್ಳುತ್ತಾನೆ, ಹೇಗೆ ಉತ್ತಮ ಓದುಗನಾಗುತ್ತಾನೆ ಎಂಬುದನ್ನು ಗಮನಿಸೋಣ. ಯಶಸ್ವಿಯಾಗುವ ಕೃತಿ ತನ್ನ ಕೈಗೆ ಬಂದಿದೆ ಎಂದು ಸಂಪಾದಕ ತಿಳಿಯುವುದಕ್ಕೆ ಅವನ ಹುಟ್ಟುಬುದ್ಧಿ ಮತ್ತು ಹುಟ್ಟುಬುದ್ಧಿಯಿಂದ ಮಾತ್ರ ಸಾಧ್ಯ ಎಂದು ಕೆಲವು ಸಂಪಾದಕರು ಅಭಿಪ್ರಾಯಪಡುತ್ತಾರೆ. ಆದರೆ ಇದು ಶುದ್ಧ ಅಸಂಬದ್ಧವೇ ಸರಿ. ಅಂತಹ ಹುಟ್ಟುಬುದ್ಧಿಯನ್ನು ಪೋಷಿಸಿ ಬೆಳೆಸಲು ಸಂಪಾದಕರು ಬಹಳಷ್ಟು ಓದಿರಬೇಕು ಹಾಗೂ ಆಳವಾಗಿ ಓದಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ತಮ್ಮ ಹುಟ್ಟುಬುದ್ಧಿ ಏನು ಹೇಳುತ್ತದೋ ಅಲ್ಲಿಂದ ಮುಂದಕ್ಕೆ ಹೇಗೆ ಹೋಗಬೇಕು ಎಂಬುದು ಅವರಿಗೆ ತಿಳಿದಿರಬೇಕು. ಆದ್ದರಿಂದ ವೃತ್ತಿ ಸಂಪಾದಕರು (ಅದರಲ್ಲೂ ಕೇವಲ ಪಟ್ಟಿಯ ಒಂದು ಅಂಶವನ್ನು ಗಮನಿಸುವುದಕ್ಕೆ ಮಾತ್ರ ತಮ್ಮ ಕಾರ್ಯವ್ಯಾಪ್ತಿಯನ್ನು ಸೀಮಿತಗೊಳಿಸಲಾಗದ ಸಣ್ಣ ಪ್ರಕಾಶನ ಸಂಸ್ಥೆಗಳಲ್ಲಿನ ಸಂಪಾದಕರು) ಸಾಮಾನ್ಯ ವಿಷಯಗಳ ಬಗ್ಗೆಯೂ ಚೆನ್ನಾಗಿ ತಿಳಿದುಕೊಂಡಿರಬೇಕು ಹಾಗೂ ಜಾಕಿ ಕೊಲಿನ್ಸ್ ಅವರ ಕಾದಂಬರಿ ಹೇಗೆ ಯಶಸ್ವಿಯಾಗುತ್ತದೆ ಎಂಬುದನ್ನು ತಿಳಿದಿರಬೇಕಾಗಿರುವಂತೆಯೇ, ತಾವು ಪರಿಷ್ಕರಿಸುತ್ತಿರುವ ಜೋಯ್ಸ್ ಅವರ ಮೇಲಿನ ನಿಷ್ಕೃಷ್ಟ ಜೀವನಚರಿತ್ರೆ ಏಕೆ ಸರಿಯಾಗಿಲ್ಲ ಎಂಬುದನ್ನು ತಿಳಿದಿರಬೇಕು. ಹುಟ್ಟುಬುದ್ಧಿ ನಿಮಗೆ ಒಂದು ಹಸ್ತಪ್ರತಿ ಸರಿಯಾಗಿಲ್ಲ ಎಂದು ಹೇಳಬಹುದು; ಆದರೆ ಅದು ಏಕೆ ಸರಿಯಾಗಿಲ್ಲ, ಅದನ್ನು ಹೇಗೆ ಸರಿಪಡಿಸಬೇಕು ಎಂಬುದನ್ನು ಅದು ನಿಮಗೆ ಹೇಳುವುದಿಲ್ಲ. ಸರಿಪಡಿಸಬೇಕು ಎಂದು ನಾನಿಲ್ಲಿ ಹೇಳಿದಾಗ ಒಂದು ಪಾತ್ರವನ್ನು ತೆಗೆಯುವುದು, ಒಂದು ಅಧ್ಯಾಯವನ್ನು ಸೇರಿಸುವುದು, ನಿರೂಪಣಾ ರಚನೆಯನ್ನು ಬದಲಾಯಿಸುವುದು ಮುಂತಾದ ಪ್ರಮುಖ, ಅಂತರ್ಗತ ದೋಷಗಳನ್ನು ಸರಿಪಡಿಸುವುದು ಎಂಬುದು ನನ್ನ ಅಭಿಪ್ರಾಯ.

ಮೇಲ್ನೋಟಕ್ಕೆ ಕಾಣುವ ದೋಷಗಳು ಸಾಮಾನ್ಯವಾಗಿ ಪ್ರತ್ಯ ಸಂಪಾದಕರ ವ್ಯಾಪ್ತಿಗೆ ಸೇರುತ್ತವೆ. ಈ ಬಗ್ಗೆ ನಾನು ಮುಂದೆ ಪ್ರಸ್ತಾಪಿಸುತ್ತೇನೆ.

ನೀವು ತಿದ್ದುವುದಕ್ಕೆ ಮೊದಲು ಹಸ್ತಪ್ರತಿಯೊಂದನ್ನು ಎರಡು ಸಲ ಓದುವುದು ಒಂದು ಒಳ್ಳೆಯ ವಿಚಾರವೇ. ಮೊದಲನೆಯ ಸಲ ಏನೂ ಬದಲಾವಣೆಗಳನ್ನು ಮಾಡದೆ ಹಸ್ತಪ್ರತಿಯ ಸಾರವನ್ನು ಗ್ರಹಿಸುವುದಕ್ಕೆ ಮಾತ್ರ ಅದನ್ನು ಆಮೂಲಾಗ್ರವಾಗಿ ಓದಿ. ನೀವು ಓದುವಾಗ ಕೆಟ್ಟದಾಗಿ ಬರೆದ ಪ್ಯಾರಾಗಳು, ವಾಕ್ಯರಚನಾ ದೋಷಗಳು, ಕಾನೂನಿನ ತೊಡಕುಗಳು ಮುಂತಾದವುಗಳು ಗಮನಕ್ಕೆ ಬಂದಾಗ ಅಲ್ಲೇ ತಡೆದು ನಿಂತರೆ, ವಿವರಗಳ ಬಗ್ಗೆ ತಲೆ ಕೆಡಿಸಿಕೊಳ್ಳುವ ಅಪಾಯಕ್ಕೆ ನೀವು ಸಿಕ್ಕಿ, ಇಡೀ ಪುಸ್ತಕ ಹೇಗಿದೆ ಎಂಬ ಒಟ್ಟು ಕಲ್ಪನೆ ನಿಮಗೆ ದೊರೆಯುವುದಿಲ್ಲ.

ಮೊದಲನೆಯ ಸಲ ನೀವು ಹಸ್ತಪ್ರತಿಯನ್ನು ಓದಿದ ನಂತರ, ಕೈಯಲ್ಲಿ ಪೆನ್ಸಿಲ್ ಹಿಡಿದು ಮತ್ತೊಮ್ಮೆ ಅದನ್ನು ಓದಬೇಕಾಗುತ್ತದೆ. ಇಲ್ಲೇ ಗ್ರಂಥಪಾಠದ ವಿಶ್ಲೇಷಣೆಯನ್ನು ಮಾಡಬೇಕಾಗುತ್ತದೆ. ಮೂರು ಅಂಶಗಳ ದೃಷ್ಟಿಯಿಂದ ನೀವು ಪುಸ್ತಕದ ಕೊರತೆಗಳನ್ನು ಕಾಣಲು ಪ್ರಯತ್ನಿಸಬೇಕು: ಪುಸ್ತಕ ಏನು ಒಳಗೊಂಡಿದೆ, ಹೇಗೆ ಕ್ರಮಬದ್ಧವಾಗಿ ರಚನೆಯಾಗಿದೆ ಮತ್ತು ಅದರ ಶೈಲಿ ಎಂತಹುದು. ಅದೇ ಕಾಲಕ್ಕೆ, ಈ ಹಂತದಲ್ಲಿ ಆಕರಗಳ ಸಮಸ್ಯೆಗಳು, ಕೃತಿಚೌರ್ಯ, ಪುಸ್ತಕ ಉಂಟು ಮಾಡಬಹುದಾದ ಕಾನೂನಿನ ತೊಡಕುಗಳು ಇತ್ಯಾದಿಗಳಿಗೆ ಸಂಬಂಧಿಸಿದ ಇತರ ಪ್ರಶ್ನೆಗಳನ್ನು ಸಂಪಾದಕ ಕೇಳಬೇಕಾಗುತ್ತದೆ.

ಹಸ್ತಪ್ರತಿಯನ್ನು ಮೊದಲ ಬಾರಿ ಓದಿದಾಗ ಈ ಪ್ರಶ್ನೆಗಳಲ್ಲಿ ಕೆಲವಕ್ಕೆ ಉತ್ತರ ದೊರೆತಿರುತ್ತದೆ; ಆದರೆ ಎರಡನೆಯ ಸಲ ಓದಿದಾಗ ವಿಷಯ ಮತ್ತಷ್ಟು ಸ್ಪಷ್ಟವಾಗುತ್ತದೆ. ಅನುಭವಿ ಸಂಪಾದಕರಿಗೆ ಹಸ್ತಪ್ರತಿಯನ್ನು ಎರಡನೆಯ ಸಲ ಓದುವಾಗಲೇ ಪರಿಷ್ಕರಣೆಯ ಕೆಲಸವನ್ನು ಮಾಡುವುದರ ಜೊತೆಗೆ ಸಮಸ್ಯೆಗಳ ವಿಶ್ಲೇಷಣೆಯನ್ನು ಮಾಡುವುದು ಕಠಿಣವಾಗಲಾರದು. ಆದರೆ ಹೊಸ ಸಂಪಾದಕರು ಎರಡನೆ ಬಾರಿ ಓದುವಾಗ ಹಸ್ತಪ್ರತಿಯ ಸಮಸ್ಯೆಗಳನ್ನು ಸಂಪೂರ್ಣವಾಗಿ ಅರಿಯಲು ಮಾತ್ರ ಓದಬೇಕು ಹಾಗೂ ಪರಿಷ್ಕರಣೆಯ ಕೆಲಸವನ್ನು ಮೂರನೆಯ ಬಾರಿ ಓದುವಾಗ ಮಾಡಬೇಕು. ಎರಡನೆಯ ಸಲ ಓದುವಾಗ ಅಥವಾ ಮೂರನೆಯ ಸಲ ಓದುವಾಗ ಹಸ್ತಪ್ರತಿಯನ್ನು ಸರಿಪಡಿಸುವ ಕೆಲಸವನ್ನು ಗಮನದಲ್ಲಿಟ್ಟುಕೊಂಡು ಓದಬೇಕು. ದೃಶ್ಯ 1ರ ನಂತರ ದೃಶ್ಯ 2ಬರಬೇಕೇ ಅಥವಾ ಅದು ದೃಶ್ಯ 23ರ ನಂತರ ಬರಬೇಕೇ ? ಸೀತ ಬೆಕ್ಕಿನ ಮರಿಯ ಕತ್ತನ್ನು ಏಳನೆಯ ಅಧ್ಯಾಯದಲ್ಲಿ ಹಿಸುಕಬೇಕೇ ಅಥವಾ ಆ ಅಧ್ಯಾಯದಲ್ಲಿ ಅವಳು ಮುಕುಂದನಿಗೆ ಅಡಿಗೆ ಮಾಡುತ್ತಿರಬೇಕೇ ? ಹೀಗೆ ಪರಿಷ್ಕರಿಸುತ್ತಾ ಹೋದಾಗ, ನೀವು ವಿರಾಮ ಚಿಹ್ನೆಗಳು, ಕಾಗುಣಿತ, ವ್ಯಾಕರಣ ದೋಷ, ಸಮಂಜಸತೆ ಮುಂತಾದವುಗಳಲ್ಲಿನ ತಪ್ಪುಗಳನ್ನು ತೆಗೆಯುತ್ತ ಹೋಗುತ್ತೀರಿ. ಆದರೆ ಇದು ಗ್ರಂಥಪಠ್ಯವನ್ನು ತಿದ್ದುವ ಸಂಪಾದಕನ ಕೆಲಸ. ಆದ್ದರಿಂದ ನೀವು ಸ್ವತಃ ಎಲ್ಲ ತಿದ್ದುವ ಕೆಲಸವನ್ನು ಮಾಡದೆ ಪುಸ್ತಕದ ಪಠ್ಯವನ್ನು ಗಮನಿಸಬೇಕಾದ ಪಠ್ಯ ಸಂಪಾದಕನಿಗೆ ಎಲ್ಲಿ ಏನು ತಪ್ಪುಗಳಿವೆ ಎಂದು ಗುರುತು ಹಾಕುವ ಕೆಲಸ ಮಾಡಬೇಕು.

ಹಸ್ತಪ್ರತಿಗೆ ಸಂಬಂಧಿಸಿದ ಎಲ್ಲ ಅಂಶಗಳನ್ನು ನೀವು ಗಮನಿಸಿದ ನಂತರ ಲೇಖಕನನ್ನು ಕಾಣಲು ನೀವು ಸಿದ್ಧರಾಗುತ್ತೀರಿ. ಹಸ್ತಪ್ರತಿಯ ರಚನೆ ಅಥವಾ ಅದು ಏನು ಒಳಗೊಂಡಿದೆಯೆಂಬ ಬಗ್ಗೆ ಲೇಖಕರೊಂದಿಗೆ ಚರ್ಚಿಸುವ ಸಂಪಾದಕ ಯಾವಾಗಲೂ ಒಂದು ವಿಷಯ ನೆನಪಿಟ್ಟುಕೊಳ್ಳಬೇಕು: ಒಬ್ಬ ಲೇಖಕನಿಗೆ ಬಹಳ ಮುಖ್ಯವಾಗಬಹುದಾದ ವಿಷಯಗಳನ್ನು – ದೃಶ್ಯಗಳನ್ನು ಬದಲಾಯಿಸುವುದು, ಪಾತ್ರಗಳನ್ನು ತೆಗೆದುಬಿಡುವುದು ಮುಂತಾದವು – ಚರ್ಚಿಸುವಾಗ ಎಂದೂ ಅಸ್ಪಷ್ಟವಾಗಿರದೆ ಸ್ಫುಟವಾಗಿರಬೇಕು. 'ಸವಿತಾ ಬಹಳ ಕಾಲದಿಂದ ರಂಗದ ಮೇಲೆ ಇಲ್ಲವೇ ಇಲ್ಲವಲ್ಲ' ಎಂದು ಹೇಳಬೇಡಿ. ಏಕೆಂದರೆ 'ನಾನು ಆಕೆಯ ಬಗ್ಗೆ

ಉದ್ದೇಶಿಸಿದ್ದೇ ಅದು' ಎಂದು ಲೇಖಕ ಹೆಚ್ಚು ಕಡಿಮೆ ನಿಶ್ಚಿತವಾಗಿ ನಿಮಗೆ ಹೇಳುತ್ತಾನೆ. ಅದರ ಬದಲಿಗೆ, 'ಸವಿತಾ ಬಹಳ ಕಾಲದಿಂದ ಕಾಣಿಸಿಕೊಳ್ಳದೆ ಇರುವುದರಿಂದ ಅವಳ ಬಗ್ಗೆ ಓದುಗ ಆಸಕ್ತಿ ಕಳೆದುಕೊಂಡಿದ್ದಾನೆ. ಅವಳು ಕಥೆಗೆ ಇನ್ನೇನೂ ಸಂಬಂಧ ಹೊಂದಿಲ್ಲ ಹಾಗೂ ಅವಳು ಅದರಲ್ಲಿ ಜೀವಂತಿಕೆಯಿಂದಿಲ್ಲ' ಎಂದು ಹೇಳಿ ನಂತರ ಲೇಖಕ ಏನು ಹೇಳುತ್ತಾನೆ ಎಂದು ಕಾದು ನೋಡಿ. ಇದೂ, ಲೇಖಕನಿಗೆ ಅವನ ಪುಸ್ತಕದ ಒಬ್ಬ ಪಾತ್ರಧಾರಿ ಪುಟ ಒಂದರಲ್ಲಿ ಟೀ ಕುಡಿಯುವುದನ್ನು ಪ್ರಾರಂಭಿಸಿ ಪುಟ 2ರಲ್ಲಿ ಕಾಫಿ ಕುಡಿಯುವುದನ್ನು ಮುಗಿಸುತ್ತಾನೆ ಎಂಬಂತಹ ದೋಷವನ್ನು ಎತ್ತಿ ತೋರಿಸುವುದೂ ಒಂದೇ ಅಲ್ಲ ಎಂದು ನಾನು ಒತ್ತಿ ಹೇಳಬೇಕಾಗಿದೆ. ಇದು ಸಮಂಜಸತೆಗೆ ಸಂಬಂಧಿಸಿದ್ದು ಹಾಗೂ ನಾನೇನನ್ನು ಮೇಲ್ನೋಟಕ್ಕೆ ಕಾಣುವಂತಹ ದೋಷ ಎಂದು ಕರೆಯುತ್ತೇನೋ ಅದು. ವಿರಾಮಚಿಹ್ನೆ ಮತ್ತು ಕಾಗುಣಿತದ ದೋಷಗಳನ್ನು ತಿದ್ದುವ ಕೆಲಸದಂತೆಯೇ ಇದು ಸಾಮಾನ್ಯವಾಗಿ ಪಠ್ಯ ಸಂಪಾದಕ ಮಾಡಬೇಕಾದ ಕೆಲಸ.

ಒಂದು ಹಸ್ತಪ್ರತಿಯನ್ನು ಪರಿಷ್ಕರಿಸಿದ ನಂತರ, ಅದು ಪಠ್ಯ – ಸಂಪಾದಕೀಯ ವಿಭಾಗಕ್ಕೆ ಹೋಗುತ್ತದೆ. ಈ ವಿಭಾಗ ಬಹುಶಃ ಪ್ರಕಾಶನ ಸಂಸ್ಥೆಯೊಂದರ ಅತ್ಯಂತ ಪ್ರಮುಖ ವಿಭಾಗ. ಒಬ್ಬ ಉತ್ತಮ ಪಠ್ಯ-ಸಂಪಾದಕ ಹಸ್ತಪ್ರತಿಯನ್ನು ತಿದ್ದಿ, ನಯವಾಡಿ, ಒಪ್ಪ ಓರಣ ಮಾಡಿ, ಅಣಿಗೊಳಿಸಿ ಅದು ಕೊನೆಯಲ್ಲಿ ಪುಸ್ತಕದಂಗಡಿಯಲ್ಲಿ ಮೆರುಗನ್ನು ಪಡೆಯುವಂತೆ ಮಾಡುವುದರಿಂದ ತನ್ನ ತೂಕಕ್ಕೆ ಸಮನಾದ ತೂಕದ ನವರತ್ನಗಳ ಮೌಲ್ಯವನ್ನು ಹೊಂದಿರುತ್ತಾನೆ.

ಹೊಸ ಹಸ್ತಪ್ರತಿ ಕೈಗೆ ಬಂದಾಗ ಪಠ್ಯಸಂಪಾದಕ ಏನು ಮಾಡುತ್ತಾನೆ? ಅಧ್ಯಾಯಗಳ ಉದ್ದ, ಅಧ್ಯಾಯಗಳು ಎಲ್ಲಿ ಮುಗಿಯಬೇಕು, ಸಾಮಾನ್ಯ ವಿರಾಮ ಚಿಹ್ನೆಗಳು ಮತ್ತು ಪುಸ್ತಕದ ರಚನೆ ಇವುಗಳ ಬಗ್ಗೆ ಸಂಪಾದಕ ಏನು ಬಯಸುತ್ತಾನೆ ಎಂಬುದನ್ನು ಮೊದಲೇ ತಿಳಿದುಕೊಂಡಿರುತ್ತಾನೆ. (ಒಂದು ನೆನಪಿನ ಪತ್ರ ಅಥವಾ ಮಾತುಕತೆಯ ಮೂಲಕ). ಆದರೆ ಪಠ್ಯ ಸಂಪಾದಕ ಕೇಳಬೇಕಾದ ಪ್ರಶ್ನೆಗಳು ಯಾವುವು?

1. ವಿಷಯಕ್ಕೆ ಸಂಬಂಧಿಸಿದ ವಾಕ್ಯದೊಂದಿಗೆ ಪ್ರಾರಂಭಿಸಿ, ಪ್ಯಾರ ಒಂದನ್ನು ಹೇಗೆ ಪರಿಣಾಮಕಾರಿಯಾಗಿ ರಚಿಸಬೇಕು ಎಂಬುದು ಲೇಖಕನಿಗೆ ತಿಳಿದಿದೆಯೇ?
2. ವಾಕ್ಯಗಳು ಮತ್ತು ವಿಚಾರಗಳನ್ನು ಸಮಾನಾಂತರ ಪದಸಮುದಾಯಗಳಿಂದ ಸರಿಯಾಗಿ ಸಮತೂಕಗೊಳಿಸುವ ಅವಕಾಶಗಳನ್ನು ಲೇಖಕ ಕೈಬಿಟ್ಟಿದ್ದಾನೆಯೇ?
3. ವಿಚಾರವನ್ನು ಸ್ಫುಟವಾಗಿ ವ್ಯಕ್ತಪಡಿಸದಂತಹ ಪದವನ್ನು ಲೇಖಕ ಬಳಸಿರುವ ಸಂದರ್ಭಗಳುಂಟೇ?
4. ಕೆಲವು ಪದಗಳನ್ನು ಪದೇ ಪದೇ ಬಳಸುವ ಪ್ರವೃತ್ತಿ ಲೇಖಕನಿಗಿದೆಯೇ?
5. ಅಸಮಂಜಸ ರೂಪಕಗಳನ್ನು, ಅಸಂಬದ್ಧ ಮಾತುಗಳನ್ನು ಅಥವಾ ಅಸಂಗತ ವಾಕ್ಯಗಳನ್ನು ಹಸ್ತಪ್ರತಿಯಲ್ಲಿ ಬಳಸಲಾಗಿದೆಯೇ?

6. ಒಂದು ವಿಚಾರದಿಂದ ಇನ್ನೊಂದು ವಿಚಾರಕ್ಕೆ ಹೋಗುವಾಗ ಈ ಪರಿವರ್ತನೆ ಸರಾಗವಾಗಿ, ತರ್ಕಬದ್ಧವಾಗಿ ಆಗಿದೆಯೇ ?

ಇವೇ ಅಲ್ಲದೆ, ಕಾಲ್ಪನಿಕವಲ್ಲದ ಮತ್ತು ವ್ಯಾಸಂಗಿಕ ಪುಸ್ತಕಗಳಾದರೆ, ಪಠ್ಯ ಸಂಪಾದಕ ವಾಸ್ತವಾಂಶವನ್ನು ಪರಿಶೀಲಿಸಬೇಕಾಗುತ್ತದೆ; ಪರಾಮರ್ಶೆಗಳು, ಮೂಲಗಳು, ವಿಷಯ ಸೂಚಿಗಳು ಮುಂತಾದವುಗಳನ್ನು ಪರೀಕ್ಷಿಸಬೇಕಾಗುತ್ತದೆ. ಪಠ್ಯ ಸಂಪಾದಕ ತನಗೆ ಒಪ್ಪಿಗೆಯಾಗುವ ರೀತಿಯಲ್ಲಿ ಇದೆಲ್ಲವನ್ನು ಮಾಡಿದ ನಂತರ ಹಾಗೂ ತಾನು ಮಾಡಿದ ಸಲಹೆಗಳಿಗೆ ಲೇಖಕನ ಮತ್ತು ಸಂಪಾದಕನ ಸಮ್ಮತಿಯನ್ನು ಪಡೆದ ನಂತರ, ಎಲ್ಲ ತಿದ್ದುಪಡಿಗಳನ್ನು ಮಾಡಿದ ಹಸ್ತಪ್ರತಿ, ಪಠ್ಯ – ಸಂಪಾದಕ ಪಠ್ಯ ವಿನ್ಯಾಸಕ ಜೋಡಿಸಿದ ವಿನ್ಯಾಸ ಹಾಳೆಯೊಂದಿಗೆ ಟೈಪ್‌ಸೆಟ್ಟರ್‌ಗೆ ಹೋಗುತ್ತದೆ.

ಇಲ್ಲಿಯವರೆಗೆ ಎಲ್ಲವೂ ಚೆನ್ನಾಗಿ ನಡೆದಿದ್ದರೆ, ಸಂಪಾದಕೀಯ ಪ್ರಕ್ರಿಯೆಯ ಉಳಿದ ಭಾಗ-ವಿನ್ಯಾಸ, ಮುದ್ರಣ ಮತ್ತು ಮುದ್ರಣದ ನಂತರ ಪುಸ್ತಕದ ಮಾರಾಟ – ಸರಾಗವಾಗಿ ಮುಂದುವರೆಯುತ್ತದೆ. ಈ ಬಗ್ಗೆ ಇತರ ಲೇಖನಗಳಲ್ಲಿ ಪ್ರಸ್ತಾಪಿಸಲಾಗುವುದರಿಂದ, ನಾನು ಬಹಳ ಸಂಕ್ಷಿಪ್ತವಾಗಿ ಅವುಗಳನ್ನು ಕುರಿತು ಹೇಳುತ್ತೇನೆ. ಟೈಪ್‌ಸೆಟ್ಟರ್‌ನಿಂದ ಕರಡಚ್ಚುಗಳು ಬರುತ್ತವೆ, ಲೇಖಕ ಮತ್ತು ಸಂಪಾದಕ, ಪಠ್ಯ ಸಂಪಾದಕ ಮತ್ತು ಕರಡಚ್ಚು ತಿದ್ದುವವರು ಅವುಗಳನ್ನು ತಿದ್ದುತ್ತಾರೆ; ಇವುಗಳಿಂದ ಬ್ರೊಮೈಡ್‌ಗಳನ್ನು ಮಾಡಲಾಗುತ್ತದೆ ಹಾಗೂ ಅವುಗಳನ್ನು ಸಂಸ್ಕರಿಸುವ ವಿಭಾಗಕ್ಕೆ ಹಾಗೂ ಮುದ್ರಣ ಸಂಸ್ಥೆಗೆ ಕಳಿಸಲಾಗುತ್ತದೆ. ಅಲ್ಲಿಂದ ಪುಸ್ತಕ ರೂಪದಲ್ಲಿ ಅವು ರಟ್ಟು ಹಾಕುವವರಿಗೆ ಹೋಗಿ ಕೊನೆಗೆ ಪುಸ್ತಕದ ಅಂಗಡಿಗಳಿಗೆ ಹೋಗುತ್ತದೆ.

ಮುದ್ರಣ ಪ್ರಕ್ರಿಯೆ ಅಂತಿಮ ಹಂತಕ್ಕೆ ಸಾಗುತ್ತಿದ್ದಂತೆ ಸಂಪಾದಕ ಕೊನೆಯ ಗಳಿಗೆಯ ಸಮಸ್ಯೆಗಳನ್ನು ಬಗೆಹರಿಸುತ್ತಾ ಮಾರಾಟ ವಿಭಾಗದ ಸಿಬ್ಬಂದಿಗೆ ಸೂಕ್ತ ಮಾಹಿತಿ ನೀಡುತ್ತಾ, ಹಕ್ಕುಗಳ ಬಗ್ಗೆ ಹಕ್ಕುಗಳ ವಿಭಾಗಕ್ಕೆ ತಿಳುವಳಿಕೆ ಕೊಡುತ್ತಾ, ಸದಾ ಲೇಖಕನಿಗೆ ಎಲ್ಲ ವಿಷಯ ತಿಳಿಸುತ್ತಾ ತಲೆ ಕೆಟ್ಟವನಂತೆ ವಿಪರೀತ ಗಡಿಬಿಡಿಯಲ್ಲಿರುತ್ತಾನೆ. ಆದರೆ ಅವನ ಈ ಕೆಲಸಗಳು ಈ ಲೇಖನದ ವ್ಯಾಪ್ತಿಗೆ ಸೇರಿಲ್ಲವಾದ್ದರಿಂದ ಅವುಗಳನ್ನು ಇತರರು ವಿವರಿಸುತ್ತಾರೆ.

ಕೊನೆಗೆ ಪುಸ್ತಕವನ್ನು ಪ್ರಕಟಿಸಲಾಗಿದೆ, ವಿಮರ್ಶೆಗಳು ಉತ್ತಮವಾಗಿವೆ ಹಾಗೂ ಮಾರಾಟ ಚೆನ್ನಾಗಿದೆ. ಕೊನೆಯಲ್ಲಿ ನಿಮಗೆ ದೊರೆಯುವ ಮಾನ್ಯತೆ ಅಲ್ಪ ಎನ್ನುವುದು ಸ್ಪಷ್ಟವಾಗಿದ್ದರೂ, ಈ ಎಲ್ಲ ಶ್ರಮ ಸಾರ್ಥಕವೆನಿಸುತ್ತದೆಯೇ ? ಹೌದು ಎಂದು ನಾನು ಹೇಳುತ್ತೇನೆ. ಹಳೆಯ ನಾಣ್ಣುಡಿ ಹೇಳುವಂತೆ ಪ್ರಾರಂಭದಲ್ಲಿ ಮಾತು ಇತ್ತು. ಅದರ ಒಂದು ಭಾಗವಾಗಿರುವುದು ಸದಾ ಒಂದು ಸೌಭಾಗ್ಯ.

# ಸಂಪಾದಕ - ಲೇಖಕನ ನಡುವಣ ಸಂಬಂಧ

ರವಿ ದಯಾಲ್

ಭಾರತದಲ್ಲಿ ಕೆಲವೇ ಪುಸ್ತಕ ಪ್ರಕಾಶಕರು ಪ್ರತ್ಯೇಕ ಸಂಪಾದಕರನ್ನು ನೇಮಿಸಿಕೊಂಡಿದ್ದರೂ, ಸಂಪಾದಕೀಯ ಕೆಲಸ, ಪ್ರಕಾಶಕರೇ ಮಾಡಲಿ ಅಥವಾ ಅವರಿಗೆ ನೆರವಾಗುವ ಇತರರೇ ಮಾಡಲಿ, ಪ್ರಕಾಶನ ವೃತ್ತಿಯಲ್ಲಿ ಬಹಳ ಮುಖ್ಯವಾದದ್ದು. ಕೆಲವು ಸಣ್ಣ, ಅಷ್ಟೇ ಏಕೆ, ಅನೇಕ ಮಧ್ಯಮ ಪ್ರಮಾಣದ ಪ್ರಕಾಶನ ಸಂಸ್ಥೆಗಳಲ್ಲಿ, ನಾನೇ ಈಗ ಸ್ವತಃ ಮಾಡುತ್ತಿರುವಂತೆ, ಪ್ರಕಾಶಕರೇ ಸಂಪಾದಕನ ಕೆಲಸವನ್ನು ಮಾಡುತ್ತಾರೆ ಹಾಗೂ ಇತರರು ಹೊರಗಡೆಯ ಸಹಾಯವನ್ನು ಬಳಸುತ್ತಾರೆ. ಆದರೆ ಈ ಲೇಖನದಲ್ಲಿ ಪ್ರಕಾಶಕರು ಮತ್ತು ಅವರ ಸಂಪಾದಕರು ಒಂದೇ ಕಛೇರಿಯಲ್ಲಿರುವ ಬೇರೆಬೇರೆ ವ್ಯಕ್ತಿಗಳು ಎಂದು ನಾನು ಹೆಚ್ಚಿನ ಮಟ್ಟಿಗೆ ಪರಿಗಣಿಸುತ್ತೇನೆ.

ನಿಮಗೆ ತಿಳಿದಿರುವಂತೆ ದೊಡ್ಡ ಪ್ರಕಾಶನ ಸಂಸ್ಥೆಗಳಲ್ಲಿ ಬೇರೆ ಬೇರೆ ರೀತಿಯ ಟೈಪಾದ ಪ್ರತಿಗಳನ್ನು ಗಮನಿಸುವ ಅನೇಕ ರೀತಿಯ ಸಂಪಾದಕರಿರುತ್ತಾರೆ. ಈ ಪುಸ್ತಕದಲ್ಲಿ ಇತರರು ಬರೆದಿರುವ ಲೇಖನಗಳಲ್ಲಿ ಗಮನಿಸಿರುವಂತೆ ಸಂಪಾದಕರನ್ನು ಪ್ರೇರಕ ಸಂಪಾದಕರು ಮತ್ತು ಪಠ್ಯ ಸಂಪಾದಕರು ಎಂದೂ ಕರೆಯಲಾಗುತ್ತದೆ. ಆದರೆ ಈ ವ್ಯತ್ಯಾಸಗಳು ಮೂಲತಃ ಆಡಳಿತದ ಒತ್ತಡಗಳಿಂದ ಉಂಟಾದವು ಅಥವಾ ಕೆಲಸ ದಕ್ಷತೆಯಿಂದ ಆಗುವುದನ್ನು ಖಚಿತಪಡಿಸಿಕೊಳ್ಳುವ ಉದ್ದೇಶವನ್ನುಳ್ಳವು; ಆದರೆ ಲೇಖಕ ಮತ್ತು ಸಂಪಾದಕನ ನಡುವಣ ಸಂಬಂಧವನ್ನು ಪರಿಶೀಲಿಸುವಾಗ, ಸಂಪಾದಕ ಕೃತಿಗಳನ್ನು ಪಡೆದುಕೊಳ್ಳುತ್ತಾನೆ, ಅವುಗಳನ್ನು ಪರಿಷ್ಕರಿಸುತ್ತಾನೆ ಹಾಗೂ ಅದರ ಮೂಲ ಹಂತದಿಂದ ಮುದ್ರಣವಾಗಿ ಮಾರುಕಟ್ಟೆಗೆ ಹೋಗುವವರೆಗೆ ಸಂಪೂರ್ಣವಾಗಿ ಎಲ್ಲ ಹಂತಗಳಲ್ಲಿ ಪುಸ್ತಕ ರೂಪುಗೊಳ್ಳುವುದನ್ನು ಗಮನಿಸುತ್ತಾನೆ ಎಂದು ಭಾವಿಸುವುದು ಸಮಂಜಸವಾಗುತ್ತದೆ. ಏಕೆಂದರೆ ಇದು ನಮ್ಮ ದೇಶದಲ್ಲಿರುವ ಸಾಮಾನ್ಯ ಪರಿಸ್ಥಿತಿ.

ಸಂಪಾದಕರನ್ನು ನೇಮಿಸುವ ಸಂಸ್ಥೆಗಳಲ್ಲಿ ಸಂಪಾದಕ ಲೇಖಕ ಮತ್ತು ಆತನ ಪ್ರಕಾಶಕನ ನಡುವಣ ಕೊಂಡಿ ಹಾಗೂ ಡಾ. ರುಕುನ್ ಅದ್ವಾನಿ ಮತ್ತು ಶ್ರೀ ಡೇವಿಡ್ ದಾವಿಡರ್ ಅವರು ಹೇಳಿರುವಂತೆ ಲೇಖಕ ಮತ್ತು ಆತನ ಸಂಪಾದಕ ಬಹಳ ನಿಕಟವಾಗಿ ಪರಸ್ಪರ ಪ್ರತಿಕ್ರಿಯಿಸಬೇಕಾಗುತ್ತದೆ. ಹಸ್ತಪ್ರತಿಗಳನ್ನು ಆರಿಸಿ ಪರಿಷ್ಕರಿಸುವ ಕೆಲಸದ ಜೊತೆಗೆ, ಒಂದು ಕೃತಿ ಪ್ರಕಟವಾಗುವ ಹೊತ್ತಿಗೆ ಅದರ ಸಂಪಾದಕ ಅದನ್ನು ಆಮೂಲಾಗ್ರವಾಗಿ ಮತ್ತು ಚಿಕಿತ್ಸಕ ದೃಷ್ಟಿಯಿಂದ ಬಹುಶಃ ನಾಲ್ಕೈದು ಸಲ ಓದಿರುತ್ತಾನೆ (ಕೆಲವೊಮ್ಮೆ ಈ ಸಂಖ್ಯೆ ಅನುಕೂಲದ ದೃಷ್ಟಿಯಿಂದ ಮೂರು ಸಹ ಆಗಬಹುದು !);

ಸಂಪಾದಕ ಲೇಖಕನೊಂದಿಗೆ ಅನೇಕ ಸಲ ಕುಳಿತು ಕೃತಿಯನ್ನು ಪರಿಶೀಲಿಸಿ ಅದರ ಪ್ರತಿಯೊಂದು ವಿವರವನ್ನು ಆತನೊಡನೆ ಚರ್ಚಿಸಿರುತ್ತಾನೆ; ಅಥವಾ ಲೇಖಕ ಮತ್ತು ಸಂಪಾದಕ ಬೇರೆ ಬೇರೆ ನಗರಗಳಲ್ಲಿದ್ದರೆ, ಸಂಪಾದಕ ಅನೇಕ ನಿರ್ದಿಷ್ಟ ಸಲಹೆಗಳು, ಪ್ರಶ್ನೆಗಳು, ಅನೇಕ ಸಮಸ್ಯೆಗಳಿಗೆ ಪರಿಹಾರಗಳು, ವಿನ್ಯಾಸ, ಅಕ್ಷರಗಳ ಗಾತ್ರ ಮತ್ತು ಆಕಾರ, ಪುಸ್ತಕದ ಮಾರಾಟ ಮುಂತಾದ ವಿಷಯಗಳಿಂದ ತುಂಬಿದ ಹಲವಾರು ಪತ್ರಗಳನ್ನು ಬರೆದಿರುತ್ತಾನೆ. ಪ್ರಕಾಶಕ ತಾನೇ ಸ್ವಯಂ ಸಂಪಾದಕನೂ ಆಗಿರದಿದ್ದರೆ, ಲೇಖಕ ಮತ್ತು ಆತನ ಕೃತಿ ಪ್ರಕಟಿಸುವ ಪ್ರಕಾಶನ ಸಂಸ್ಥೆಯ ನಡುವಣ ಸಂಬಂಧ ಸಂಪಾದಕನ ಕೌಶಲ್ಯ, ಔಚಿತ್ಯ ಪ್ರಜ್ಞೆ, ಸೃಜನಶೀಲತೆ ಮತ್ತು ಬುದ್ಧಿವಂತಿಕೆಯೊಂದಿಗೆ ಹೆಣೆದುಕೊಂಡಿರುತ್ತದೆ ಎಂಬುದು ಸ್ಪಷ್ಟ.

ಒಂದು ಪುಸ್ತಕದ ಬಗ್ಗೆ ಒಟ್ಟಿಗೆ ಶ್ರಮಿಸುವಾಗ ಲೇಖಕ ಮತ್ತು ಸಂಪಾದಕನ ನಡುವೆ ಒಂದು ವಿಶಿಷ್ಟ ಸಂಬಂಧ ಉಂಟಾಗುತ್ತದೆ ಹಾಗೂ ಇದು ಚೆನ್ನಾಗಿದ್ದರೆ ಹೆಚ್ಚಿನ ಸಂದರ್ಭಗಳಲ್ಲಿ ಉಭಯತರ ನಡುವೆ ನಿಕಟ ಸ್ನೇಹ ಬೆಳೆಯುತ್ತದೆ. ಪ್ರಕಾಶನ ಸಂಸ್ಥೆಗಳ ಕಡತಗಳು ಮತ್ತು ಸಂಸ್ಥೆಗಳಿಗೆ ಸಂಬಂಧಿಸಿದ ಹರಟೆಗಳಲ್ಲಿ ಇದನ್ನು ರುಜುವಾತು ಮಾಡುವ ಪತ್ರವ್ಯವಹಾರ ಮತ್ತು ಕತೆಗಳು ತುಂಬಿವೆ. ತಮ್ಮ ಸಹಜ ಸಾಮರ್ಥ್ಯ ಅರಳಲು ನೆರವಾಗುವಲ್ಲಿ ಸಂಪಾದಕರು ವಹಿಸಿದ ಆಧಾರಭೂತವಾದ ಪಾತ್ರವನ್ನೂ, ಶಬ್ದಾಡಂಬರ ಅಥವಾ ಸ್ವಪ್ರತಿಷ್ಠೆಯ ಹೊಳೆಯಲ್ಲಿ ಕೊಚ್ಚಿಕೊಂಡು ಹೋಗುವುದರಿಂದ ಲೇಖಕರನ್ನು ನಾಜೂಕಾಗಿ ಆದರೆ ಅಷ್ಟೇ ಬಿಗಿಯಿಂದ ಉಳಿಸಿರುವುದನ್ನೂ ಅನೇಕ ಲೇಖಕರು ಒಪ್ಪಿಕೊಂಡಿದ್ದಾರೆ. ಖ್ಯಾತ ಕೌಟುಂಬಿಕ ಪ್ರಕಾಶನ ಸಂಸ್ಥೆಯೊಂದರ ಮುಖ್ಯಸ್ಥರಾದ ಜಾನ್ ಮರ್‍ರೆ ಅವರು, ಹೇಗೆ ತಮ್ಮ ಪೂರ್ವಜರೊಬ್ಬರು ಅನಗತ್ಯವಾಗಿ ಉದ್ದುದ್ದದ ಕಾದಂಬರಿಗಳನ್ನು ಬರೆಯುವ ಪ್ರವೃತ್ತಿ ಹೊಂದಿದ್ದ ವಿಕ್ಟೋರಿಯಾ ಕಾಲದ ಪ್ರಸಿದ್ಧ ಲೇಖಕರೊಬ್ಬರನ್ನು ಹತೋಟಿಯಲ್ಲಿಟ್ಟಿದ್ದರು ಎಂಬ ಬಗ್ಗೆ ಕತೆಗಳನ್ನು ಹೇಳಿ ಒಮ್ಮೆ ನನ್ನನ್ನು ರಂಜಿಸಿದ್ದರು. ಆ ಪೂರ್ವಜ ಮರ್‍ರೆ ಅವರು ಒಮ್ಮೆ ಲೇಖಕರಿಗೆ ಹೇಳಿದರು "ಸ್ವಾಮಿ, ನಿಮ್ಮ ಹಸ್ತಪ್ರತಿ ಒಂದು ವಜ್ರವಿದ್ದಂತೆ – ಅದನ್ನು ಸರಿಯಾಗಿ ಕತ್ತರಿಸಿದಾಗಲೇ ಅದು ಥಳಥಳನೆ ಹೊಳೆಯುತ್ತದೆ." ಅವರ ಇಂತಹ ಔಚಿತ್ಯ ಪ್ರಜ್ಞೆ ಮತ್ತು ಕುಶಾಗ್ರಮತಿಯಿಂದಾಗಿ, ಅವರಿಗೆ ಪಠ್ಯವನ್ನು ಕತ್ತರಿಸಲು ಲೇಖಕರು ಸಂಪೂರ್ಣ

ಸ್ವಾತಂತ್ರ್ಯವನ್ನು ಕೊಟ್ಟರು ಹಾಗೂ ಅಂತಿಮವಾಗಿ ಒಂದು ಶ್ರೇಷ್ಠ ಕೃತಿಯ ಪ್ರಕಟಣೆಗೆ ಅವರಿಗೆ ನೆರವಾದರು. ಆ ಕೃತಿ ಇನ್ನೂ ಲಭ್ಯವಿದೆ. ತಮ್ಮ ಸಂಪಾದಕರು ಮತ್ತು ಪ್ರಕಾಶಕರಿಗೆ ಧನ್ಯವಾದ ಸೂಚಿಸಿ ಲೇಖಕರು ಬರೆದ ಪತ್ರ ಮರ್ರೆ ಅವರ ದಾಖಲೆಗಳಲ್ಲಿ ಇನ್ನೂ ಇರಬೇಕು.

ಒಂದು ಹಸ್ತಪ್ರತಿಯನ್ನು ಅಂಗೀಕರಿಸಿ ಮುದ್ರಣಕ್ಕೆ ಸಿದ್ಧಮಾಡಿದ ಮಾತ್ರಕ್ಕೆ ಆ ಪುಸ್ತಕ ಮತ್ತು ಅದರ ಲೇಖಕನೊಂದಿಗೆ ಸಂಪಾದಕರ ಸಂಬಂಧ ಮುಗಿಯಿತು ಎಂದೇನೂ ಅಲ್ಲ; ಸಂಪಾದಕ ಸಾಮಾನ್ಯವಾಗಿ ಕೃತಿಯ ಮುದ್ರಣ ಮತ್ತು ವಿನ್ಯಾಸದ ಬಗ್ಗೆ ಸಂಬಂಧಪಟ್ಟವರೊಂದಿಗೆ ಸಮನ್ವಯ ಹೊಂದಿರುತ್ತಾನೆ, ಕರಡಚ್ಚುಗಳನ್ನು ತಿದ್ದುತ್ತಾನೆ, ಪುಸ್ತಕದ ಹೊಂದಿಕೆಯ ವಿನ್ಯಾಸಗಳನ್ನು ಸಲಹೆ ಮಾಡುತ್ತಾನೆ ಹಾಗೂ ಪುಸ್ತಕ ಸಿದ್ಧವಾದಾಗ ಅದರ ವಿಮರ್ಶೆಗೆ ಪಟ್ಟಿಗಳನ್ನು ಸಿದ್ಧಪಡಿಸುವುದು, ಮಾರಾಟದ ಸಿಬ್ಬಂದಿಗೆ ಮಾಹಿತಿ ನೀಡುವುದು ಮುಂತಾದವು ಸೇರಿದಂತೆ ಮಾರಾಟ ಪ್ರಕ್ರಿಯೆಯ ಮೊದಲ ಹಂತಗಳ ಕಾರ್ಯ ನಡೆಯುವುದಕ್ಕೆ ನೆರವಾಗುತ್ತಾನೆ. ಒಂದು ಪುಸ್ತಕ ಜನ್ಮ ತಾಳಲು ಬೇಕಾದ ಅನೇಕ ತಿಂಗಳುಗಳ ಅವಧಿಯಲ್ಲಿ, ಲೇಖಕ ಮತ್ತು ಸಂಪಾದಕ ಪರಸ್ಪರ ಸಂಪರ್ಕ ಇಟ್ಟುಕೊಂಡೇ ಇರುತ್ತಾರೆ ಹಾಗೂ ಪುಸ್ತಕ ಹೊರಬಂದಾಗ, ಅದರ ಮಾರಾಟ ಮತ್ತು ವಿಮರ್ಶೆಗಳ ಸುದ್ದಿಯ ಬಗ್ಗೆ ಲೇಖಕ ಸಂಪಾದಕನೊಂದಿಗೆ ತನ್ನ ಸಂಪರ್ಕವನ್ನು ಮುಂದುವರೆಸುತ್ತಾನೆ; ಪುಸ್ತಕದ ಮಾರಾಟದ ಬಗ್ಗೆ ಲೇಖಕ ಸಲಹೆಗಳನ್ನು ನೀಡಿ ಕೆಲವೊಮ್ಮೆ ಸಂಪಾದಕನಿಗೆ ಬೇಸರ ಉಂಟು ಮಾಡಬಹುದು, ಒಂದು ಕೆಟ್ಟ ವಿಮರ್ಶೆ ಕಾಣಿಸಿಕೊಂಡಾಗ ತನ್ನ ಮನದಳಲನ್ನು ಸಂಪಾದಕನಲ್ಲಿ ತೋಡಿಕೊಳ್ಳಬಹುದು, ಉತ್ತಮ ವಿಮರ್ಶೆ ಬಂದಾಗ ತನ್ನ ಸಮಾಧಾನವನ್ನು ಅವನೊಂದಿಗೆ ಹಂಚಿಕೊಳ್ಳಬಹುದು; ಹಾಗೂ ಪುಸ್ತಕದಂಗಡಿಗಳಲ್ಲಿ ತನ್ನ ಪುಸ್ತಕ ಕಾಣುತ್ತಿಲ್ಲ ಎಂದು ಅವನಿಗೆನಿಸಿದರೆ, ತನ್ನ ಕೋಪವನ್ನು ಪ್ರಕಾಶನ ಸಂಸ್ಥೆಯ ಮಾರಾಟ ಸಿಬ್ಬಂದಿಯ ಬದಲಾಗಿ ಸಂಪಾದಕನ ಮೇಲೆ ತೀರಿಸಿಕೊಳ್ಳಬಹುದು. ಹೀಗೆ ಸಂಪಾದಕ ಪುಸ್ತಕ ರೂಪು ತಳೆಯುವುದರಲ್ಲಿ ಲೇಖಕನ ಸಹಭಾಗಿಯಷ್ಟೇ ಅಲ್ಲದೆ, ಅದರ ಯಶಸ್ಸಿನ ಬಗ್ಗೆ ಸಂಭ್ರಮ ಪಡುವುದರಲ್ಲೂ ಸಹಭಾಗಿ ಹಾಗೂ ಪುಸ್ತಕ ವಿಫಲಗೊಂಡರೆ ಲೇಖಕನ ಅಸಮಾಧಾನಕ್ಕೂ ತುತ್ತಾಗುತ್ತಾನೆ.

ಒಂದು ಪುಸ್ತಕ ರೂಪುಗೊಳ್ಳುವುದರಲ್ಲಿ ಲೇಖಕರು ಮತ್ತು ಸಂಪಾದಕರ ನಡುವೆ ಇರುವ ನಿಕಟ ಸಂಬಂಧ ಎಷ್ಟು ಅನಿವಾರ್ಯ ಎಂಬ ಬಗ್ಗೆ ನಾನು ಬಹುಶಃ ಸಾಕಷ್ಟು ಹೇಳಿದ್ದೇನೆ. ಅನೇಕ ವಿಶ್ವವಿದ್ಯಾಲಯಗಳಲ್ಲಿ ಏಳು ವರ್ಷ ಕಳೆದ ನಂತರ ಜುಲೈ 1961ರಲ್ಲಿ ಪ್ರಕಾಶನ ಜಗತ್ತನ್ನು ಪ್ರವೇಶಿಸಿದ ನಾನು ಈಗ 30 ವರ್ಷಗಳಿಂದ ಪುಸ್ತಕಗಳ ಸಂಪಾದನೆಯಲ್ಲಿ ಮತ್ತು ಲೇಖಕರೊಂದಿಗೆ ವ್ಯವಹರಿಸುವುದರಲ್ಲಿ ತೊಡಗಿದ್ದೇನೆ; ಸುಮಾರು 1500 ಪುಸ್ತಕಗಳನ್ನು ಮೊದಲಿನ ಹಂತದಿಂದ ಪ್ರಾರಂಭಿಸಿ ಪ್ರಕಟಿಸುವುದರಲ್ಲಿ ನಾನು ಬಹುಶಃ ನೇರವಾಗಿ ಭಾಗವಹಿಸಿದ್ದೇನೆ, ನಾನೇ ಸ್ವತಃ 500 ಪುಸ್ತಕಗಳನ್ನು ಪರಿಷ್ಕರಿಸಿದ್ದೇನೆ – ಅನೇಕ ಸಲ, ಇಷ್ಟವಿಲ್ಲದಿದ್ದರೂ ಬಹಳ

ತೀವ್ರವಾಗಿ ತಿದ್ದಿದ್ದೇನೆ – ಮತ್ತು ಬಹುಶಃ 10,000 ಹಸ್ತಪ್ರತಿಗಳನ್ನು, ಅವುಗಳನ್ನು ಓದಿದ ನಂತರ, ತಿರಸ್ಕರಿಸಿದ್ದೇನೆ. ಈ ಎಲ್ಲ ವರ್ಷಗಳು ನಿರಂತರ ಚಟುವಟಿಕೆಯ ವರ್ಷಗಳಾಗಿದ್ದವು. ಆದರೆ ನಾನಿಲ್ಲಿ ಹೇಳಬಯಸುವುದೇನೆಂದರೆ ಒಬ್ಬ ಸಂಪಾದಕನಾಗಿ ನಾನು ಕೆಲಸ ಮಾಡಿದ ವರ್ಷಗಳಲ್ಲಿ ಹೆಚ್ಚಾಗಿ ಭೇಟಿಯಾದ ಜನರೆಂದರೆ ಲೇಖಕರು – ಈ ಪೈಕಿ ನಾನು ಕೆಲಸ ಮಾಡಿದ ಪುಸ್ತಕಗಳ ಲೇಖಕರಿದ್ದಾರೆ; ನಾನು ಪಡೆದುಕೊಳ್ಳಲು ಆಶಿಸಿದ ಪುಸ್ತಕಗಳ ಲೇಖಕರಿದ್ದಾರೆ, ಬಹಳ ಹೆಚ್ಚಿನ ಸಂಖ್ಯೆಯವರೆಂದರೆ ಪ್ರಕಟಣೆಗೆ ಒಪ್ಪಿಕೊಳ್ಳಲು ನನಗೆ ಸಾಧ್ಯವಾಗದ ಪುಸ್ತಕಗಳ ಲೇಖಕರು. ಮೂವತ್ತು ವರ್ಷಗಳಿಂದ ಇದು ನನ್ನ ಪರಿಚಿತರು ಮತ್ತು ಗೆಳೆಯರ ಬಳಗ; ಇದರಿಂದ ಬಹಳ ಗಾಢವಾದ ಸ್ನೇಹಿತರು ದೊರೆತಿದ್ದಾರೆ ಹಾಗೂ ಅನೇಕ ಕೃತಿಗಳನ್ನು ತಿರಸ್ಕರಿಸಿದ್ದರೂ, ಶತ್ರುಗಳು ಇಲ್ಲವೇ ಇಲ್ಲ ಎನ್ನಬಹುದು. ಒಬ್ಬ ಸಂಪಾದಕನಾಗಿ ಅಥವಾ ಸಲಹೆಗಾರನಾಗಿ ನಾನು ವ್ಯವಹರಿಸಿದ ಲೇಖಕರಿಂದ ಮತ್ತು ಅವರ ಗೆಳೆತನದಿಂದ ಬೌದ್ಧಿಕವಾಗಿ ಸತತ ಪೋಷಣೆಯನ್ನು ಪಡೆಯುವ ಸೌಭಾಗ್ಯ ನನ್ನದಾಗಿದೆ; ಸಂಪಾದಕ – ಲೇಖಕನ ನಡುವಣ ಸಂಬಂಧದ ಬಗ್ಗೆ ಒಂದು ಮಾದರಿ ಚರಿತ್ರೆಯನ್ನು ಇವು ಒದಗಿಸುತ್ತವೆ ಎಂಬ ಕಾರಣದಿಂದ ನಾನು ಈ ಮಾತುಗಳನ್ನು ಬರೆಯುತ್ತಿದ್ದೇನಲ್ಲದೆ, ನನ್ನ ಬಗ್ಗೆ ಹೇಳಿಕೊಳ್ಳಲು ನಾನು ಇಚ್ಛಿಸುವುದರಿಂದ ಅಲ್ಲ. ಇಂತಹ ಸಂಬಂಧ ಶಾಲೆ ಮತ್ತು ಕಛೇರಿಯ ಸಮಯವನ್ನು ಮೀರಿ ಮುಂದುವರೆಯುತ್ತದೆ. ಇದರಲ್ಲಿ ಸಂಪಾದಕ ಗಮನ ನೀಡುತ್ತಿರಬಹುದಾದ ಪುಸ್ತಕಗಳ ಲೇಖಕರು ಒಳಗೊಂಡಿದ್ದಾರೆ; ಬಹುಶಃ ಇನ್ನೂ ಹೆಚ್ಚಾಗಿ, ಸಂಪಾದಕ ಬೆನ್ನಟ್ಟಿರುವ ಹೊಸ ಲೇಖಕರ ಇನ್ನೂ ಬರೆಯದ ಪುಸ್ತಕಳು ಮತ್ತು ಆತ ಮೊದಲು ತಿರಸ್ಕರಿಸಿದ್ದ ಕೃತಿಗಳ ಲೇಖಕರ ಮುಂದಿನ ಪುಸ್ತಕಗಳು ಸೇರಿರುತ್ತವೆ.

ಸಂಬಂಧ ಎಷ್ಟು ನಿಕಟವಾದದ್ದು ಎಂಬ ಬಗ್ಗೆ ಇಷ್ಟೆಲ್ಲಾ ಹೇಳಿದ್ದಾಯಿತು. ಅನೇಕ ವರ್ಷಗಳಿಂದ ಈ ಬಗ್ಗೆ ನಾನು ಭಾಗ್ಯಶಾಲಿಯೆಂದೇ ಹೇಳಬೇಕು. ಆದರೆ ಎಲ್ಲ ನಿಕಟ ಸಂಬಂಧಗಳಂತೆ ಸಂಪಾದಕ ಮತ್ತು ಲೇಖಕನ ನಡುವಣ ಸಂಬಂಧವೂ ಅನೇಕ ಹಂತಗಳಲ್ಲಿ ಕಹಿಯಾಗಬಹುದು. ಪ್ರಕಾಶಕ ಒದಗಿಸುವ ಸೇವೆಗಳ ಬಗ್ಗೆ ಲೇಖಕರು ದೂರಿಕೊಳ್ಳುವುದನ್ನು ಎಲ್ಲ ಸಂಪಾದಕರೂ ಕೇಳಿಯೇ ಇರಬೇಕು. ಲೇಖಕರೆಲ್ಲ ದೇವತೆಗಳಲ್ಲ; ಸಾಮರ್ಥ್ಯವಿರುವ ಕೆಲವರು ಅನಗತ್ಯವಾಗಿ ಗರ್ವಿಷ್ಠರಾಗಿರುತ್ತಾರೆ; ಇನ್ನಿತರರಿಗೆ ತಾವೆಷ್ಟು ದಡ್ಡರು ಎಂಬುದು ತಿಳಿದಿರುವುದಿಲ್ಲ. ಈ ಮಾತುಗಳು ಸಂಪಾದಕರ ಬಗ್ಗೆಯೂ ಅಷ್ಟೇ ನಿಜ. ಸಂಪಾದಕರು ಎಂದು ಹೇಳಿಕೊಳ್ಳುವ ಕೆಲವರು ಏನೂ ಕೆಲಸಕ್ಕೆ ಬಾರದವರಾಗಿರುತ್ತಾರೆ, ಹಾಗೂ ಲೇಖಕರೊಬ್ಬರ ಹಸ್ತಪ್ರತಿಗೆ ಕೈಹಾಕುವ ತಂಟೆಗೇ ಅವರು ಹೋಗಬಾರದು. ಯಾವ ವೃತ್ತಿಯಲ್ಲಿ ಎಳೆಎಳೆಯಾಗಿ ನೋಡುವುದಕ್ಕೆ ಮತ್ತು ಪಟ್ಟು ಹಿಡಿದು ದುಡಿಯುವುದಕ್ಕೆ ಪರ್ಯಾಯವಿಲ್ಲವೋ ಅಂತಹ ವೃತ್ತಿಯಲ್ಲಿ ಕೆಲವರು ಸೋಮಾರಿಗಳಾಗಿದ್ದಾರೆ ಹಾಗೂ ವಿವರಗಳಿಗೆ ಗಮನ ಕೊಟ್ಟು ದುಡಿಯುವುದರಿಂದ ಜಾರಿಕೊಳ್ಳುತ್ತಾರೆ. ನನ್ನ ಅನುಭವದಲ್ಲಿ, ತನ್ನ ಪಠ್ಯವನ್ನು ಎದ್ದು ಕಾಣುವಂತೆ ಸುಧಾರಿಸುವ ಸಮಂಜಸ, ನಿಷ್ಠಾವಂತ ಪರಿಷ್ಕರಣೆಗೆ

ಯಾವ ಲೇಖಕನೂ ಅಭ್ಯಂತರ ಮಾಡುವುದಿಲ್ಲ. ಆದರೆ ಈ ಪರಿಷ್ಕರಣೆಯನ್ನು ಲೇಖಕರ ಶೈಲಿಯ ವ್ಯಾಪ್ತಿ ಮತ್ತು ಚೌಕಟ್ಟಿನೊಳಗೆ, ಅವರೊಂದಿಗೆ ಸಮಾಲೋಚಿಸಿ ಆದಷ್ಟು ಹಗುರವಾಗಿ ಮಾಡಬೇಕಾಗುತ್ತದೆ. ಸಂಪಾದಕ ಸ್ವೇಚ್ಛಾನುಸಾರ ಅಥವಾ ತನ್ನ ಕಲ್ಪನೆಗೆ ತಕ್ಕಂತೆ ಸಾರಾಸಗಟಾಗಿ ಕೃತಿಯನ್ನು ಬದಲಾಯಿಸಿ ಬರೆಯಬಾರದು. ಅತ್ಯಂತ ಸೂಕ್ಷ್ಮ ಸ್ವಭಾವದ ಮತ್ತು ಅತ್ಯಂತ ಶ್ರೇಷ್ಠ ಲೇಖಕರೂ ಸಹ ತಮ್ಮ ಕೃತಿಗಳನ್ನು ಸುಧಾರಿಸಲು ನೆರವಾಗುವ ಬದಲಾವಣೆಗಳನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಅನೇಕ ಸಲ ನಮ್ಮ ನಿಷ್ಪ್ರಯೋಜಕ ಸಂಪಾದಕ ಪಠ್ಯಕ್ಕೆ ಕೈಹಾಕಿ ಅದನ್ನು ವಿರೂಪಗೊಳಿಸುತ್ತಾನೆ. ಅಂತಹ ಪ್ರಕರಣಗಳಲ್ಲಿ ಯುದ್ಧವೇ ಆಗಬಹುದು. ತಾವು ಸೇವೆ ಸಲ್ಲಿಸುವ ಪ್ರಕಾಶನ ಸಂಸ್ಥೆಗಳಿಗೆ ಇದರಿಂದ ಒಳಿತಾಗುವುದಿಲ್ಲ ಎಂಬುದನ್ನು ಎಲ್ಲ ಸಂಪಾದಕರು ನೆನಪಿನಲ್ಲಿಟ್ಟುಕೊಳ್ಳಬೇಕು; ಇಂತಹ ಯುದ್ಧದ ಪರಿಸ್ಥಿತಿಗಳು ಉಂಟಾದಾಗಲೂ ಸಂಪಾದಕ ಲೇಖಕರೊಂದಿಗೆ ಸೌಜನ್ಯದಿಂದ ವರ್ತಿಸಬೇಕು ಹಾಗೂ ತಾನು ತಪ್ಪುಗಳನ್ನು ಮಾಡಿದ್ದರೆ ಅವುಗಳನ್ನು ಒಪ್ಪಿಕೊಂಡು ಸರಿಪಡಿಸಬೇಕು. ಲೇಖಕರೊಬ್ಬರು ಎಷ್ಟೇ ಕಿರಿಕಿರಿಯವರಾದರೂ ಸರಿ, ಅವರನ್ನು ಸೌಜನ್ಯದಿಂದ ಕಾಣುವುದು ಅತ್ಯಂತ ಮುಖ್ಯ. ಹಸ್ತಪ್ರತಿಯನ್ನು ಸೌಜನ್ಯದಿಂದ ತಿರಸ್ಕರಿಸಬೇಕು, ನಿಷ್ಠುರವಾಗಿ ಹೇಳಬೇಕಾದ್ದನ್ನು ಸೌಜನ್ಯದಿಂದ ಹೇಳಬೇಕು, ಸೌಜನ್ಯದಿಂದ ಸಲಹೆಗಳನ್ನು ಮಾಡಬೇಕು. ಸಾಧ್ಯವಾದಷ್ಟೂ ಉತ್ತಮ ಪುಸ್ತಕವೊಂದನ್ನು ಹೊರತರಲು ಲೇಖಕರೊಂದಿಗೆ ನಿಕಟವಾಗಿದ್ದು ಕೆಲಸ ಮಾಡುವುದು ಸಂಪಾದಕರ ಉದ್ದೇಶವೇ ಹೊರತು, ಸಣ್ಣ ವಾದವಿವಾದದ ಅಂಶಗಳನ್ನೇ ಒತ್ತಿ ಹೇಳುತ್ತಾ ಲೇಖಕನಲ್ಲಿ ಹತಾಶ ಭಾವನೆಯನ್ನುಂಟು ಮಾಡುವುದಲ್ಲ.

ಹಸ್ತಪ್ರತಿಯನ್ನು ಗಣನೀಯವಾಗಿ ಪರಿಷ್ಕರಿಸುವ ಬಗ್ಗೆ ಕೆಲವು ಸಂಪಾದಕರು ಅಸಮಾಧಾನಗೊಂಡಿರುತ್ತಾರೆ ಹಾಗೂ ಅಂತಹ ಸಂದರ್ಭಗಳಲ್ಲಿ ತಮ್ಮನ್ನು ಪುಸ್ತಕದ ಸಹ-ಲೇಖಕರೆಂದು ಪರಿಗಣಿಸಬೇಕೆಂದು ಭಾವಿಸುತ್ತಾರೆ. ಆದರೆ ಒಂದು ಕೃತಿಗೆ ತಮ್ಮ ಕೊಡುಗೆ ಎಷ್ಟೇ ದೊಡ್ಡದಾಗಿರಲಿ ಸಂಪಾದಕರು ಎಲೆಮರೆಯ ಕಾಯಿಯಂತೆ ಇರುವುದಕ್ಕೆ ತಮ್ಮ ಮನಸ್ಸನ್ನು ಒಗ್ಗಿಸಿಕೊಳ್ಳಬೇಕೆಂದು ನಾನು ಹೇಳುತ್ತೇನೆ. ಮೂಲ ಲೇಖಕರ ವಿಚಾರಗಳು ಮತ್ತು ಪಾಂಡಿತ್ಯ ತಮ್ಮದೇ ಎಂದು ಹೇಳಿಕೊಳ್ಳುವುದಕ್ಕೆ ಸಂಪಾದಕೀಯ ಅಹಂಭಾವಗಳಿಗೆ ಅವಕಾಶ ಕೊಡಬಾರದು: ಸಂಪಾದಕನ ಕೆಲಸ ಒಬ್ಬ ಸಹಾಯಕನ ಕೆಲಸ ಹಾಗೂ ಅದಕ್ಕಾಗಿ ಮೆಚ್ಚುಗೆಯೂ ಸಲ್ಲುತ್ತದೆ. ಮಗುವಿನ ಜನ್ಮಕ್ಕೆ ನೆರವಾದ ಸೂಲಗಿತ್ತಿಯೊಬ್ಬಳು ಮಗು ತನ್ನದೇ ಎಂದು ಹೇಗೆ ಹೇಳಬಾರದೋ ಹಾಗೆ ಸಂಪಾದಕನೊಬ್ಬ ಕೃತಿಯ ಬಗ್ಗೆ ಬಹಳಷ್ಟು ಕೆಲಸ ಮಾಡಿದ್ದರೂ ಶೀರ್ಷಿಕೆಯ ಪುಟದಲ್ಲಿ, ಅಷ್ಟೇ ಏಕೆ ಆಭಾರಮನ್ನಣೆ ಸೂಚಿಸುವ ಕಡೆಯೂ ಸಹ ತಮ್ಮ ಹೆಸರಿರಬೇಕೆಂದು ನಿರೀಕ್ಷಿಸಬಾರದು. ಆತ ಮಾಮೂಲು ಕೆಲಸದ ಅಂಗವಾಗಿ ಪುಸ್ತಕಕ್ಕಾಗಿ ಮಾಡಬೇಕಾದ್ದೆಲ್ಲವನ್ನೂ ಮಾಡಬೇಕೆಂದು ನಿರೀಕ್ಷಿಸಲಾಗುತ್ತದೆ. ಪುಸ್ತಕ ಉತ್ತಮವಾಗಿ ಬಂದಿದೆ ಹಾಗೂ ತನ್ನ ಲೇಖಕ ಮತ್ತು

ಪ್ರಕಾಶನ ಸಂಸ್ಥೆ ಪುಸ್ತಕದ ಬಗ್ಗೆ ಹೆಮ್ಮೆ ತಾಳುವಂತೆ ತಾನು ದುಡಿದಿದ್ದೇನೆ ಎಂಬುದಷ್ಟೇ ಅವನಿಗೆ ಸಲ್ಲುವ ಕೀರ್ತಿ.

ಕೃತಿ ಬರೆಯಬೇಕೆಂದು ಕೋರಿಕೆ ಪಡೆದ ಲೇಖಕ, ಅದನ್ನು ಪ್ರಕಟಿಸುವುದಿಲ್ಲ ಎಂದು ಅಂತಿಮವಾಗಿ ಪ್ರಕಾಶಕ ಹೇಳುವುದಕ್ಕೆ ಮೊದಲು ಕೃತಿಯ ಬಗ್ಗೆ ಎಷ್ಟು ಕೆಲಸ ಮಾಡಿರಬೇಕೆಂದು ನಿರೀಕ್ಷಿಸಲಾಗುತ್ತದೆ? ಅನೇಕ ತಿಂಗಳುಗಳ ಕಾಲ ಕೃತಿ ಕೊಡುವಂತೆ ಲೇಖಕರನ್ನು ಒತ್ತಾಯಿಸಿದ ನಂತರ ಹಸ್ತಪ್ರತಿಯನ್ನು ಅಂತಿಮವಾಗಿ ತಿರಸ್ಕರಿಸುವುದು ಪ್ರಕಾಶಕನ ಕೀಳು ಮನೋಭಾವವನ್ನು ಮತ್ತು ದುಷ್ಟತನವನ್ನು ತೋರಿಸುತ್ತದೆ. ಕೃತಿ ಬರೆಯಬೇಕೆಂದು ಲೇಖಕರನ್ನು ಕೋರುವಾಗ ಒಂದು ವಿಧ್ಯುಕ್ತ ಒಪ್ಪಂದಕ್ಕೆ ಸಹಿ ಹಾಕಬೇಕು. ಪ್ರಕಾಶಕನಿಗೆ ಅಂತಿಮವಾಗಿ ಸ್ವೀಕಾರಾರ್ಹವಾದ ಹಸ್ತಪ್ರತಿಯನ್ನು ಲೇಖಕ ಕೊಡದೆ ಹೋದರೆ ಪುಸ್ತಕವನ್ನು ಪ್ರಕಟಿಸುವ ತನ್ನ ಸಲಹೆಯನ್ನು ಹಿಂತೆಗೆದುಕೊಳ್ಳುವ ಹಕ್ಕು ಪ್ರಕಾಶಕನಿಗಿದೆ ಎಂದು ಎಲ್ಲ ಒಪ್ಪಂದಗಳಲ್ಲಿ ನಿರ್ದಿಷ್ಟವಾಗಿ ಸೂಚಿಸಲಾಗಿರುತ್ತದೆ. ಆದ್ದರಿಂದ ಕೋರಿ ಪಡೆದ ಹಸ್ತಪ್ರತಿಗೆ ಕೊನೆಯ ಹಂತದಲ್ಲಿ ಪ್ರಕಾಶಕ ಬೆಂಬಲವನ್ನು ಹಿಂತೆಗೆದುಕೊಳ್ಳುವುದು ಅಸಾಮಾನ್ಯವೇನಲ್ಲ ಅಥವಾ ಇದ್ದಕ್ಕಿದ್ದಂತೆ ಎರಗುವ ಸಿಡಿಲೂ ಅಲ್ಲ. ಆದರೆ ಹಸ್ತಪ್ರತಿಗಳನ್ನು ಲೇಖಕರಿಂದ ಕೋರಿದಾಗ, ಒಪ್ಪಂದಕ್ಕೆ ಸಹಿ ಹಾಕುವ ಸಮಯದಲ್ಲಿ ಲೇಖಕರಿಗೆ ಸಾಮಾನ್ಯವಾಗಿ ಮುಂಗಡ ಹಣವನ್ನು ಕೊಡಲಾಗುತ್ತದೆ; ಕೃತಿಯ ಅರ್ಧ ಭಾಗವನ್ನು ಬರೆದಾದ ಮೇಲೆ ಬಹುಶಃ ಇನ್ನಷ್ಟು ಮುಂಗಡ ಕೊಡಲಾಗುತ್ತದೆ ಹಾಗೂ ಪೂರ್ಣ ಹಸ್ತಪ್ರತಿಯನ್ನು ಪ್ರಕಾಶಕನಿಗೆ ಕೊಟ್ಟಾಗ ಬಹುಶಃ ಇನ್ನಷ್ಟು ಹಣ ಕೊಡಲಾಗುತ್ತದೆ. ಪ್ರತಿ ಸಲವೂ ಕೊಡಬೇಕಾದ ನಿರ್ದಿಷ್ಟ ಹಣವನ್ನು, ಪ್ರಸ್ತಾವದ ಪ್ರಾರಂಭದಲ್ಲಿ ಮಾಡಿಕೊಳ್ಳಲಾಗುವ ಒಪ್ಪಂದದಲ್ಲಿ ಸೂಚಿಸಲಾಗಿರುತ್ತದೆ. ಹೀಗೆ ಅಂತಿಮವಾಗಿ ತನ್ನ ಕೃತಿ ತಿರಸ್ಕೃತವಾದರೂ ತಾನು ನಿರ್ಗತಿಕನಾಗದೆ ಇರುವ ರೀತಿಯಲ್ಲಿ ಲೇಖಕ ತನ್ನ ಹಿತವನ್ನು ಕಾಪಾಡಿಕೊಂಡಿರುತ್ತಾನೆ. ಇದಲ್ಲದೆ, ಅನೇಕ ಲೇಖಕರು ತಾವು ಬರೆಯುವುದಾಗಿ ಭರವಸೆ ನೀಡಿದ ಪುಸ್ತಕದ ಒಂದು ಅಕ್ಷರವನ್ನೂ ಬರೆಯದೆ ಪ್ರಕಾಶಕರಿಂದ ಮುಂಗಡಗಳನ್ನು ಸಂಗ್ರಹಿಸುವ ಕಲೆಯನ್ನು ಸಾಧಿಸಿಕೊಂಡಿದ್ದಾರೆ.

ಸ್ವಲ್ಪಸ್ವಲ್ಪವಾಗಿ ಬರುವ ಹಸ್ತಪ್ರತಿಯ ಭಾಗಗಳನ್ನು ಪರಿಶೀಲಿಸುವ ಪ್ರಕ್ರಿಯೆಯಲ್ಲಿ ಸಂಪಾದಕ ಪಠ್ಯದ ಜಾಡನ್ನು ಗಮನಿಸಲು ಲೇಖಕರಿಗೆ ವಿವರವಾದ ಸಲಹೆಗಳನ್ನು ಕೊಟ್ಟಿರಬೇಕು. ದೊರೆತ ಸಾಮಗ್ರಿಯನ್ನು ಆತ ಒಂದಕ್ಕಿಂತಲೂ ಹೆಚ್ಚು ಸಲ ತಿದ್ದಿರಲೂಬಹುದು. ಏನು ಬೇಕಾಗಿತ್ತೋ ಅದಕ್ಕೆ ತಕ್ಕಂತೆ ಲೇಖಕ ಬರೆದಿಲ್ಲ ಎಂದು ತನಗೆ ಖಚಿತವಾದಾಗ ಮಾತ್ರ ಕೃತಿಯನ್ನು ತಿರಸ್ಕರಿಸುವಂತೆ ಆತ ನಿರ್ವಾಹವಿಲ್ಲದೆ ಶಿಫಾರ್ಸು ಮಾಡುತ್ತಾನೆ. ಆದರೆ ಆ ಹೊತ್ತಿಗೆ ಸಂಪಾದಕನೂ ಹಸ್ತಪ್ರತಿಯ ಬಗ್ಗೆ ಸಾಕಷ್ಟು ಸಮಯ ವ್ಯಯಿಸಿರುತ್ತಾನೆ ಹಾಗೂ ಲೇಖಕ ಮುಂಗಡಗಳೇ ಅಲ್ಲದೆ ಆತನ ಸಲಹೆಗಳ ಲಾಭವನ್ನೂ ಪಡೆದಿರುತ್ತಾನೆ.

ಒಬ್ಬ ಸಂಪಾದಕನಾಗಿ ನಾನು ಲೇಖಕರ ಕೃತಿಗಳನ್ನು ಅಂಗೀಕರಿಸುವುದಕ್ಕೆ ಬಹಳ

ಮೊದಲೇ ಕೃತಿಗಳ ಕರಡುಗಳನ್ನು ಸುಧಾರಿಸಲು ಬಹಳ ಸಲ ಶ್ರಮಿಸಿದ್ದೇನೆ. ಪುಸ್ತಕವನ್ನು ಪುನರ್ರೂಪಿಸಲು ಮತ್ತು ಸಾಧ್ಯವಾದರೆ ಪ್ರಕಟಣಾರ್ಹ ಪುಸ್ತಕವನ್ನು ಹೊರತರಲು ಲೇಖಕರಿಗೆ ನೆರವಾಗುವುದು ನನ್ನ ಪ್ರಯತ್ನವಾಗಿತ್ತು. ಬಹಳ ಸಲ ಅಷ್ಟೆಲ್ಲ ಶ್ರಮಿಸಿದರೂ ಪ್ರಕಟಣಾರ್ಹ ಹಸ್ತಪ್ರತಿ ನನಗೆ ದೊರೆತಿಲ್ಲ; ಕೊನೆಗೆ ನಾನು ಪ್ರಕಟಿಸದೆ ಇದ್ದ ಕೃತಿಗಳ ಲೇಖಕರು ನಾನು ಕೊಟ್ಟ ಸಲಹೆಗಳನ್ನು ಮೆಚ್ಚಿದರೆಂದು ನಾನು ಭಾವಿಸಿದ್ದೇನೆ. ಏಕೆಂದರೆ ಇನ್ನೊಬ್ಬ ಪ್ರಕಾಶಕರನ್ನು ಹುಡುಕುವುದು ಅವರಿಗೆ ಸುಲಭವಾಯಿತು.

ಇದೆಲ್ಲದರ ನೀತಿ ಏನೆಂದರೆ, ಅಂತಿಮವಾಗಿ ಪುಸ್ತಕ ಬೇರೆಡೆ ಹೋದರೂ ಭರವಸೆ ತೋರುವ ಹಸ್ತಪ್ರತಿಗಳು ಮತ್ತು ಲೇಖಕರಿಗೆ ಸಂಪಾದಕೀಯ ನೆರವನ್ನು ಬಹಳಷ್ಟು ನೀಡಲಾಗುತ್ತದೆ ಎಂಬುದೇ ಆಗಿದೆ. ಅನೇಕ ಸಲ ಸಂಪಾದಕೀಯ ಪರಹಿತ ಚಿಂತನೆ ಮತ್ತು ಸ್ವಂತ ಹಿತಚಿಂತನೆ ಒಟ್ಟಿಗೇ ನಡೆಯುತ್ತದೆ; ಇದರಿಂದ ಕೆಲವೊಮ್ಮೆ ಲೇಖಕರಿಗೆ ಅಪಾರ ಪ್ರಯೋಜನ ಆಗುತ್ತದೆ ಹಾಗೂ ಅವರಿಗೆ ಅದು ತಿಳಿದೇ ಇದೆ.

ಎಲ್ಲ ಲೇಖಕರು ತಮ್ಮ ಪುಸ್ತಕಗಳು ಆದಷ್ಟು ಬೇಗ ಮತ್ತು ಆದಷ್ಟು ಚೆನ್ನಾಗಿ ಪ್ರಕಟವಾಗಬೇಕೆಂದು ಇಚ್ಛಿಸುತ್ತಾರೆ. ಆದರೆ ವಿಚಿತ್ರವೆಂದರೆ, ಪ್ರಕಾಶನ ಸಂಸ್ಥೆಯೊಂದರ ಸಂಪಾದಕೀಯ ವಿಭಾಗ ಸುಲಭವಾಗಿ ನಿರ್ವಹಿಸುವುದಕ್ಕಿಂತಲೂ ಹೆಚ್ಚಿನ ಕೆಲಸವನ್ನು ಸಂಸ್ಥೆ ಆಕರ್ಷಿಸುವುದು ಬಹುಮಟ್ಟಿಗೆ ಅದರ ಯಶಸ್ಸಿನ ಹೆಗ್ಗುರುತೆಂದೇ ಹೇಳಬಹುದು. ತಮ್ಮ ಸಿಬ್ಬಂದಿಯನ್ನು ಹೆಚ್ಚು ಮಾಡುತ್ತಲೇ ಹೋಗುವುದು ಬಹಳಷ್ಟು ಪ್ರಕಾಶಕರಿಗೆ ಸಾಧ್ಯವಿಲ್ಲ; ಹಾಲಿ ಇರುವ ಸಂಪಾದಕ ತಂಡದ ಬೆನ್ನುಗಳು ಮುರಿಯುತ್ತಿದ್ದಾಗ ಮಾತ್ರ ಅವರು ಹೆಚ್ಚಿನ ಸಿಬ್ಬಂದಿಯನ್ನು ನೇಮಿಸಿಕೊಳ್ಳುವ ಬಗ್ಗೆ ಯೋಚಿಸುತ್ತಾರೆ. ಬೆನ್ನುಮೂಳೆಯ ಉರಿಯೂತ ಸಂಪಾದಕರಿಗೆ ಬಹಳಷ್ಟು ತಗಲುವ ರೋಗ ಹಾಗೂ ಶಮನಕಾರಕ ಔಷಧಿಗಳ ಅಥವಾ ಮದ್ಯಪಾನದ ಸೇವನೆ ಸಂಪಾದಕರು ಚಿತ್ತಶಾಂತಿ ಪಡೆಯಲು ಬಳಸುವ ಪರಿಹಾರ ಮಾರ್ಗಗಳು. 30 ವರ್ಷಗಳ ಹಿಂದೆ ಲಂಡನ್‌ನಲ್ಲಿ ನಾನು ಕೆಲಸ ಪ್ರಾರಂಭಿಸಿದ ಪ್ರಕಾಶನ ಸಂಸ್ಥೆಯ ಸಂಪಾದಕೀಯ ವಿಭಾಗದಲ್ಲಿ ಪಾನಪರಿಕರಗಳಿಂದ ಸಜ್ಜಾಗಿದ್ದ ಸ್ಥಳ ಹಾಗೂ ಔಷಧಿಗಳ ಪೆಟ್ಟಿಗೆ ನನಗಿನ್ನೂ ನೆನಪಿವೆ; ಬೇರೆ ಯಾವುದೇ ವಿಭಾಗಕ್ಕೂ ಅಂತಹ ಸೌಲಭ್ಯಗಳಿರಲಿಲ್ಲ. ಸಂಪಾದಕೀಯ ಕೆಲಸ ವಿವರವಾಗಿ ಪರಿಶೀಲಿಸಿ, ಗಮನವನ್ನು ಕೇಂದ್ರೀಕರಿಸಿ ಮಾಡಬೇಕಾದ ಸ್ವರೂಪದ್ದಾದ್ದರಿಂದ ಹಸ್ತಪ್ರತಿಯೊಂದನ್ನು ಕ್ಷಣದಲ್ಲಿ ಮುಗಿಸಲಾಗದು; ಇದರರ್ಥ ಅತ್ಯಂತ ಸಮರ್ಥ ಸಂಪಾದಕರೂ ಅತ್ಯಂತ ಪಟ್ಟು ಹಿಡಿದು ಕೆಲಸ ಮಾಡಿದರೂ ಅವರ ಇನ್–ಟ್ರೇಗಳಲ್ಲಿ ಕೆಲಸ ಬೆಟ್ಟದಷ್ಟೆತ್ತರ ಉಳಿದಿರುತ್ತದೆ. ಅಂತಿಮವಾಗಿ, ಪ್ರತೀಕ್ಷೆಯಲ್ಲಿರುವ ಲೇಖಕರು ತಮ್ಮ ತಾಳ್ಮೆಯನ್ನು ಕಳೆದುಕೊಳ್ಳಲಾರಂಭಿಸುತ್ತಾರೆ, ತಮ್ಮ ಪುಸ್ತಕಗಳ ಬಗ್ಗೆ ವಿಚಾರಿಸಲು ಇದ್ದಕ್ಕಿದ್ದಂತೆ ಕಾಣಿಸಿಕೊಳ್ಳುತ್ತಾರೆ, ಮೊದಲಿಗೆ ನೆನಪು ಕೊಡುವ ಸೌಮ್ಯವಾದ ಪತ್ರಗಳನ್ನು ಬರೆಯುತ್ತಾರೆ, ನಂತರ ನೆನಪು ಮಾಡುವ ಅಸಮಾಧಾನದ ಪತ್ರಗಳನ್ನು ಬರೆಯುತ್ತಾರೆ ಹಾಗೂ ಅದರಿಂದಲೂ

ಕೆಲಸ ಚುರುಕಾಗದಿದ್ದರೆ – ಇದು ಬಹಳ ಭಯಂಕರ-ಸಂಪಾದಕನ ಕೆಲಸ ಎಂತಹುದು ಎಂಬ ಬಗ್ಗೆ ಏನೇನೂ ತಿಳಿಯದ, ಸಂಪಾದಕನ ಯಜಮಾನನಿಗೆ ದೂರು ಕೊಡುತ್ತಾರೆ.

ಅಂತಹ ಸಂದರ್ಭಗಳಲ್ಲಿ ಸಂಪಾದಕ–ಲೇಖಕನ ನಡುವಣ ಸಂಬಂಧ ಯಾತನಾಮಯ ಪರೀಕ್ಷೆಗೊಳಪಡುತ್ತದೆ, ಪರಸ್ಪರರಲ್ಲಿನ ವಿಶ್ವಾಸ ಕುಂದುತ್ತದೆ ಹಾಗೂ ಸಂಪಾದಕ ತೀವ್ರ ಹತಾಶೆಯ ಅಂಚಿಗೆ ಬರುತ್ತಾನೆ – ಟೆಲಿಫೋನ್ ಕೆಟ್ಟುಹೋಗಲಿ ಎಂದು ಬಯಸುತ್ತಾನೆ, ತನ್ನನ್ನು ಹಿಂಸಿಸಬಹುದಾದ ಲೇಖಕ ಎದುರಾಗಬಹುದಾದ ನಗರದ ರಸ್ತೆಗಳು, ಗಲ್ಲಿಗಳಿಂದ ದೂರವಿರುತ್ತಾನೆ, ಅಂಚೆಯವನು ನಿತ್ಯ ತರುವ ಪತ್ರಗಳಲ್ಲಿ ಆವನ ಕಾಗದ ಎಲ್ಲಿರುತ್ತದೋ ಎಂದು ಭಯಪಡುತ್ತಾನೆ ಹಾಗೂ ವಿಷಾದದ- ವಿಷಯವೆಂದರೆ ಕೆಲವೊಮ್ಮೆ ಲೇಖಕನ ಸಾವನ್ನೂ ಕೋರುತ್ತಾನೆ. ಅಂತಹ ಪರಿಸ್ಥಿತಿಗಳಲ್ಲಿ, ಕೆಲಸದ ಹೊರೆ ವಿಪರೀತವಾಗಿ ಹೆಚ್ಚಾಗಿ, ದುಡಿಯುವ ಗಂಟೆಗಳು ಹೆಚ್ಚಾಗುತ್ತಾ ಹೋಗಿ, ಹಾಗೆ ದುಡಿದರೂ ಬೆಳೆಯುತ್ತಾ ಹೋಗುವ ಹಸ್ತಪ್ರತಿಗಳ ಕೆಲಸವನ್ನು ನಿಭಾಯಿಸಲಾಗದೆ ಹೋದಾಗ, ಅನೇಕ ಸಂಪಾದಕರಲ್ಲಿ ಒಂದೋ ಎರಡೋ ಹಸ್ತಪ್ರತಿಗಳ ಬಗ್ಗೆ ಮನೋವೈಜ್ಞಾನಿಕ ಅಡಚಣೆ ಬೆಳೆಯುತ್ತದೆ. ಅವರು ಬಹುತೇಕ ಇತರ ವಿಭಾಗಗಳಲ್ಲಿ, ತಮ್ಮ ಕುರ್ಚಿಗಳಲ್ಲಿ ಕುಳಿತು ನಿಯತಕಾಲಿಕಗಳನ್ನು ಓದಲು ಸಮಯವಿರುವ, ಪುಸ್ತಕ ಮಾರಾಟಗಾರರು ಅಥವಾ ಮುದ್ರಕರನ್ನು ಭೇಟಿಯಾಗಲು ಓಡಾಡಬೇಕಾದ ಕೆಲಸವಿರುವ ಮತ್ತು ಮಾರಾಟದ ಕೆಲಸದ ಮೇಲೆ ಎರಡು ವಾರಗಳ ಪ್ರವಾಸಕ್ಕೆ ಹೋಗುವ ಸಹೋದ್ಯೋಗಿಗಳತ್ತ ಹಾಗೂ ಕೆಲವೊಮ್ಮೆ ತಮ್ಮ ವಿಭಾಗದ ಸೋಮಾರಿ ಸಹೋದ್ಯೋಗಿಗಳತ್ತ ಅಸೂಯೆಯ ದೃಷ್ಟಿ ಬೀರುತ್ತಾರೆ. ಸದಾ ಕಾರ್ಯನಿರತ ಪ್ರಕಾಶನ ಸಂಸ್ಥೆಯೊಂದರಲ್ಲಿ, ಸಂಪಾದಕೀಯ ಕೆಲಸವನ್ನು ಉತ್ತಮವಾಗಿ ಮಾಡಿದ್ದೇ ಆದರೆ, ಅದು ಅತ್ಯಂತ ಶ್ರಮ, ಬುದ್ಧಿ ಬಳಸಬೇಕಾದ ಮತ್ತು ಒತ್ತಡಗಳಿಂದ ಕೂಡಿದ ಕೆಲಸವಾಗುತ್ತದೆ. ಸಂಪಾದಕನ ಹುಬ್ಬು ಇತರರಿಗಿಂತ ಹೆಚ್ಚು ಗಂಟು ಕಟ್ಟಿರುತ್ತದೆ ಹಾಗೂ ಆತ ತನ್ನ ಸಂಸ್ಥೆಯ ಘನತೆಯನ್ನು ಕಾಪಾಡುವುದರಲ್ಲಿ ಹಿರಿಯನಾಗಿರುತ್ತಾನೆ. ಹಸ್ತಪ್ರತಿಯಿಂದ ಒಂದು ಪುಸ್ತಕದ ಸೃಷ್ಟಿಗೆ ನೆರವಾಗುವಾಗ, ಅನೇಕ ಸಲ ಕಳಪೆ ಹಸ್ತಪ್ರತಿಯಿಂದ ಪುಸ್ತಕದ ಸೃಷ್ಟಿಗೆ ನೆರವಾಗುವಾಗ – ವಿದ್ವಾಂಸರೂ, ಪ್ರತಿಭಾವಂತರೂ ಆದ ಲೇಖಕರೊಂದಿಗೆ ಒಡನಾಟ ಹೊಂದಿದಾಗ, ಸಂಪಾದಕರ ಮನಸ್ಸಿಗೆ ನಿಸ್ಸಂಶಯವಾಗಿ ಆಹ್ಲಾದ ಉಂಟಾಗುವುದಾದರೂ ಈ ಸಂಬಂಧ ಬಹಳ ಸಲ ಬಿಗುವಿನಿಂದ ಕೂಡಿದ್ದು.

ಸಾಧ್ಯವಾದಷ್ಟೂ, ಎಲ್ಲವನ್ನೂ ನಗುಮುಖದಿಂದ ಎದುರಿಸಬೇಕು ಎಂದು ಹೇಳಬೇದ ಅಗತ್ಯವಿಲ್ಲ. ನಿಮ್ಮ ಕೆಲಸದ ಹೊರೆಯ ಬಗ್ಗೆ ಲೇಖಕರೊಂದಿಗೆ ಸಾಕಷ್ಟು ಬಿಚ್ಚುಮನಸ್ಸಿನಿಂದಲೇ ಹೇಳಿಕೊಳ್ಳಿ; ನೀವು ಫಜೀತಿಗೆ ಸಿಕ್ಕಿಕೊಳ್ಳುವ ಮೊದಲು, ಅವರ ಪುಸ್ತಕ ಕುರಿತಂತೆ ನಿಮ್ಮ ಕಾರ್ಯ ಪ್ರಾರಂಭಿಸುವುದಕ್ಕೆ ಅವರು ಎಷ್ಟು ಸಮಯ ಕಾಯಬೇಕು ಎಂಬುದನ್ನೂ, ಏನೇ ಆದರೂ ಸುಮಾರು 9 ರಿಂದ 12

ತಿಂಗಳ ಅವಧಿಯಲ್ಲಿ ಪುಸ್ತಕವನ್ನು ಹೊರತರುವ ಇರಾದೆ ನಿಮಗಿದೆ ಎಂಬುದನ್ನೂ ಅವರಿಗೆ ತಿಳಿಸಿ. ಸರದಿಯಲ್ಲಿನ ತಮ್ಮ ಸ್ಥಾನದಿಂದ ಮುಂದೆ ಹಾರಿ ನಿಲ್ಲಬಹುದು ಎಂದು ಅವರು ಭಾವಿಸುವುದಕ್ಕೆ ಅವಕಾಶ ಕೊಡಬೇಡಿ. ಇಷ್ಟೆಲ್ಲಾ ನಿರ್ಧಾರ ಆದ ಮೇಲೆ ಲೇಖಕರು ತಳಮಳಗೊಳ್ಳಲು ಪ್ರಾರಂಭಿಸುವವರೆಗೆ ಅವರನ್ನು ಸಂಪೂರ್ಣವಾಗಿ ಮರೆಯಬೇಡಿ; ಅವರಿಗಿಂತ ಒಂದು ಹೆಜ್ಜೆ ಮುಂದೆ ಇರಿ; ಅನಂತರ ಎಲ್ಲವೂ ಸುಗಮವಾಗಿ ಆಗದೆ ಹೋದರೂ, ಸ್ವಲ್ಪ ಮಟ್ಟಿನ ಶಾಂತಿಯಾದರೂ ಇರುತ್ತದೆ. ವಿಷಯ ತಮ್ಮ ಮತ್ತು ಅಮರತ್ವದ ನಡುವೆ ನೀವೊಬ್ಬರೇ ಕೇಡಿನ ಗೋಡೆ ಎಂದು ಲೇಖಕರು ಭಾವಿಸುವ ಹಂತವನ್ನು ತಲುಪುವುದಕ್ಕೆ ಬಿಡಬೇಡಿ.

ಸಂಪಾದಕ–ಲೇಖಕನ ನಡುವಣ ಸಂಬಂಧಕ್ಕೆ ಆದರದೇ ಆದ ಪ್ರಪಂಚವಿದೆ ಎಂದು ತೋರಿದರೂ, ಅದು ನಿಜಕ್ಕೂ ಸ್ವತಂತ್ರವಲ್ಲ; ತನ್ನನ್ನು ಮಾತ್ರವಲ್ಲದೆ ತನ್ನ ಪ್ರಕಾಶನ ಸಂಸ್ಥೆಯನ್ನೂ ತಾನು ಪ್ರತಿನಿಧಿಸುತ್ತೇನೆ ಎಂಬುದನ್ನು ಸಂಪಾದಕ ನೆನಪಿಡಬೇಕು. ಸಂಪಾದಕ–ಲೇಖಕನ ನಡುವಣ ಸಂಬಂಧ ಅನೇಕ ಸಲ ಗೆಳೆತನವಾಗುತ್ತದೆ ಎಂಬುದನ್ನು ಈಗಾಗಲೇ ನಾವು ಗಮನಿಸಿದ್ದೇವೆ: ಇದನ್ನು ಹೇಳಿದ ಮೇಲೆ, ತಾನು ಕೆಲಸ ಮಾಡುವ ಸಂಸ್ಥೆಯ ಮುಖ್ಯಸ್ಥ ಅಥವಾ ಮಾಲಿಕ ತಾನಲ್ಲ ಎಂಬುದನ್ನು ಸಂಪಾದಕ ನೆನಪಿಟ್ಟುಕೊಳ್ಳಬೇಕು; ಲೇಖಕರೊಡನೆ ತಾನು ಹೊಂದಿರುವ ಗೆಳೆತನ ತಾನು ಸೇವೆ ಸಲ್ಲಿಸಬೇಕಾದ ಸಂಸ್ಥೆಯ ಹಿತವನ್ನು ಮರೆಯುವಂತೆ ಮಾಡಬಾರದು ಹಾಗೂ ತಾನು ಬೆಳೆಸುವ ಪಟ್ಟಿ ಉತ್ಕೃಷ್ಟವಾದ ಆದರೆ ಮಾರಾಟವಾಗದ ಪುಸ್ತಕಗಳ ಖಾಸಗಿ ಸಂಗ್ರಹಣೆಯಾಗದೆ ಸಂಸ್ಥೆಯ ಧನಸಂಪತ್ತನ್ನು ಸಾಕಷ್ಟು ಹೆಚ್ಚಿಸುವ ಪಟ್ಟಿಯಾಗಬೇಕು ಎಂಬುದನ್ನು ಸಂಪಾದಕ ನೆನಪಿಡಬೇಕು. ಆದ್ದರಿಂದ, ಗೆಳೆತನದಿಂದ ಇರುವ ಲೇಖಕರೊಬ್ಬರ ಸಲಹೆಗಳನ್ನು ನಿಷ್ಪಕ್ಷಪಾತವಾಗಿ ಅಳೆಯಲು ಅಸಮರ್ಥವಾಗುವ ಮಟ್ಟಿಗೆ ಅವರ ಬಗ್ಗೆ ಸಂಪಾದಕ ಬೆರಗಾಗಿರಬಾರದು. ಇವೆಲ್ಲವೂ ಸಂಪಾದಕ – ಲೇಖಕರ ನಡುವಣ ಸಂಬಂಧವನ್ನು ಮತ್ತಷ್ಟು ಜಟಿಲಗೊಳಿಸುತ್ತವೆ.

ತಾವು ನಿರ್ವಹಿಸುತ್ತಿರುವ ಲೇಖಕರನ್ನು ಕೆಲವೊಮ್ಮೆ ಸಂಪಾದಕರು ತಮ್ಮ ಆಸ್ತಿ ಎಂಬಂತೆ ಪರಿಗಣಿಸುತ್ತಾರೆ ಹಾಗೂ ಅವರನ್ನು 'ನನಗೆ ಸೇರಿದವರು' ಎಂದು ಹೇಳುತ್ತಾ, ಅವರೊಂದಿಗೆ ಸಂಸ್ಥೆಯ ಇತರರು ಏನೂ ವ್ಯವಹಾರ ಹೊಂದಿಲ್ಲ ಎಂಬಂತೆ ವರ್ತಿಸುತ್ತಾರೆ. ಆದರೆ ಪ್ರಕಾಶನ ಸಂಸ್ಥೆಯಲ್ಲಿ ಬೇರೆ ಬೇರೆ ಜನರು – ಸಂಪಾದಕರಿಂದ ಮೊದಲುಗೊಂಡು ಮುದ್ರಣ ವಿಭಾಗ, ಮಾರುಕಟ್ಟೆ, ಪುಸ್ತಕಗಳನ್ನು ಪ್ಯಾಕ್ ಮಾಡುವ ವಿಭಾಗದವರೆಗೆ ಅನೇಕರು – ಲೇಖಕರ ಪುಸ್ತಕಕ್ಕಾಗಿ ಕೆಲಸ ಮಾಡುತ್ತಾರೆ ಹಾಗೂ ಪರಸ್ಪರ ಪರಿಚಯ ಮಾಡಿಕೊಳ್ಳುವುದು ಇವರೆಲ್ಲರಿಗೂ ಮತ್ತು ಲೇಖಕರಿಗೂ ಉಪಯುಕ್ತವಾಗುತ್ತದೆ. ಇದೇ ಅಲ್ಲದೆ, ಸಂಪಾದಕರು ರಜೆ ಹೋಗಬೇಕಾದರೆ ಅಥವಾ ಖಾಯಿಲೆ ಬಿದ್ದರೆ ಅಥವಾ ಕೆಲಸವನ್ನೇ ಬಿಟ್ಟು ಹೋದರೆ ಪ್ರಕಾಶನ ಸಂಸ್ಥೆಯ ಇತರರ ನೆರವು ಪಡೆಯುವ ಅವಕಾಶ ಲೇಖಕರಿಗಿರಬೇಕು. ಇದರಿಂದ ಸಂಪಾದಕ ಇಲ್ಲದೆ ಹೋದಾಗ ಅಸಹಾಯಕರಾಗುವುದು ಲೇಖಕರಿಗೆ

ತಪ್ಪುತ್ತದೆ ಹಾಗೂ ತಮ್ಮ ಹಿಂದಿನ ಸಂಪಾದಕರು ಹೊರಟುಹೋದ ನಂತರವೂ ತಮ್ಮಿಂದ ಕೃತಿಗಳನ್ನು ಆಹ್ವಾನಿಸುವುದನ್ನು ಮುಂದುವರೆಸುವ ಜನರು ಸಂಸ್ಥೆಯಲ್ಲಿದ್ದಾರೆ ಎಂಬುದು ಲೇಖಕರಿಗೆ ತಿಳಿಯುತ್ತದೆ. ಆದ್ದರಿಂದ, ಇನ್ನೊಂದು ಸಂಸ್ಥೆಗೆ ಸೇರಲಿರುವ ಸಂಪಾದಕರು ಲೇಖಕರನ್ನು ಕದಿಯಬೇಕೆಂದು ಇಚ್ಛಿಸದೆ ಇದ್ದಲ್ಲಿ, ಅವರೊಡನೆಯ ಸಂಬಂಧದಲ್ಲಿ 'ನನಗೆ ಸೇರಿದವರು' ಎಂಬ ಭಾವನೆ ಸಂಪಾದಕರಲ್ಲಿ ಮೂಡಬಾರದು. ತನ್ನ ಸಂಪಾದಕರಿಗೆ ಸಮಂಜಸವಾದ ಸ್ವಾತಂತ್ರ್ಯ ಕೊಡುವಾಗ ಪ್ರಕಾಶಕರು ಸಾಮಾನ್ಯವಾಗಿ ಸಂಪಾದಕರು ಸಾಧಿಸಬೇಕಾದ ಹಣಕಾಸಿನ ಗುರಿಗಳ ಬಗ್ಗೆ ಹಾಗೂ ತಾನು ಬೆಂಬಲಿಸಲಿಚ್ಛಿಸುವ ಪುಸ್ತಕಗಳು ಹೇಗಿರಬೇಕು, ಅವುಗಳ ಗುಣಮಟ್ಟ ಹೇಗಿರಬೇಕು ಎಂಬ ಬಗ್ಗೆ ಸ್ಥೂಲವಾಗಿ ಅವರಿಗೆ ಮನದಟ್ಟು ಮಾಡಿಕೊಡುತ್ತಾರೆ. ಇಂತಹ ಮಾರ್ಗದರ್ಶನಗಳು ತನ್ನ ಬುದ್ಧಿಶಕ್ತಿಯ ಮೇಲೆ ಪ್ರಭಾವ ಬೀರುತ್ತವೆ ಎಂದು ಯಾವ ಸಂಪಾದಕರೂ ಭಾವಿಸಬಾರದು. ಹಾಗೂ ರಹಸ್ಯವಾಗಿ ಹೀಗೆ ಭಾವಿಸಿದರೂ ಸಹ ಸಂಸ್ಥೆಯ ಹಿತದೃಷ್ಟಿಯಿಂದ, ಸಂಸ್ಥೆಯ ವಿರುದ್ಧದ ಗೊಣಗಾಟವನ್ನು ಲೇಖಕನವರೆಗೆ ಒಯ್ಯಬಾರದು. ಹೀಗೆ ಸಂಪಾದಕ ಲೇಖಕನ ನಡುವಣ ಸಂಬಂಧದಲ್ಲಿ ಅಂತರ್ಗತವಾದ ಆತ್ಮೀಯತೆ ಇದ್ದರೂ ಸಹ ಇಬ್ಬರ ನಡುವೆ ಒಂದಿಷ್ಟು ಅಂತರ ಹಾಗೂ ನಿರ್ವಿಕಾರ ಬುದ್ಧಿ ಸದಾ ಇರಬೇಕಾದ ಅಗತ್ಯವಿದೆ.

ಸಂಪಾದಕ ಮತ್ತು ಆತನ ಮಾಲೀಕನ ನಡುವೆ ತಪ್ಪು ತಿಳುವಳಿಕೆ ಉಂಟಾಗಬಹುದಾದ ಮತ್ತೊಂದು ಕ್ಷೇತ್ರವಿದೆ. ಇದರಿಂದ ಕೆಲವು ಲೇಖಕರೊಂದಿಗೆ ಸಂಪಾದಕ ಹೊಂದಿರುವ ಸಂಬಂಧಗಳಿಗೆ ಬಾಧಕ ಉಂಟಾಗಬಹುದು. ಕೆಲವೇ ಕೆಲವು ಪ್ರಕಾಶನ ಸಂಸ್ಥೆಗಳ, ಅದರಲ್ಲೂ ಭಾರತದ ಸಂಸ್ಥೆಗಳ, ಮಾಲೀಕರು ಸಾಕಷ್ಟು ಕಲಿತವರಾಗಿದ್ದಾರೆ; ಆದರೆ ಅನೇಕರು ಶುದ್ಧ ಅರಸಿಕರು. ಏನೇ ಆದರೂ, ಪುಸ್ತಕಗಳ ಪಟ್ಟಿಯನ್ನು ಬೆಳೆಸುವುದರಲ್ಲಿ ಮೂಗು ಹಾಯಿಸದೆ ಸಂಪೂರ್ಣವಾಗಿ ದೂರ ಉಳಿಯಲು ಅವರಿಗೆ ಸಾಧ್ಯವಾಗದು ಹಾಗೂ ಕೆಲವೊಮ್ಮೆ ತಮ್ಮ ಸಂಪಾದಕರೊಂದಿಗೆ ಸಮಾಲೋಚಿಸದೆಯೇ ಹಸ್ತಪ್ರತಿಗಳನ್ನು ಒಪ್ಪಿಕೊಳ್ಳುವ ಸ್ವಾತಂತ್ರ್ಯ ತಮಗಿದೆ ಎಂದು ಅವರು ಯೋಚಿಸಲೂಬಹುದು. ದುರದೃಷ್ಟವಶಾತ್, ಭಾರತದಲ್ಲಿ ಪ್ರಕಾಶನ ಪಟ್ಟಿಗಳಲ್ಲಿರುವ ಬಹುಪಾಲು ಏರುಪೇರು ಸಂಪಾದಕೀಯ ಕಾರ್ಯದಲ್ಲಿ ಮಾಲೀಕರು ನಡೆಸುವ ಹಸ್ತಕ್ಷೇಪದಿಂದ ಬಹುಶಃ ಹೊಮ್ಮುತ್ತದೆ: ಆದರೆ ಇಂತಹ ಹಸ್ತಕ್ಷೇಪದ ಮತ್ತೊಂದು ಪರಿಣಾಮವೆಂದರೆ ಕಳಪೆ ಅಥವಾ ಪ್ರಕಟಿಸಲಾಗದ ಕೃತಿಗಳನ್ನು ಬದಲಾಯಿಸುವಂತೆ ಅಥವಾ ಅವುಗಳನ್ನು ಕಣ್ಣುಮುಚ್ಚಿ ಒಪ್ಪಿಕೊಳ್ಳುವಂತೆ ಸಂಪಾದಕರನ್ನು ಕೇಳಲಾಗುತ್ತದೆ ಹಾಗೂ ಆಗ ಸಂಪಾದಕ ಹಿತ್ತಿಲ ಬಾಗಿಲಿನಿಂದ ತನ್ನ ಜೀವನವನ್ನು ಪ್ರವೇಶಿಸಿದ ಲೇಖಕನನ್ನು ಆ ಕೂಡಲೇ ಸಹಿಸದೆ ಹೋಗುತ್ತಾನೆ. ಮಾಲೀಕರು ತಮ್ಮ ಮೂರನೇ ದರ್ಜೆಯ ಲೇಖಕ ಮಿತ್ರರನ್ನು ತಮ್ಮ ಸಂಪಾದಕರ ಮೇಲೆ ಹೇರುವುದರ ಬದಲಾಗಿ ತಮ್ಮ ತಪ್ಪುಗಳನ್ನು ತಾವೇ ಸರಿಪಡಿಸಿಕೊಳ್ಳುವುದು ಒಳ್ಳೆಯದು.

ಇದುವರೆಗೆ ನಾನು ಪೂರ್ಣ ಪ್ರಮಾಣದ ಪ್ರಕಾಶನ ಸಂಸ್ಥೆಯೊಂದರಲ್ಲಿ ಸಂಪಾದಕ–ಲೇಖಕನ ನಡುವಣ ಸಂಬಂಧಗಳ ಲಕ್ಷಣಗಳ ಬಗ್ಗೆ ಮನಮುಟ್ಟುವಂತೆ ವಿವರ ನೀಡಿದ್ದೇನೆ: ಈ ಸಂಬಂಧ ತಾನಾಗಿ ಎಷ್ಟು ನಿಕಟವಾಗಿರುತ್ತದೆ, ಸಂಪಾದಕ ಹೊಂದಿರಬೇಕಾದ ಕಾರ್ಯಶ್ರದ್ಧೆ ಮತ್ತು ತೋರಬೇಕಾದ ಉತ್ಕೃಷ್ಟತೆ, ಆವನು ಹೊಂದಿರಬೇಕಾದ ಔಚಿತ್ಯಪ್ರಜ್ಞೆ ಮತ್ತು ಸೌಜನ್ಯ, ಇವುಗಳಿಂದ ಉಂಟಾಗುವ ಗೆಳೆತನ, ಪ್ರಕಾಶನ ಸಂಸ್ಥೆಯ ಘನತೆ ಮತ್ತು ಆದರ ಸ್ಥಾನಮಾನಗಳ ಮರ್ಯಾದೆಯನ್ನು ಕಾಪಾಡುವವನಾಗಿ ಅವನು ಹೊಂದಿರುವ ಜವಾಬ್ದಾರಿ, ಅವನಿಗಿರುವ ಇತಿಮಿತಿಗಳು ಹಾಗೂ ಸಂಪಾದಕ–ಲೇಖಕನ ನಡುವಣ ಸಂಬಂಧಗಳಲ್ಲಿ ಉಂಟಾಗುವ ಅಡಚಣೆಗಳು–ಇವುಗಳ ಬಗ್ಗೆ ಸ್ಥೂಲವಾಗಿ ಪ್ರಸ್ತಾಪಿಸಿದ್ದೇನೆ. ತಾನೇ ಸಂಪಾದಕ, ವಿನ್ಯಾಸಗಾರ, ಬಂಡವಾಳ ಹೂಡುವವ, ಬೆರಳಚ್ಚುಗಾರ ಮತ್ತು ರವಾನೆ ಗುಮಾಸ್ತನಾಗಿರುವ ಸಣ್ಣ, ಸ್ವತಂತ್ರ ಪ್ರಕಾಶನ ಸಂಸ್ಥೆ ಭಿನ್ನವಾಗಿರುತ್ತದೆಯೇ ?

ಕಳೆದ ನಾಲ್ಕು ವರ್ಷಗಳಿಗೂ ಹೆಚ್ಚು ಕಾಲದಿಂದ ನಾನು ಏಕ ವ್ಯಕ್ತಿಯ ಪ್ರಕಾಶನ ಘಟಕವೊಂದನ್ನು ನಡೆಸುತ್ತಿದ್ದೇನೆ. ಇದು ನನಗೆ ಬಹಳ ಸಂತೋಷ ಕೊಟ್ಟಿದೆ ಹಾಗೂ ನಾನಿನ್ನೂ ದಿವಾಳಿಯಾಗಿಲ್ಲ. ಒಂದು ಮಹಾನ್ ಪ್ರಕಾಶನ ಸಂಸ್ಥೆಯ ದಿವ್ಯವಾದ ಮರ್ಯಾದೆಯನ್ನು ಕಟ್ಟೆಚ್ಚರದಿಂದ ರಕ್ಷಿಸುವುದಕ್ಕೆ ಮತ್ತು ಬಲಪಡಿಸುವುದಕ್ಕಿಂತಲೂ ಹೆಚ್ಚಾಗಿ, ನನಗಿಷ್ಟವಾದ ಪುಸ್ತಕಗಳನ್ನು ಮಾತ್ರ ಪ್ರಕಟಿಸುವುದರಲ್ಲಿ ನಾನು ಸಂತಸಪಟ್ಟಿದ್ದೇನೆ. ನನ್ನ ಸ್ವಭಾವದ ಬೇರೆಬೇರೆ ಲಕ್ಷಣಗಳನ್ನು ಪ್ರತಿಬಿಂಬಿಸುವ ಪುಸ್ತಕಗಳನ್ನು ನಾನು ಪ್ರಕಟಿಸಬಲ್ಲೆ: ಕೆಲವು ಗಂಭೀರ, ಕೆಲವು ಹುಡುಗಾಟಿಕೆಯವು, ಕೆಲವು ಮುದ್ದಾಗಿರುವುವು, ಕೆಲವು ಪೋಲಿ, ಆದರೆ ಆಯಾಯಾ ಕ್ಷೇತ್ರಗಳಲ್ಲಿ ಓದಲು ಯೋಗ್ಯವಾದವು ಎಂದು ನಾನೆಣಿಸಿದ್ದೇನೆ. ನನ್ನ ಗುರುತು ನಾನು ಇಷ್ಟಪಡುವ ಜಾತಿಗೆ ಸೇರಿದ ಗೂಬೆ. ನಾನು ಮಾಡಲಿಚ್ಛಿಸುವ ಕೆಲಸ ನಡೆಯುತ್ತಿರುವವರೆಗೆ ನನ್ನ ವ್ಯವಹಾರದ ಬಗ್ಗೆ ಜನ ಏನೆಂದುಕೊಳ್ಳುತ್ತಾರೆ ಎಂಬ ಬಗ್ಗೆ ನಾನು ಯೋಚಿಸುವುದಿಲ್ಲ: ನಾನು ಕಾಪಾಡಬೇಕಾದ ಯಾವುದೇ ದೊಡ್ಡ ಸಂಸ್ಥೆ ಇನ್ನೂ ಉಂಟಾಗಿಲ್ಲ. ನಾನು ಹಸ್ತಪ್ರತಿಯೊಂದನ್ನು ತಿರಸ್ಕರಿಸುವಾಗ ಈಗಲೂ ಸೌಜನ್ಯದಿಂದಲೇ ತಿರಸ್ಕರಿಸುತ್ತೇನೆ. ಆದರೆ ನನ್ನ ತೀರ್ಮಾನಕ್ಕೆ ಕಾರಣಗಳನ್ನು ಕೇಳಿದಾಗ, ನನಗೆ ಇಷ್ಟವಾಗಲಿಲ್ಲ ಎಂದಷ್ಟೇ ಹೇಳಿದರೆ ಸಾಕು. ನನ್ನ ಗೂಬೆಯ ಕೂಗಿನಲ್ಲಿರುವ ಒಂದು ರೀತಿಯ ಸ್ವಾತಂತ್ರ್ಯ ಹಿಂದೆಂದಿಗಿಂತಲೂ ನೇರವಾಗಿ ನಾನು ಲೇಖಕರನ್ನು ಮುಖಾಮುಖಿಯಾಗಿ ನೋಡುವಂತೆ ಮಾಡಿದೆ. ಆದರೆ ಇಲ್ಲೂ ಸಹ, ಸಂಪಾದಕ – ಲೇಖಕನ ನಡುವಣ ಸಂಬಂಧ ಉತ್ತಮವಾಗಿಯೇ ಇರುವುದು ಒಂದು ಕೃಪೆ – ಇದಕ್ಕೆ ಹಿಂದಿನ 25 ವರ್ಷಗಳ ಕಾಲ ಸವಿಸ್ತಾರವಾಗಿ ಕತ್ತೆಯ ದುಡಿತ ಮಾಡಿದಾಗ ಗಳಿಸಿದ ಕೌಶಲ್ಯಗಳೇ ಕಾರಣ ಎನ್ನುವುದರಲ್ಲಿ ಅನುಮಾನವಿಲ್ಲ.

# ಸಂಪಾದಕೀಯ ಮತ್ತು ಇತರ ವಿಭಾಗಗಳ ನಡುವೆ ಅಂತರಕ್ರಿಯೆ

**ಊರ್ವಶಿ ಬುಟಾಲಿಯ**

ಒಂದು ಆದರ್ಶ ಸನ್ನಿವೇಶದಲ್ಲಿ ಪ್ರಕಾಶನ ಸಂಸ್ಥೆಯೊಂದರ ಪ್ರತಿಯೊಂದು ವಿಭಾಗವೂ ಇತರ ವಿಭಾಗಗಳೊಂದಿಗೆ ನಿಕಟ ಸಮನ್ವಯ ಮತ್ತು ಸಹಕಾರದೊಂದಿಗೆ ಕೆಲಸ ಮಾಡಬೇಕು. ಸಂಪಾದಕೀಯ ವಿಭಾಗ ಇದಕ್ಕೆ ಹೊರತಲ್ಲ. ಇಂತಹ ಸಹಕಾರದಿಂದ ಅನೇಕ ಕೆಲಸಗಳು ಸರಿಯಾಗಿ ಆಗುತ್ತವೆ. ಪ್ರತಿ ವಿಭಾಗದಲ್ಲಿ ಏನಾಗುತ್ತದೆ ಎಂಬ ಬಗ್ಗೆ ಮಾಹಿತಿ ಸಂಸ್ಥೆಯ ಪ್ರತಿಯೊಬ್ಬರಿಗೂ ತಿಳಿಯುತ್ತದೆ ಹಾಗೂ ಆದರಿಂದ ವಿಷಯದ ಬಗ್ಗೆ ಏನೂ ತಿಳಿಯದೆ ನಿರ್ಧಾರ ಕೈಗೊಳ್ಳುವುದಕ್ಕಿಂತ ತಿಳಿವಳಿಕೆಯ ಆಧಾರದ ಮೇಲೆ ನಿರ್ಧಾರ ಕೈಗೊಳ್ಳುವುದು ಸಾಧ್ಯವಾಗುತ್ತದೆ. ನೇರ ಸಂಪರ್ಕ ಇರುವುದರಿಂದ ತಪ್ಪು ತಿಳುವಳಿಕೆಗಳು ಕಡಿಮೆಯಾಗುತ್ತವೆ (ಕನಿಷ್ಠ ವಕ್ಷ ವೃತ್ತಿಗೆ ಸಂಬಂಧಿಸಿದಂತೆ). ಒಂದೇ ಕೆಲಸವನ್ನು ಎರಡು ಬಾರಿ ಮಾಡುವಂತಹ ಹಾಗೂ ಅನೇಕ ಸಲ ಮುಜುಗರವನ್ನುಂಟು ಮಾಡುವಂತಹ ವ್ಯರ್ಥ ಪ್ರಯತ್ನ ನಡೆಯುವ ಸಂಭವ ಕಡಿಮೆ. ಪ್ರತ್ಯೇಕವಾಗಿ ಕೆಲಸ ಮಾಡುವುದಕ್ಕಿಂತಲೂ ಒಂದು ತಂಡವಾಗಿ ಕೆಲಸ ಮಾಡುವುದರಿಂದ ಬಹಳ ಅನುಕೂಲವಿದೆ ಎಂಬುದು ನಮಗೆಲ್ಲರಿಗೂ ತಿಳಿದೇ ಇದೆ. ಇದಲ್ಲದೆ, ಬೇರೆ ವಿಭಾಗಗಳೊಂದಿಗೆ ಕೆಲಸ ಮಾಡುವುದರಿಂದ ಅಲ್ಲಿಯವರ ಕೆಲಸವನ್ನು ಮತ್ತು ಅದರ ಪ್ರಾಮುಖ್ಯತೆಯನ್ನು ಗೌರವಿಸುವುದನ್ನು ನೀವು ಕಲಿಯುತ್ತೀರಿ. ಇದು ಸಂಪಾದಕರಿಗಂತೂ ಬಹಳ ಮುಖ್ಯ. ಏಕೆಂದರೆ ಸಾಂಪ್ರದಾಯಿಕವಾಗಿ ಸಂಪಾದಕೀಯ ಕೆಲಸಕ್ಕೆ ಬಹಳ ದೊಡ್ಡ ಮೆರುಗು ನೀಡಲಾಗಿದ್ದು, ಪ್ರಕಾಶನ ವ್ಯವಹಾರದಲ್ಲಿ ಅದೊಂದೇ 'ಸೃಜನಾತ್ಮಕ' ಕೆಲಸ ಎಂಬ ಹಿರಿಮೆ ಅದಕ್ಕುಂಟು ಹಾಗೂ ಉಳಿದೆಲ್ಲ ಕೆಲಸಗಳನ್ನು ಕೇವಲ 'ಯಾಂತ್ರಿಕ ಸೇವೆಗಳು' ಎಂದು ಹಿಂದಕ್ಕೆ ಸರಿಸಲಾಗಿದೆ. ಹೊಸ ಸಂಪಾದಕರೂ ಸಹ ಹಿಂದೆಮುಂದೆ ವಿಚಾರಿಸದೆ ಈ ನಿಲುವನ್ನು ತಳೆಯುವ ಪ್ರವೃತ್ತಿ ಹೊಂದುತ್ತಾರೆ.

ಆದರೆ ಪ್ರಕಾಶನದ ಎಲ್ಲ ಅಂಶಗಳು ಸೃಜನಾತ್ಮಕವೂ ಕ್ರಿಯಾಶೀಲವೂ ಆಗಿವೆ ಎಂಬುದು ಇಂದು ಹೆಚ್ಚು ಸ್ಪಷ್ಟವಾಗುತ್ತಿದೆ ಹಾಗೂ ಇದನ್ನು ಅರಿತಾಗಲೇ ಅವುಗಳನ್ನು ಗೌರವಿಸಲು ಸಾಧ್ಯವಾಗುತ್ತದೆ. ಇವುಗಳೆಲ್ಲದರ ಜೊತೆಗೆ, ಪ್ರಕಾಶನ ಕಾರ್ಯದ ಇತರ ಕ್ಷೇತ್ರಗಳಲ್ಲಿ ಕೈಗೊಳ್ಳುವ ನಿರ್ಧಾರಗಳು ಮತ್ತು ಆಗುವ ಬೆಳವಣಿಗೆಗಳು ಸಂಪಾದಕೀಯ ವಿಭಾಗಗಳಲ್ಲಿ ಕೈಗೊಂಡ ಮತ್ತು ಕೈಗೊಳ್ಳುವ ನಿರ್ಧಾರಗಳ ಮೇಲೆ ಪರಿಣಾಮ ಬೀರುತ್ತವೆ. ಒಬ್ಬ ಉತ್ತಮ ಸಂಪಾದಕ ಈ ನಿರ್ಧಾರಗಳು ತನ್ನ ಕೆಲಸದ ಮೇಲೆ ಏನು ಪರಿಣಾಮ ಉಂಟುಮಾಡುತ್ತವೆ ಎಂದು ತಿಳಿಯಲು ಅವುಗಳ ಬಗ್ಗೆ ಅರಿತಿರಬೇಕಾದ ಅಗತ್ಯವಿದೆ.

ಹಸ್ತಪ್ರತಿಗಳನ್ನು ಪಡೆದುಕೊಳ್ಳುವುದು, ಆಯ್ಕೆ ಮಾಡುವುದು, ಪರಿಷ್ಕರಿಸುವುದು ಮತ್ತು ಪ್ರಕಟಿಸುವುದು ಹಾಗೂ ಕೆಲವು ಪ್ರಕಾಶನ ಸಂಸ್ಥೆಗಳಲ್ಲಿ ಮುಂದೆ ಪ್ರಕಟಿಸಲಾಗುವ ಪುಸ್ತಕಗಳ ಬಗ್ಗೆ ಎಲ್ಲವೂ ಅಲ್ಲವಾದರೂ ಕೆಲವು ಪ್ರಚಾರ ಸಾಮಗ್ರಿಗಳನ್ನು ಸಿದ್ಧಪಡಿಸುವುದು ಸಂಪಾದಕರ ಕೆಲಸ. ಆದರೆ ಅದು ಅಲ್ಲಿಗೇ ಕೊನೆಗೊಳ್ಳುವುದಿಲ್ಲ. ಮುದ್ರಣದ ನಿಜವಾದ ಕೆಲಸವನ್ನು (ವಿನ್ಯಾಸ, ಟೈಪ್‌ಸೆಟ್ಟಿಂಗ್, ಕರಡಚ್ಚು ತಿದ್ದುವುದು, ಕಾಗದ ಕೊಳ್ಳುವುದು, ಮುದ್ರಣ - ತಯಾರಿಕೆ ಎಂದು ಏನನ್ನು ಕರೆಯಲಾಗುತ್ತದೋ ಅದು) ಮುದ್ರಣ ವಿಭಾಗ ಮಾಡುತ್ತದೆ; ಮಾರಾಟ, ಉತ್ತೇಜನ ಮತ್ತು ಪ್ರಚಾರದ ಕೆಲಸವನ್ನು ಮಾರಾಟ, ಮಾರುಕಟ್ಟೆ ಮತ್ತು ಪ್ರಚಾರ ವಿಭಾಗಗಳು ಮಾಡುತ್ತವೆ. ಕೆಲವು ಸಲ ಈ ಕೆಲಸಗಳನ್ನು ಒಂದೇ ವಿಭಾಗ ಮಾಡಬೇಕಾಗುತ್ತದೆ. ಈ ಎಲ್ಲ ಹಂತಗಳಲ್ಲಿ ಹಸ್ತಪ್ರತಿಗೆ ಏನಾಗುತ್ತದೆ ಎಂಬುದನ್ನು ಸಂಪಾದಕ ತಿಳಿದಿರಬೇಕಾದ ಅಗತ್ಯವಿದೆ.

ಒಂದು ಮಧ್ಯಮ ಪ್ರಮಾಣದ ಪ್ರಕಾಶನ ಸಂಸ್ಥೆಗೆ ಸಂಬಂಧಿಸಿದ ಸನ್ನಿವೇಶದ ಬಗ್ಗೆ ನಾನು ಮಾತನಾಡುತ್ತಿದ್ದೇನೆ ಎಂದು ಇಲ್ಲಿ ಸ್ಪಷ್ಟಪಡಿಸಬಯಸುತ್ತೇನೆ. ಸಣ್ಣ ಪ್ರಕಾಶನ ಸಂಸ್ಥೆಗಳಲ್ಲಿ ಈ ಎಲ್ಲ ಪ್ರತ್ಯೇಕ ಕಾರ್ಯಗಳನ್ನು ಒಬ್ಬರೋ ಇಬ್ಬರೋ ಮಾಡಬಹುದು, ಅನೇಕ ಸಲ ಮಾಡುತ್ತಾರೆ ಸಹ. ಆದರೆ ಎಲ್ಲಿ ಪ್ರತ್ಯೇಕ ವಿಭಾಗಗಳು ಇವೆಯೋ, ಅಲ್ಲಿ ಸಂಪಾದಕೀಯ ನಿರ್ಧಾರಗಳನ್ನು ಸಾಮಾನ್ಯವಾಗಿ ಬೇರೆ ಯಾರೊಂದಿಗೂ ಸಮಾಲೋಚಿಸದೆ ಕೈಗೊಳ್ಳಲಾಗುವುದಿಲ್ಲ, ಕೈಗೊಳ್ಳಬಾರದು ಕೂಡ. ಪ್ರಕಾಶನ ಸಂಸ್ಥೆಯ ಬೇರೆಬೇರೆ ವಿಭಾಗಗಳೊಂದಿಗೆ ಸಮಾಲೋಚಿಸಿ ನಿರ್ಧಾರಗಳನ್ನು ಕೈಗೊಳ್ಳುವುದು ಆದರ್ಶಪ್ರಾಯ. ಒಂದು ಪುಸ್ತಕದ ಮುದ್ರಣಕ್ಕೆ ಎಷ್ಟು ವೆಚ್ಚವಾಗಬಹುದು ಎಂದು ಮುದ್ರಣ ವಿಭಾಗದವರು ಹೇಳಿದರೆ, ಸಂಪಾದಕರ ಮನಸ್ಸಿನಲ್ಲಿರುವ ಪುಸ್ತಕ ಆವರು ಸಲಹೆ ಮಾಡಿದ ಬೆಲೆಗೆ ಮಾರಾಟವಾಗುತ್ತದೋ ಹೇಗೆ ಎಂಬುದನ್ನು ಮಾರಾಟ ವಿಭಾಗದವರು ಹೇಳುತ್ತಾರೆ. ಮಾರುಕಟ್ಟೆಯ ಸ್ಥಿತಿ ಹೇಗಿದೆ ಎಂಬ ಬಗ್ಗೆ - ಅದರ ಏರುತಗ್ಗುಗಳು, ಅಲೆಗಳು, ಅನುದಾನಗಳಿಗೆ ಸಂಬಂಧಿಸಿದ ಪರಿಸ್ಥಿತಿ, ಒಂದು ನಿರ್ದಿಷ್ಟ ಪುಸ್ತಕವನ್ನು ಅಥವಾ ಪುಸ್ತಕಮಾಲೆಯನ್ನು ಗಂಟು ಹಾಕಬಹುದಾದ ಘಟನೆಗಳ ಸಾಧ್ಯತೆ ಮುಂತಾದವು - ಅವರಿಗೆ ಹೆಚ್ಚಿನ ತಿಳುವಳಿಕೆ ಇರುತ್ತದೆ. ಅಥವಾ ಲೆಕ್ಕಗಳ ವಿಭಾಗ ಮತ್ತು

ಆಡಳಿತ ವಿಭಾಗಗಳನ್ನೇ ತೆಗೆದುಕೊಳ್ಳಿ. ಮಾರಾಟದ ಗುರಿಗಳನ್ನು ಈಡೇರಿಸದೆ ಇರುವಂತಹ ಹಾಗೂ ತಕ್ಷಣದ ಭವಿಷ್ಯ ನಿರಾಶಾದಾಯಕವಾಗಿರುವಂತಹ ಪರಿಸ್ಥಿತಿ ಪ್ರಕಾಶನ ಸಂಸ್ಥೆಯೊಂದರಲ್ಲಿ ಉದ್ಭವಿಸಬಹುದು. ಮಾರಾಟ ಮತ್ತು ಸಂಪಾದಕೀಯ ವಿಭಾಗಗಳ ನಡುವೆ ಯಾವುದೇ ಸಂಪರ್ಕವಿಲ್ಲದಿದ್ದರೆ, ತಾತ್ಕಾಲಿಕವಾಗಿಯಾದರೂ ಕೆಲಸವನ್ನು ತಡೆಹಿಡಿಯಬೇಕಾದ ಅಗತ್ಯವನ್ನು ಮನಗಾಣದೆ ಸಂಪಾದಕರು ತಮ್ಮ ಪಾಡಿಗೆ ಖುಷಿಯಿಂದ ಹಸ್ತಪ್ರತಿಗಳನ್ನು ಪಡೆಯುತ್ತಾ ಹೋಗಬಹುದು. ಉದಾಹರಣೆಗೆ, ಉತ್ತರ ಭಾರತದಲ್ಲಿ 1990 ರಲ್ಲಿ ನಡೆದ ಮಂಡಲ್ ವಿರುದ್ಧದ ಚಳವಳಿಯ ಸಮಯದಲ್ಲಿ ಬಹಳ ಕಾಲದವರೆಗೆ ವಿಶ್ವವಿದ್ಯಾಲಯಗಳನ್ನು ಮುಚ್ಚಲಾಗಿತ್ತು ಹಾಗೂ ಪುಸ್ತಕ ಕೊಳ್ಳುವುದು ಬಹಳ ಕಡಿಮೆಯಾಗಿತ್ತು. ಇದರ ಪರಿಣಾಮವಾಗಿ ಅನೇಕ ಪ್ರಕಾಶನ ಸಂಸ್ಥೆಗಳ ಲೆಕ್ಕ ಮತ್ತು ಮಾರಾಟ ವಿಭಾಗಗಳು ಪ್ರಕಾಶನ ಕಾರ್ಯಕ್ರಮಗಳನ್ನು ಮೊಟಕುಗೊಳಿಸುವಂತೆ ಸಂಪಾದಕರಿಗೆ ಸೂಚಿಸಿದವು. ಆಗ ಆದ ವಿಳಂಬದಿಂದ ಭವಿಷ್ಯದ ಕಾರ್ಯಕ್ರಮಗಳಿಗೂ ತೊಂದರೆ ಆಯಿತು. ಇದರಿಂದ ಸಂಪಾದಕರು ಹೊಸ ಪುಸ್ತಕಗಳ ಪ್ರಕಟಣೆಗೆ ಕೈಹಾಕುವಾಗ ಲೇಖಕರಿಗೆ ಅವರ ಪುಸ್ತಕಗಳು ಇಂತಹ ಸಮಯಕ್ಕೆ ಸಿದ್ಧವಾಗುತ್ತವೆ ಎಂದು ಭರವಸೆ ನೀಡುವ ಬಗ್ಗೆ ಹೆಚ್ಚು ಎಚ್ಚರದಿಂದಿರಬೇಕು ಎಂಬುದು ವೇದ್ಯವಾಗುತ್ತದೆ.

ಅನೇಕ ರೀತಿಯ ಅನಿರೀಕ್ಷಿತ ಮತ್ತು ಅಸಾಮಾನ್ಯ ಘಟನೆಗಳು ಸಂಪಾದಕೀಯ ಕೆಲಸದ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ತನ್ನ ಕಚೇರಿಯ ಸ್ಥಳಾವಕಾಶವನ್ನು ವಿಸ್ತರಿಸಲು ಹಾಗೂ ಹೊಸ ಕಟ್ಟಡವೊಂದನ್ನು ಕೊಳ್ಳಲು ನಿರ್ಧರಿಸಿದ ಪ್ರಕಾಶನ ಸಂಸ್ಥೆಯ ಪ್ರಕರಣವೊಂದು ನನ್ನ ನೆನಪಿಗೆ ಬರುತ್ತದೆ. ಇದಕ್ಕೆ ಹೆಚ್ಚಿನ ಹಣ ಬೇಕಾಗಿದ್ದರಿಂದ ಪ್ರಕಾಶನ ಕಾರ್ಯವನ್ನು ಮೊಟಕುಗೊಳಿಸ ಬೇಕಾಯಿತು. ಆದರೆ ಅದೇ ಕಾಲಕ್ಕೆ ಹೆಚ್ಚು ಪುಸ್ತಕಗಳನ್ನು ಪ್ರಕಟಿಸುವುದರಿಂದ ಮಾತ್ರ ಹೆಚ್ಚಿನ ಹಣ ಬರುವುದು ಸಾಧ್ಯವಿತ್ತು. 'ಮೊದಲೇ ಕೊಂಡ' ಪುಸ್ತಕಗಳನ್ನು ಮುದ್ರಿಸುವ ಮತ್ತು ಗ್ರಂಥಸ್ವಾಮ್ಯಕ್ಕೊಳಪಡದ ಪುಸ್ತಕಗಳ ಮರುಮುದ್ರಣ ಕೈಗೊಳ್ಳುವ ಮೂಲಕ ಈ ವಿಪರ್ಯಾಸದ ಪರಿಸ್ಥಿತಿಯನ್ನು ನಿಭಾಯಿಸಲಾಯಿತು. ('ಮೊದಲೇ ಕೊಂಡ' ಪುಸ್ತಕಗಳೆಂದರೆ, ಉದಾಹರಣೆಗೆ, ದಪ್ಪ ರಟ್ಟಿನ ಹೊದಿಕೆಯಲ್ಲಿ ಮೊದಲೇ ಪ್ರಕಟಿಸಲಾಗಿರುವ ಪುಸ್ತಕದ ಕಾಗದದ ಹೊದಿಕೆಯ ಪ್ರತಿಗಳನ್ನು ಮುದ್ರಿಸುವ ಹಕ್ಕುಗಳನ್ನು ಕೊಳ್ಳುವುದು ಅಥವಾ ವಿದೇಶದಲ್ಲಿ ಪ್ರಕಟಿಸಲಾಗಿರುವ ಪುಸ್ತಕಗಳನ್ನು ಸ್ಥಳೀಯವಾಗಿ ಮರುಮುದ್ರಿಸುವ ಹಕ್ಕುಗಳನ್ನು ಕೊಳ್ಳುವುದು ಎಂದರ್ಥ) ಇಂತಹ ವ್ಯವಹಾರ ಕೆಲವೊಮ್ಮೆ ಮಿತವ್ಯಯಕಾರಿಯಾಗಿರುತ್ತದೆ. ಏಕೆಂದರೆ ಹಸ್ತಪ್ರತಿ ಪಡೆದುಕೊಳ್ಳುವುದು ಮತ್ತು ಸಂಪಾದಕೀಯ ವೆಚ್ಚಗಳು ಇದರಲ್ಲಿ ಬರುವುದಿಲ್ಲ. ಆದ್ದರಿಂದ ಅನೇಕ ತಿಂಗಳುಗಳ ಕೆಲಸ ಹಾಗೂ ಹಣವನ್ನು ಇಂತಹ ವ್ಯವಹಾರಗಳು ಉಳಿಸುತ್ತವೆ.

ಈಗ ವಿಭಾಗಗಳನ್ನು ವಿವರವಾಗಿ ಹಾಗೂ ಅವುಗಳ ನಡುವೆ ಸಮನ್ವಯದಿಂದ ಆಗುವ ಅನುಕೂಲ ಅಥವಾ ಅದರ ಅಗತ್ಯವನ್ನು ಗಮನಿಸೋಣ. ಪ್ರಕಾಶನ ವೃತ್ತಿಗೆ

ತರಬೇತಿಯಾದ ಜನರ ಅಗತ್ಯವಿದೆ, ಒಂದು ಭಾಷೆಯಲ್ಲಿ ಉತ್ತಮ ಸಾಮರ್ಥ್ಯವಿದ್ದರೆ ಮಾತ್ರ ಸಾಲದು ಎಂಬುದನ್ನು ಈಗ ಹೆಚ್ಚಾಗಿ ಮನಗಾಣಲಾಗುತ್ತಿದ್ದರೂ, ಬಹಳ ಸಲ ತರಬೇತಿ ಇಲ್ಲದವರೇ ಪ್ರಕಾಶನ ವೃತ್ತಿಗೆ ಸೇರುತ್ತಿದ್ದಾರೆ ಅಥವಾ, ಅವರು ತರಬೇತಿ ಹೊಂದಿದ್ದರೂ ಸಾಮಾನ್ಯವಾಗಿ ಯಾವುದಾದರೂ ಒಂದು ನಿರ್ದಿಷ್ಟ ಕೆಲಸದಲ್ಲಿ ಮಾತ್ರ ತರಬೇತಿ ಪಡೆದಿರುತ್ತಾರೆ. ಭಾರತದಲ್ಲಿನ್ನೂ ಸಂಪಾದಕೀಯ ಕೆಲಸ ಅಥವಾ ಮುದ್ರಣ ಅಥವಾ ಪುಸ್ತಕಗಳ ಮಾರಾಟಕ್ಕೆ ಉತ್ತೇಜನ ಅಥವಾ ಮಾರುಕಟ್ಟೆ ವ್ಯವಹಾರ ಅಥವಾ ಇವೆಲ್ಲವನ್ನೂ ಕಲಿಸುವ ಒಂದು ಶಿಕ್ಷಣ ಸಂಸ್ಥೆಯಾಗಲೀ, ಶಾಲೆಯಾಗಲೀ ಇಲ್ಲ. ಇದರರ್ಥ ಯಾವ ಲೇಖಕರು ಯಾವ ಸಮಯಕ್ಕೆ ಏನು ಬರೆಯುತ್ತಿದ್ದಾರೆ ಎಂಬುದು ಸಂಪಾದಕರಿಗೆ ತಿಳಿದಿರಬಹುದಾದರೂ, ಕಾಗದ ಅಥವಾ ಇತರ ಮುದ್ರಣ ಸಾಮಗ್ರಿಗಳ ಬೆಲೆಯಲ್ಲಿ ಆಗಿರುವ ಹೆಚ್ಚಳದ ಬಗ್ಗೆ ಅವರಿಗೆ ಅನೇಕ ಸಲ ಏನೂ ತಿಳಿದಿರುವುದಿಲ್ಲ ಅಥವಾ ಅತ್ಯಲ್ಪವಾಗಿ ತಿಳಿದಿರುತ್ತದೆ; ಉದಾಹರಣೆಗೆ, ನನಗೆ ಪರಿಚಯವಿರುವ ಸಂಪಾದಕರ ಪೈಕಿ ಬಹಳಷ್ಟು ಸಂಪಾದಕರಿಗೆ ಸಣ್ಣ ಯಂತ್ರ ಮತ್ತು ದೊಡ್ಡ ಯಂತ್ರದಲ್ಲಿ ಮುದ್ರಿಸುವುದಕ್ಕೆ ತಗಲುವ ವೆಚ್ಚಗಳಲ್ಲಿನ ವ್ಯತ್ಯಾಸ ತಿಳಿದಿಲ್ಲ; ಅಥವಾ ಕಪ್ಪು, ಬಿಳುಪು, ಬಣ್ಣದ ಛಾಯಾಚಿತ್ರಗಳನ್ನು ಪಠ್ಯದ ಒಂದು ಭಾಗವಾಗಿ ಅಥವಾ ಪ್ರತ್ಯೇಕವಾಗಿ ಮುದ್ರಿಸುವ ವೆಚ್ಚದಂತಹ ಸರಳ ವಿಷಯಗಳೂ ಅಥವಾ ಬಣ್ಣದಿಂದ ಕಪ್ಪು, ಬಿಳುಪಿಗೆ ಬದಲಾಯಿಸಿದಾಗ ಗುಣಮಟ್ಟ ಎಷ್ಟು ನಷ್ಟವಾಗುತ್ತದೆ ಎಂಬುದೂ ಅಥವಾ ಗಾತ್ರವನ್ನು ತಗ್ಗಿಸಿದಾಗ ಮುದ್ರಣ ಸುಧಾರಿಸುತ್ತದೆ ಮತ್ತು ಹೆಚ್ಚು ಸ್ಫುಟವಾಗುತ್ತದೆ ಅಥವಾ ಕೆಲವು ಅಚ್ಚಿನ ಮೊಳೆಗಳು ಇತರ ಮೊಳೆಗಳಿಗಿಂತ ಕಡಿಮೆ ಸ್ಥಳಾವಕಾಶವನ್ನು ಆಕ್ರಮಿಸುತ್ತವೆ..... ಮುಂತಾದವು ಅವರಿಗೆ ತಿಳಿದಿರಲಿಕ್ಕಿಲ್ಲ. ಇಂತಹ ಸಣ್ಣ ವಿಷಯಗಳನ್ನು ತಿಳಿದಿರುವುದರಿಂದ ಹಣ ಮತ್ತು ಸಮಯವನ್ನು ಉಳಿಸುವ ನಿರ್ಧಾರಗಳನ್ನು ಕೈಗೊಳ್ಳುವುದು ಸಾಧ್ಯವಾಗುತ್ತದೆ ಹಾಗೂ ಮೊಂಡು ಸ್ವಭಾವದ ಲೇಖಕರನ್ನು ನಿಭಾಯಿಸಲು ಅಂತಹ ತಿಳುವಳಿಕೆ ನಿಮಗೆ ನೆರವಾಗುತ್ತದೆ. ನಮ್ಮ ಪ್ರಕಾಶನ ಸಂಸ್ಥೆಯ ಒಂದು ಉದಾಹರಣೆಯನ್ನು ಇಲ್ಲಿ ಕೊಡುತ್ತೇನೆ. ತೆಲಂಗಾಣದಲ್ಲಿ ಸಶಸ್ತ್ರ ಹೋರಾಟವೊಂದರಲ್ಲಿ ಪಾಲ್ಗೊಂಡಿದ್ದ ಮಹಿಳೆಯರೊಂದಿಗೆ ನಡೆಸಿದ ಸಂದರ್ಶನಗಳ ಬಗ್ಗೆ ಕೆಲವು ವರ್ಷಗಳ ಹಿಂದೆ ನಾವು ಒಂದು ಪುಸ್ತಕವನ್ನು ಪ್ರಕಟಿಸಿದೆವು. ನಾವು ಮಹಿಳೆಯರ ಛಾಯಾಚಿತ್ರಗಳನ್ನು ಪ್ರಕಟಿಸಬೇಕೆಂದು ಈ ಪುಸ್ತಕವನ್ನು ಬರೆದ ಹಲವು ಲೇಖಕರು ಉತ್ಸುಕರಾಗಿದ್ದರು. ಛಾಯಾಚಿತ್ರಗಳ ಒಟ್ಟು ಸಂಖ್ಯೆ 40ಆಗಿತ್ತು ಹಾಗೂ ಅವುಗಳ ಗುಣಮಟ್ಟವೂ ಬಹಳ ಉತ್ತಮವಾಗಿರಲಿಲ್ಲ. ಪುಟಕ್ಕೆ ಒಂದು ಅಥವಾ ಎರಡು ಛಾಯಾಚಿತ್ರಗಳು ಬರುವ ರೀತಿಯಲ್ಲಿ ಅವುಗಳನ್ನು ಪ್ರಕಟಿಸಬೇಕೆಂದು ಲೇಖಕರು ಬಯಸಿದ್ದರು. ಕೇವಲ ಛಾಯಾಚಿತ್ರಗಳಿಗಾಗಿ, ಅದೂ ಬಹಳ ಉತ್ತಮವಾಗಿಲ್ಲದ ಛಾಯಾಚಿತ್ರಗಳಿಗಾಗಿ, ಪುಸ್ತಕಕ್ಕೆ ಇನ್ನೂ 20–40 ಪುಟಗಳನ್ನು ಸೇರಿಸುವ ಸಲಹೆ ಪ್ರಿಯವಾಗಿರಲಿಲ್ಲ. ಇದರಿಂದ ಪುಸ್ತಕ ದುಬಾರಿಯಾಗುತ್ತಿತ್ತು. ನಲವತ್ತು ಸಣ್ಣ ಸಂಖ್ಯೆಯೇನಲ್ಲ: ಇದರಲ್ಲಿ ಒಂದೇ

ಸಮಾಧಾನದ ಸಂಗತಿಯೆಂದರ ಆಫ್‌ಸೆಟ್ ಮುದ್ರಣದ ಈ ದಿನಗಳಲ್ಲಿ ಆರ್ಟ್ ಕಾಗದವನ್ನು ಬಳಸಬೇಕಾದ ಅಗತ್ಯವಿಲ್ಲದೆ ಪುಸ್ತಕದಲ್ಲಿ ಛಾಯಾಚಿತ್ರಗಳನ್ನು ಮುದ್ರಿಸುವುದು ನಮಗೆ ಸಾಧ್ಯವಾಯಿತು. ಸಾಕಷ್ಟು ಚರ್ಚೆಯ ನಂತರ ಕೊನೆಗೆ ನಾವು ಒಂದು ರಾಜಿಗೆ ಬಂದೆವು: ಎಲ್ಲ ಛಾಯಾಚಿತ್ರಗಳಿಗೆ ಅಥವಾ ಬಳಸಲು ಸಾಧ್ಯವಾದ ಎಲ್ಲ ಚಿತ್ರಗಳಿಗೆ ಒಂದೇ ರೀತಿಯ ಆಕಾರವನ್ನು ಕೊಡುವ ರೀತಿಯಲ್ಲಿ ಛಾಯಾಚಿತ್ರಗಳನ್ನು ಸಿದ್ಧಪಡಿಸುವುದು, ನಂತರ ಅವೆಲ್ಲವುಗಳನ್ನು ಒಂದೇ ಗಾತ್ರಕ್ಕೆ ತಗ್ಗಿಸಿ, ಪಠ್ಯಕ್ಕೆ ಬಳಸಿದ ಕಾಗದದ ಬಣ್ಣಕ್ಕಿಂತಲೂ ಬೇರೆಯದಾದ ಬಣ್ಣದ ಕಾಗದದಲ್ಲಿ ಪುಸ್ತಕದ ಕೊನೆಯಲ್ಲಿ ಮುದ್ರಿಸುವುದು ಎಂದು ಒಪ್ಪಲಾಯಿತು. ಇದನ್ನು ನಾವು ಮಾಡಿದೆವು ಹಾಗೂ ಒಟ್ಟಾರೆ ಪರಿಣಾಮ ಅಂದವಾಗಿತ್ತು: ಎಲ್ಲ ಹೆಂಗಸರಿಗೂ ಸಮಾನ ಸ್ಥಾನ ದೊರೆಯಿತು ಹಾಗೂ ಲೇಖಕರು ಈ ಬಗ್ಗೆ ಸಂತೋಷಪಟ್ಟರು. ನಮ್ಮಲ್ಲಿ ಮುದ್ರಣ ವಿಭಾಗ ಇಲ್ಲದೆ ಹೋದರೂ ಬೇರೆಬೇರೆ ಮುದ್ರಣ ವಿಭಾಗಗಳಲ್ಲಿ ಕೆಲಸ ಮಾಡಿರುವುದರಿಂದ, ಮುದ್ರಣದ ಅರಿವು ನಮಗಿರುವುದರಿಂದ ಈ ನಿರ್ಧಾರವನ್ನು ಕೈಗೊಳ್ಳುವುದು ನಮಗೆ ಸಾಧ್ಯವಾಯಿತು. ಇದರ ಸಾಧ್ಯತೆಯನ್ನು ಕುರಿತು ಲೇಖಕರೊಂದಿಗೆ ಚರ್ಚಿಸುವಾಗ ನಾವು ತಿಳಿದವರು ಮತ್ತು ಆತ್ಮವಿಶ್ವಾಸ ಉಳ್ಳವರು ಎಂಬುದು ಅವರಿಗೆ ಅರಿವಾಗುವುದಕ್ಕೆ ಬಹಳ ಸಹಾಯವಾಯಿತು. ಹಾಗೂ ಆದರಿಂದ ಲೇಖಕರ ಆತ್ಮವಿಶ್ವಾಸವೂ ಹೆಚ್ಚಿತು.

ಅನೇಕ ಸಲ ಸಂಪಾದಕೀಯ ಮತ್ತು ಮುದ್ರಣ ವಿಭಾಗಗಳ ಕೆಲಸಗಳನ್ನು ಪ್ರತ್ಯೇಕಿಸುವ ಗೆರೆಗಳು ಸಾಕಷ್ಟು ಮಸಕಾಗಿಬಿಡುತ್ತವೆ – ಮುದ್ರಣ ವಿಭಾಗಗಳು ಪಠ್ಯವನ್ನು ತಿದ್ದುವ ಮತ್ತು ಸೂಚನೆಗಳನ್ನು ಗುರುತು ಹಾಕುವ ಕೆಲಸವನ್ನು ಮಾಡುವಂತಹ ಪ್ರಕಾಶನ ಸಂಸ್ಥೆಗಳಿವೆ; ಈ ಕೆಲಸವನ್ನು ಸಂಪಾದಕೀಯ ವಿಭಾಗ ಮಾಡುವ ಸಂಸ್ಥೆಗಳೂ ಇವೆ ಹಾಗೂ ಇನ್ನೂ ಕೆಲವು ಸಂಸ್ಥೆಗಳಲ್ಲಿ ಮರುಮುದ್ರಣ ಕಾರ್ಯವನ್ನು ಮುದ್ರಣ ವಿಭಾಗ ನೋಡಿಕೊಂಡರೆ ಹೊಸ ಪುಸ್ತಕಗಳ ಕಾರ್ಯವನ್ನು ಸಂಪಾದಕೀಯ ವಿಭಾಗವೇ ಮಾಡುತ್ತದೆ. ಈ ವಿಭಾಗಗಳ ನಡುವೆ ನಿಯಮಿತವಾಗಿ ಅಂತರಕ್ರಿಯೆ ನಡೆಯುವುದರಿಂದ ಕೆಲಸ ಸರಾಗವಾಗಿ ಆಗುತ್ತದೆ ಹಾಗೂ ಕೆಲಸದ ವೇಳಾಪಟ್ಟಿಯನ್ನು ಸರಿಯಾಗಿ ನಿರ್ಧರಿಸುವುದೂ ಸಾಧ್ಯವಾಗುತ್ತದೆ. ಉದಾಹರಣೆಗೆ, ಮರುಮುದ್ರಣ ಕಾರ್ಯವನ್ನು ಮುದ್ರಣ ವಿಭಾಗ ಕೈಗೊಳ್ಳುವ ಪ್ರಕಾಶನ ಸಂಸ್ಥೆ ನಿಮ್ಮದಾಗಿದ್ದರೆ, ಇವು ಮುದ್ರಣಕ್ಕೆ ಯಾವಾಗ ಹೋಗುತ್ತವೆ ಎಂದು ತಿಳಿದುಕೊಳ್ಳುವುದು ಉಚಿತ. ಸಂಪಾದಕರಾಗಿ ನೀವು ಒಂದು ಹೊಸ ಮುನ್ನುಡಿಯನ್ನೋ, ಪ್ರಸ್ತಾವನೆಯನ್ನೋ ಬರೆಯಲು ಲೇಖಕರನ್ನು ಅಥವಾ ಬೇರೆ ಯಾರನ್ನಾದರೂ ಕೋರಬಹುದು ಅಥವಾ ವಿಮರ್ಶೆಗಳ ಉದ್ಧೃತ ಭಾಗಗಳನ್ನು ಹೊದಿಕೆಯಲ್ಲಿ ಮುದ್ರಿಸಬಹುದು. ನಿಮ್ಮ ದುರದೃಷ್ಟಕ್ಕೆ ತನ್ನ ಪುಸ್ತಕವನ್ನು ಮರುಮುದ್ರಣ ಮಾಡಬೇಕೆಂದು ಲೇಖಕ/ಲೇಖಕಿ ನಿಮ್ಮನ್ನು ಪೀಡಿಸುತ್ತಿದ್ದರೆ ಮರುಮುದ್ರಣ ಯಾವಾಗ ಆಗಬಹುದು ಎಂದು ತಿಳಿದುಕೊಳ್ಳಲು ಮುದ್ರಣ ವಿಭಾಗದೊಂದಿಗೆ ನೀವು ಸಂಪರ್ಕ ಇಟ್ಟುಕೊಳ್ಳಬೇಕಾದ ಅಗತ್ಯವಿದೆ. ಲೇಖಕ

ಅಥವಾ ಲೇಖಕಿಯೊಬ್ಬರು ತಮ್ಮ ಪುಸ್ತಕ ಮರುಮುದ್ರಣವಾಗಬೇಕೆಂದು ಒತ್ತಾಯಿಸುವ, ಮಾರುಕಟ್ಟೆಯಲ್ಲಿ ಒಂದು ಪ್ರತಿಯೂ ಲಭ್ಯವಿಲ್ಲ ಹಾಗೂ ಮುಂದಿನ ವರ್ಷ ಅದು ಯಾವುದೋ ಪಠ್ಯತರಗತಿಗೆ ಅಗತ್ಯ ಇತ್ಯಾದಿ ಕಾರಣಗಳನ್ನು ಹೇಳುವ ಪರಿಸ್ಥಿತಿಯೂ ಇರಬಹುದು. ಬೇರೆ ವಿಭಾಗಗಳ ಕೆಲಸದ ಬಗ್ಗೆ ನಿಮಗೆ ಪರಿಚಯ ಇಲ್ಲದಿದ್ದರೆ ನೀವು ಇದರಿಂದ ಗಲಿಬಿಲಿಗೊಳ್ಳಬಹುದು: ಪುಸ್ತಕ ದೆಹಲಿಯಲ್ಲಿ ದಾಸ್ತಾನಿಲ್ಲದೆ ಹೋಗಬಹುದು, ಆದರೆ ಇತರ ನಗರಗಳಲ್ಲಿ ಅಥವಾ ನಿಮ್ಮ ಕಚೇರಿಯ ಇತರ ಶಾಖೆಗಳಲ್ಲಿ (ಅವುಗಳು ನಿಮ್ಮಲ್ಲಿದ್ದರೆ) ಅದರ ದಾಸ್ತಾನು ಸಾಕಷ್ಟಿರಬಹುದು, ಹಾಗೂ ಮಾರಾಟವಾಗದೆ ಇರುವ ಪ್ರತಿಗಳನ್ನು ಮಾರುಕಟ್ಟೆಗೆ ತಂದರೆ ಮರುಮುದ್ರಣದ ಅವಶ್ಯಕತೆ ಇಲ್ಲದೆ ಹೋಗಬಹುದು. ನಿಮ್ಮ ಮಾರಾಟ ಮತ್ತು ಮಾರುಕಟ್ಟೆ ವಿಭಾಗದವರು ಈ ನಿರ್ದಿಷ್ಟ ಪುಸ್ತಕವನ್ನು ಸಾಮಾನ್ಯಕ್ಕಿಂತಲೂ ಹೆಚ್ಚಿನ ಸಾಲದ ಅವಧಿಗೆ ಅಥವಾ ಮಾರಾಟವಾಗದಿದ್ದರೆ ಹಿಂತಿರುಗಿಸುವ ಸೌಲಭ್ಯದೊಡನೆ ಉತ್ತೇಜಿಸಲು ನಿರ್ಧರಿಸಿದ್ದಾರೆಂದಿಟ್ಟುಕೊಳ್ಳೋಣ; ಆಗ ದೆಹಲಿಯಲ್ಲಿ ಪುಸ್ತಕಗಳು ಇಲ್ಲದಿದ್ದರೂ ಬೇರೆಡೆ ಅವು ದೊರೆಯುಬಹುದಾದ್ದರಿಂದ ಈ ಬಗ್ಗೆ ನಮ್ಮ ಮಾರಾಟ ವಿಭಾಗದವರೊಡನೆ ಮಾತನಾಡಿ ತಿಳಿದುಕೊಳ್ಳಬೇಕು ಎಂದು ಲೇಖಕರಿಗೆ ಹೇಳುವ ಸಲುವಾಗಿ ನೀವು ಈ ವಿಷಯ ತಿಳಿದುಕೊಂಡಿರಬೇಕು.

ನಮ್ಮ ಪುಸ್ತಕ 'ಕ' ಗ್ರಂಥಾಲಯದಲ್ಲಿ ಏಕಿಲ್ಲ, ನೀವು ಪ್ರಕಟಿಸಿದ ಪುಸ್ತಕಗಳು ಹೋಟೆಲ್‌ಗಳ ಪುಸ್ತಕದಂಗಡಿಗಳಿಗೆ ಮತ್ತು ವಿಮಾನ ನಿಲ್ದಾಣಗಳಿಗೆ ಏಕೆ ಹೋಗುವುದಿಲ್ಲ ಎಂಬಂತಹ ಪ್ರಶ್ನೆಗಳನ್ನು ನಮಗೆ ಆಗಾಗ ಕೇಳಲಾಗುತ್ತದೆ. ಗ್ರಂಥಾಲಯಗಳು ಪುಸ್ತಕಗಳನ್ನು ಪಡೆದುಕೊಳ್ಳುವುದು ಬಹಳ ವಿಳಂಬದ ನಂತರ ಎಂಬುದು ಚೆನ್ನಾಗಿ ತಿಳಿದಿರುವ ವಿಷಯ ಹಾಗೂ ನಿಮ್ಮ ಪುಸ್ತಕ ಯಾರಾದರೊಬ್ಬರು ಅದಕ್ಕೆ ಸಮ್ಮತಿ ಸೂಚಿಸುವವರೆಗೆ ತಿಂಗಳುಗಟ್ಟಲೆ ಗ್ರಂಥಾಲಯದಲ್ಲಿ ಬಿದ್ದಿರಬಹುದು ಅಥವಾ ಸಮ್ಮತಿ ದೊರೆತಿದ್ದರೆ ಅಟ್ಟಣೆಗೆಗಳ ಮೇಲೆ ಬರುವುದಕ್ಕೆ ತಿಂಗಳುಗಟ್ಟಳೆ ಆಗಬಹುದು. ಹಣ ಕೊಟ್ಟು ಪುಸ್ತಕಗಳನ್ನು ಕೊಳ್ಳುವ ಹಾಗೂ ಪುಸ್ತಕಗಳ ಬೆಲೆಗಳನ್ನು ಹೆಚ್ಚಾಗಿ ಸೂಚಿಸದೆ ಇರುವ ಹೋಟೆಲ್‌ಗಳ ಸಂಖ್ಯೆ ನಾನು ಕಂಡಂತೆ ಅಲ್ಪವೇ, ಬಹುಶಃ ಒಂದೇ ಒಂದು ಎನ್ನಬಹುದು.

ಕೆಲವು ದಿನಗಳ ಹಿಂದೆ ನಮ್ಮ ಲೇಖಕಿಯರ ಪೈಕಿ ಒಬ್ಬರು ನಮ್ಮನ್ನು ಸಂಪರ್ಕಿಸಿ, ನನ್ನ ಪುಸ್ತಕದ ಅಮೆರಿಕದ ಆವೃತ್ತಿಯ ಮಾರಾಟದಿಂದ ಮುಂದಿನ ವರ್ಷ ಬರಬಹುದಾದ ರಾಯಲ್ಟಿ ಹಣದ ಬಗ್ಗೆ ಲೆಕ್ಕಾಚಾರ ಹಾಕಲು ನಿಮ್ಮೊಂದಿಗೆ ಕುಳಿತು ಮಾತನಾಡಲು ಬರಲೇ, ಆನಂತರ ನನ್ನ ಕೃತಿಗೆ ಬರೆದ ಎಲ್ಲ ಲೇಖಕರಿಗೆ ಮೊದಲ ಪಾವತಿಯ ನಂತರ ಇನ್ನೂ ಎಷ್ಟು ಹಣವನ್ನು ಕೊಡಬಲ್ಲೆ ಎಂದು ಹೇಳುವುದು ಸಾಧ್ಯವಾಗುತ್ತದೆ ಎಂದು ಹೇಳಿದರು. ಈಗ ಒಂದು ವರ್ಷಕ್ಕೂ ಹೆಚ್ಚು ಹಳೆಯದಾಗಿರುವ ಪುಸ್ತಕ ಮುಂದೆ ಎಷ್ಟು ಮಾರಾಟವಾಗಬಹುದು ಎಂಬುದನ್ನು ಮುಂಚಿತವಾಗಿ ಹೇಳುವ ಯಾವ ದಾರಿಯೂ ನಿಜವಾಗಿ ಇಲ್ಲ ಎಂದು ಹೇಳಿದಾಗ ಆಕೆ, ನೀವು ಹುಡುಗಾಟ ಆಡಬೇಡಿ, ಬಿಸಿಬಿಸಿ ಕೇಕ್‌ಗಳಂತೆ ಪುಸ್ತಕ ಅಲ್ಲಿ

ಮಾರಾಟವಾಗುತ್ತದೆ ಹಾಗೂ ಆ ರೀತಿ ಮಾರಾಟ ಮುಂದುವರೆಯುತ್ತದೆ ಎಂದು ನಮಗೆ ಹೇಳಿದರು. ಲೇಖಕರು ಸಂಪಾದಕರ ಬಳಿ ಬಂದು ಇಂತಹ ಪ್ರಶ್ನೆಯನ್ನು ಹಲವು ಸಲ ಕೇಳುತ್ತಾರೆ. ಇದನ್ನು ದುಡುಕುತನಕ್ಕಿಂತಲೂ ಹೆಚ್ಚಾಗಿ ಅಜ್ಞಾನ ಮತ್ತು ಕಳಕಳಿಯಿಂದ ಕೇಳಲಾಗುತ್ತದೆ. ಉದಾಹರಣೆಗೆ, ಒಂದು ಪುಸ್ತಕ, ಪ್ರಕಟಣೆಯ ಮೊದಲ ವರ್ಷ ಚೆನ್ನಾಗಿ ಮಾರಾಟವಾದರೆ, ಮುಂದಿನ ವರ್ಷಗಳಲ್ಲೂ ಅದು ಹಾಗೇ ನಡೆಯುತ್ತದೆ ಎನ್ನುವುದಕ್ಕೆ ಯಾವ ಖಾತ್ರಿಯೂ ಇಲ್ಲ ಎಂಬುದು ಈ ಲೇಖಕಿಗೆ ಹೇಗೆ ತಿಳಿಯುತ್ತದೆ. ಏಕೆಂದರೆ ಪುಸ್ತಕದ ಮಾರಾಟದಲ್ಲಿ ಏಳುಬೀಳುಗಳಿರುತ್ತವೆ ಹಾಗೂ ಎಷ್ಟೋ ಅನಿರೀಕ್ಷಿತ ಬೆಳವಣಿಗೆಗಳು (ಉದಾಹರಣೆಗೆ ಮಂಡಲ್ ವಿರೋಧಿ ಚಳವಳಿ) ಮಾರಾಟದ ಮೇಲೆ ಪ್ರತಿಕೂಲ ಅಥವಾ ಇತರ ರೀತಿಯ ಪರಿಣಾಮವನ್ನುಂಟುಮಾಡಬಹುದು. ಇಂತಹ ಪ್ರಶ್ನೆಗಳನ್ನು ಎದುರಿಸುವುದು ಎಷ್ಟೇ ನಿರರ್ಥಕವೆನಿಸಿದರೂ, ಎಷ್ಟೇ ಬೇಸರವಾದರೂ, ಅವುಗಳನ್ನು ಎದುರಿಸುವುದು ಸಂಪಾದಕನ ಕೆಲಸ. ಏಕೆಂದರೆ ಲೇಖಕನಿಗೆ ಸಂಪಾದಕನೇ ಪ್ರಕಾಶನ ಸಂಸ್ಥೆಯೊಂದಿಗೆ ಕೊಂಡಿಯಂತಿರುವುದು. ಸಂಪಾದಕರಾಗಿ ನೀವು ಮುದ್ರಣ, ವಿತರಣೆ, ಹಣಕಾಸು, ರಾಯಲ್ಟಿ ಧನ, ಸೋಡಿಗಳು ಮುಂತಾದವುಗಳ ಬಗ್ಗೆ ಮೂಲಭೂತ ತಿಳುವಳಿಕೆಯನ್ನಾದರೂ ಹೊಂದಿದ್ದರೆ ಇಂತಹ ಪ್ರಶ್ನೆಗಳನ್ನು ಎದುರಿಸುವುದು ಸುಲಭ.

ಪುಸ್ತಕಗಳ ಪ್ರಕಟಣೆಗೆ ಸಂಬಂಧಿಸಿದಂತೆ ವೇಳಾಪಟ್ಟಿಯೊಂದನ್ನು ಅನುಸರಿಸುವುದು ಬಹಳ ಮುಖ್ಯವಾದ ಮತ್ತೊಂದು ವಿಷಯ. ಯಾವುದೇ ಪುಸ್ತಕದ ಬಹುಮಟ್ಟಿನ ಯಶಸ್ಸು ಅದು ಸಕಾಲಕ್ಕೆ ಹೊರಬರುತ್ತದೆಯೋ ಅಥವಾ ಇಲ್ಲವೇ ಎಂಬುದನ್ನು ಅವಲಂಬಿಸಿದೆ. ಬಹುತೇಕ ಪ್ರಕಾಶಕರ ಪುಸ್ತಕಗಳ ಕ್ರಯಪಟ್ಟಿಯಲ್ಲಿ ಅವರ ಪುಸ್ತಕಗಳು ಪ್ರಕಟವಾಗಬಹುದಾದ ತಾರೀಖುಗಳನ್ನು ಕೊಟ್ಟಿರಲಾಗುತ್ತದೆ. ಉತ್ತೇಜನ ಮತ್ತು ಪ್ರಚಾರ ವಿಭಾಗಗಳು ಪುಸ್ತಕಗಳ ಪಟ್ಟಿಯನ್ನು ತಯಾರಿಸುತ್ತಿದ್ದರೆ – ಸಾಮಾನ್ಯವಾಗಿ ಈ ವಿಭಾಗಗಳೇ ತಯಾರಿಸುವುದು – ಪುಸ್ತಕಗಳು ಯಾವ ಹಂತದಲ್ಲಿವೆ ಹಾಗೂ ಪ್ರತಿ ಪುಸ್ತಕವನ್ನು ಯಾವಾಗ ನಿರೀಕ್ಷಿಸಬಹುದು ಎಂದು ತಿಳಿದುಕೊಳ್ಳಲು ಸಂಪಾದಕರೊಂದಿಗೆ ಅವು ಸಂಪರ್ಕ ಹೊಂದಿರಬೇಕಾಗುತ್ತದೆ. ಕೆಲವು ಹಸ್ತಪ್ರತಿಗಳು ಯಾವಾಗ ದೊರೆಯಬಹುದು ಎಂಬುದನ್ನು ಮೊದಲೇ ಹೇಳುವುದು ಸಂಪಾದಕರಿಗೆ ಸಾಧ್ಯವಾದರೂ, ಮುದ್ರಣದ ವೇಳಾಪಟ್ಟಿಯ ಬಗ್ಗೆ ಅವರಿಗೆ ತಿಳಿದಿರುವುದು ಅತಿ ಸ್ವಲ್ಪವಾದ್ದರಿಂದ, ಆ ವಿಭಾಗವೂ ಮಾಹಿತಿ ನೀಡಬೇಕಾಗುತ್ತದೆ. ಮುದ್ರಣದ ವೇಳಾಪಟ್ಟಿಗಳಿಗೆ ಎಲ್ಲ ರೀತಿಯ ತೊಂದರೆಗಳು ಬಾಧಿಸುತ್ತವೆ – ವಿದ್ಯುತ್ ಕಡಿತ, ಕಾರ್ಮಿಕ ವಿವಾದಗಳು, ಕಾಗದದ ಕೊರತೆ, ಚುನಾವಣೆಗಳು ಇತ್ಯಾದಿ. ಪ್ರಕಾಶಕರ ಪುಸ್ತಕಗಳ ಪಟ್ಟಿ ನಿಜವಾಗಿಯೂ ಮಾರಾಟಕ್ಕೆ ಪ್ರಮುಖವಾದ ಸಾಧನವಾಗಿರುವುದರಿಂದ ಅದರಲ್ಲಿನ ಎಲ್ಲ ಮಾಹಿತಿ ಸಾಧ್ಯವಾದಷ್ಟೂ

ನಿಖರವಾಗಿರಬೇಕಾದ್ದು ಮುಖ್ಯ. ಇಲ್ಲೂ ಸಹ ಬೇರೆ ಬೇರೆ ವಿಭಾಗಗಳ ನಡುವೆ ಅಂತರಕ್ರಿಯೆಯು ಪ್ರಾಮುಖ್ಯತೆ ಎದ್ದು ಕಾಣುತ್ತದೆ.

ನಂತರ, ಪುಸ್ತಕಗಳ ಮಾರಾಟ ಅನೇಕ ಸಲ ಕೆಲವು ಗೊತ್ತಾದ ಅವಧಿಗಳಲ್ಲಿ ಚೆನ್ನಾಗಿ ಆಗುತ್ತದೆ, ವರ್ಷದ ಕೆಲ ಸಮಯ ಪುಸ್ತಕಗಳ ಮಾರಾಟ ವಿಳಂಬ ಗತಿಯಲ್ಲಿ ಆಗುತ್ತದೆ ಎಂಬುದನ್ನು ಮಾರಾಟ ವಿಭಾಗದವರು ನಿಮಗೆ ತಿಳಿಸುತ್ತಾರೆ; ಇನ್ನೂ ಕೆಲವು ಸಮಯದಲ್ಲಿ ಅನುದಾನಗಳನ್ನು ಗೊತ್ತಾದ ಅವಧಿಯೊಳಗೆ ಖರ್ಚು ಮಾಡಬೇಕಾದ ಅಗತ್ಯವಿರುತ್ತದಾದ್ದರಿಂದ ತರಾತುರಿಯಿಂದ ಪುಸ್ತಕಗಳನ್ನು ಕೊಳ್ಳಲಾಗುತ್ತದೆ. ಹೀಗಾಗಿ ವರ್ಷದ ಕೆಲವು ನಿರ್ದಿಷ್ಟ ಸಮಯಗಳಲ್ಲಿ ಹೆಚ್ಚು ಪುಸ್ತಕಗಳ ಪ್ರಕಟಣೆಗೆ ಗಮನವನ್ನು ಕೇಂದ್ರೀಕರಿಸುವ ಕಾರ್ಯಕ್ರಮಗಳನ್ನು ಕೈಗೊಳ್ಳುವ ತಂತ್ರವನ್ನು ಅನೇಕ ಪ್ರಕಾಶಕರು ಬಳಸುತ್ತಾರೆ. ಸಂಪಾದಕರು ಮಾರಾಟ ಮತ್ತು ಮಾರುಕಟ್ಟೆ ವಿಭಾಗಗಳೊಡನೆ ಸಂಪರ್ಕವಿಟ್ಟುಕೊಂಡಾಗಲೇ ಪುಸ್ತಕ ಮಾರಾಟದ ಈ ಉಬ್ಬರವಿಳಿತಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಎಷ್ಟು ಮುಖ್ಯ ಎಂಬುದು ತಿಳಿಯುತ್ತದೆ ಹಾಗೂ ಅವುಗಳಿಗೆ ತಕ್ಕಂತೆ ಕೆಲಸ ಮಾಡುವುದು ಸಾಧ್ಯವಾಗುತ್ತದೆ.

ಒಬ್ಬ ಸಂಪಾದಕ ಮುಖ್ಯವಾಗಿ ತಿಳಿದಿರಬೇಕಾದ ಇನ್ನೂ ಅನೇಕ ವಿಷಯಗಳಿವೆ; ನೀವು ಹೊರಗಡೆ ಹೋಗಿ ಹಸ್ತಪ್ರತಿಗಳನ್ನು ಪಡೆದುಕೊಳ್ಳುತ್ತಿದ್ದರೆ ಮಾರುಕಟ್ಟೆಯಲ್ಲಿ, ವಿದ್ವಾಂಸರಲ್ಲಿ, ಲೇಖಕರಲ್ಲಿ, ಹಂಚಿಕೆದಾರರಲ್ಲಿ, ಪುಸ್ತಕ ಮಾರಾಟಗಾರರಲ್ಲಿ ನಿಮ್ಮ ಪ್ರಕಾಶನ ಸಂಸ್ಥೆಯ ಬಗ್ಗೆ ಏನು ಅಭಿಪ್ರಾಯವಿದೆ ಎಂಬ ಬಗ್ಗೆ ನಿಮಗೆ ಸ್ವಲ್ಪವಾದರೂ ತಿಳಿದಿರಬೇಕು. ನಿಮ್ಮ ಪುಸ್ತಕಗಳು ಎಲ್ಲೆಲ್ಲಿ ವಿತರಣೆಯಾಗುತ್ತವೆ, ಯಾವ ಕ್ಷೇತ್ರಗಳಲ್ಲಿ ನೀವು ಬಲವಾಗಿದ್ದೀರಿ ಹಾಗೂ ಎಲ್ಲಿ ಯಾರು ನಿಮ್ಮ ಪುಸ್ತಕಗಳ ವ್ಯವಹಾರ ನಡೆಸುತ್ತಾರೆ ಎಂಬುದು ತಿಳಿದಿದ್ದರೆ ನಿಮಗೆ ಅನುಕೂಲ. ರಾಷ್ಟ್ರೀಯವಾಗಿ ಮತ್ತು ಅಂತರರಾಷ್ಟ್ರೀಯವಾಗಿ ಮಾರುಕಟ್ಟೆಯಲ್ಲಿ ನಿಮ್ಮ ಪ್ರಭಾವ ಎಷ್ಟರಮಟ್ಟಿಗಿದೆ ಎಂಬುದನ್ನು ನಿಮ್ಮ ಭಾವಿ ಲೇಖಕರಿಗೆ ತಿಳಿಸುವುದು ಸಾಧ್ಯವಾಗುವುದಾದರೆ ಉತ್ತಮ. ನಿಮ್ಮ ವಿತರಣಾ ವ್ಯವಸ್ಥೆಯನ್ನು ತಿಳಿದುಕೊಳ್ಳುವುದರ ಜೊತೆಗೆ ವಿದೇಶಿ ಮಾರುಕಟ್ಟೆಗಳು, ಹಕ್ಕುಗಳಿಗೆ ಸಂಬಂಧಿಸಿದಂತೆ ಒಡಂಬಡಿಕೆ ಮಾಡಿಕೊಳ್ಳುವ ಸಾಧ್ಯತೆಗಳು, ನಿಮ್ಮ ಪುಸ್ತಕಗಳನ್ನು ಕೊಳ್ಳಬಹುದಾದ ವಿದೇಶಿ ಪ್ರಕಾಶಕರು ಮುಂತಾದವುಗಳ ಬಗ್ಗೆ ಸ್ವಲ್ಪ ತಿಳುವಳಿಕೆ ಹೊಂದಬೇಕಾದ ಅಗತ್ಯವಿದೆ. ಕಾಗದದ ಬೆಲೆಗಳು ಹೇಗಿವೆ, ಮುದ್ರಣ ಕೈಗಾರಿಕೆ ಯಾವ ಸ್ಥಿತಿಯಲ್ಲಿದೆ, ಪುಸ್ತಕಗಳ ರವಾನೆಗೆ ಸಂಬಂಧಿಸಿದಂತೆ ಅಂಚೆ ದರಗಳು ಹೇಗಿವೆ ಮುಂತಾದವುಗಳ ಬಗ್ಗೆಯೂ ತಿಳಿದುಕೊಂಡಿರುವುದರಿಂದ ಅನುಕೂಲವಾಗುತ್ತದೆ.

ನಾನು ನಿಮಗೆ ಎರಡು ಉದಾಹರಣೆಗಳನ್ನು ಕೊಡುತ್ತೇನೆ. ನಮ್ಮ ಪ್ರಕಾಶನ ಸಂಸ್ಥೆಯಲ್ಲಿ ನಾವು ವಿದೇಶಿ ಪ್ರಕಾಶಕರಿಂದ ಪ್ರಕಟವಾದ ಲೇಖಕರ ಪುಸ್ತಕಗಳನ್ನು ಕೊಳ್ಳುವ ಪ್ರಕಾಶಕರಾಗುವುದಕ್ಕಿಂತಲೂ ಆ ಲೇಖಕರ ಪುಸ್ತಕಗಳ ಮೂಲ

ಪ್ರಕಾಶಕರಾಗುವುದಕ್ಕೆ ಒಪ್ಪಬೇಕೆಂದು ಅವರನ್ನು ಒತ್ತಾಯಿಸುತ್ತೇವೆ. ಉದಾಹರಣೆಗೆ ಅನೇಕ ಭಾರತೀಯ ಲೇಖಕರು ತಮ್ಮ ಕೃತಿಗಳು ಮೊದಲು ವಿದೇಶಗಳಲ್ಲಿ, ನಂತರ ಇಲ್ಲಿ ಪ್ರಕಟವಾಗಬೇಕೆಂದು ಬಯಸುತ್ತಾರೆ. ಮೊದಲು ಇಲ್ಲಿ ಪ್ರಕಟವಾಗಬೇಕೆಂದು ನಾವು ಒತ್ತಿ ಹೇಳುತ್ತೇವೆ. ನಮಗೆ ಇದು ಆರ್ಥಿಕ ದೃಷ್ಟಿಯಿಂದ ವಿವೇಚನೆಯ ಕ್ರಮವಷ್ಟೇ ಅಲ್ಲದೆ – ಪುಸ್ತಕಗಳನ್ನು ವಿದೇಶಗಳಲ್ಲಿ ಕೊಳ್ಳುವುದಕ್ಕಿಂತ ಸ್ಥಳೀಯವಾಗಿ ಪ್ರಕಟಿಸುವುದು ಬಹಳ ಅಗ್ಗ – ಯೋಗ್ಯ ರಾಜಕೀಯ ಕ್ರಮವೂ ಆಗಿದೆ. ಲೇಖಕರು ತಮ್ಮ ದೇಶಗಳಲ್ಲೇ ಪ್ರಕಟಣೆಗೆ ನಿಷ್ಠರಾಗಿರುವುದು ಮುಖ್ಯ ಎಂದು ನಾವು ನಂಬಿದ್ದೇವೆ. ಅಂತರರಾಷ್ಟ್ರೀಯ ಹಕ್ಕುಗಳು ಮತ್ತು ವಿತರಣಾ ವ್ಯವಸ್ಥೆಗಳ ಬಗ್ಗೆ ನಾವು ತಿಳಿದುಕೊಂಡಿರುವುದರಿಂದ, ವಿದೇಶಿ ಪ್ರಕಾಶಕರೊಬ್ಬರನ್ನು ನಾವು ಗೊತ್ತುಮಾಡುತ್ತೇವೆ ಅಥವಾ ಅದೂ ಸಾಧ್ಯವಾಗದೆ ಹೋದರೆ, ಪುಸ್ತಕಗಳು ವಿದೇಶಿ ಮಾರುಕಟ್ಟೆಗಳಿಗೆ ಹೋಗುವಂತೆ ಮಾಡುತ್ತೇವೆ ಎಂದು ಲೇಖಕರಿಗೆ ಭರವಸೆ ಕೊಡುವುದು ನಮಗೆ ಸಾಧ್ಯವಾಗುತ್ತದೆ. ಕೆಲವು ಸಲ ಇದಕ್ಕೆ ಬಹಳ ಶ್ರಮಿಸಬೇಕಾಗುತ್ತದೆ, ಆದರೆ ಲೇಖಕರಿಗೆ ನೀವೇನು ಹೇಳುತ್ತಿದ್ದೀರಿ ಎಂಬುದು ನಿಮಗೇ ಚೆನ್ನಾಗಿ ತಿಳಿದಿದ್ದರೆ ಅವರನ್ನು ನಿಭಾಯಿಸುವುದು ಮತ್ತಷ್ಟು ಸುಲಭವಾಗುತ್ತದೆ. ವಾಸ್ತವವಾಗಿ, ಇದು ವಿಚಿತ್ರವೆನಿಸಿದರೂ, ಇತರ ಪ್ರಕಾಶಕರೊಂದಿಗೆ ಹೇಗೆ ವ್ಯವಹರಿಸಬೇಕೆಂಬ ಬಗ್ಗೆ ಸಲಹೆ ಕೇಳಲು ನಮ್ಮ ಲೇಖಕರು ತಮ್ಮ ಗೆಳೆಯರನ್ನು ನಮ್ಮಲ್ಲಿಗೆ ಕಳಿಸುತ್ತಿರುವುದು ನಮಗೀಗ ಕಂಡು ಬಂದಿದೆ.

ಎರಡನೆಯ ಉದಾಹರಣೆ ಅಂಚೆ ದರಗಳಿಗೆ ಸಂಬಂಧಿಸಿದ್ದು: ವಿಪಿಪಿಗೆ (ಪುಸ್ತಕಗಳನ್ನು ರವಾನಿಸುವ ಒಂದು ಮಾರ್ಗ) ಸಂಬಂಧಿಸಿದ ದರಗಳನ್ನು ಸರ್ಕಾರ ಬದಲಾಯಿಸಿದಾಗ, ವಿಪಿಪಿ ಪಾರ್ಸೆಲ್‌ಗಳನ್ನು ಸ್ವೀಕರಿಸುವ ಅಂಚೆ ಕಚೇರಿಗಳ ಸಂಖ್ಯೆಯನ್ನು ಕಡಿಮೆ ಮಾಡಲಾಯಿತು ಹಾಗೂ ಈ ವಿಧಾನದಿಂದ ಸಾಮಗ್ರಿ ಕಳಿಸುತ್ತಿದ್ದ ಜನರು ಕೆಲವೇ ಆಯ್ದ ಅಂಚೆ ಕಚೇರಿಗಳಿಗೆ ಹೋಗಿ ಕ್ಯೂನಲ್ಲಿ ನಿಲ್ಲಬೇಕಾದ ಅಗತ್ಯ ಉಂಟಾಗಿ ಸಾಕಷ್ಟು ಸಮಯ ಕಳೆಯಬೇಕಾಗಿ ಬಂತು. ಈ ಮೊದಲು ಸುಲಭ ಹಾಗೂ ಅನುಕೂಲದ ವಿಧಾನವಾಗಿದ್ದ ವಿಪಿಪಿ ಸೌಲಭ್ಯ ಇದ್ದಕ್ಕಿದ್ದಂತೆ ತೊಂದರೆಯ ಹಾಗೂ ಅಧಿಕ ಸಮಯ ಬೇಕಾದ ವಿಧಾನವಾಯಿತು. ವಿಪಿಪಿ ಪಾರ್ಸೆಲ್‌ಗಳನ್ನು ತಾವು ಕಡಿಮೆ ಮಾಡಬೇಕಾಯಿತೆಂದೂ ಈ ಬಗ್ಗೆ ತಮ್ಮ ಲೇಖಕರಿಂದ ಈ ವಿಧಾನದಲ್ಲಿ ಪುಸ್ತಕಗಳನ್ನು ನೀವೇಕೆ ಕಳಿಸುತ್ತಿಲ್ಲ ಎಂಬ ಪ್ರಶ್ನೆಗಳನ್ನು ತಾವು ಎದುರಿಸಬೇಕಾಯಿತೆಂದೂ ಪ್ರಕಾಶನ ಸಂಸ್ಥೆಯೊಂದರ ಪ್ರಕಾಶಕ ಗೆಳೆಯರು ನನಗೆ ಹೇಳಿದರು. ಪರಿಸ್ಥಿತಿಯ ಬಗ್ಗೆ ಏನೂ ತಿಳಿಯದಿದ್ದ ಸಂಪಾದಕ ಲೇಖಕರ ಸಿಟ್ಟನ್ನು ಶಮನಗೊಳಿಸಲು ಕೊನೆಗೆ ರವಾನೆ ವಿಭಾಗವನ್ನು ಸಂಪರ್ಕಿಸಿ ವಿಷಯ ತಿಳಿದುಕೊಳ್ಳಬೇಕಾಯಿತು. ಹಣ ಕೊಡುವುದರಲ್ಲಿ, ಅದರಲ್ಲೂ ರಾಯಲ್ಟಿ ಹಣ ಕೊಡುವುದರಲ್ಲಿ, ನಿಮ್ಮ ಪ್ರಕಾಶನ ಸಂಸ್ಥೆ ಎಷ್ಟು ಕ್ಲುಪ್ತವಾಗಿದೆ ಎಂಬುದನ್ನು ತಿಳಿದುಕೊಂಡಿರುವುದು ಅನುಕೂಲ. ಏಕೆಂದರೆ ಈ ಬಗ್ಗೆ ಪ್ರಶ್ನೆಗಳನ್ನು ಸಂಪಾದಕ ಎದುರಿಸಬೇಕಾಗುತ್ತದೆ.

ಬೇರೆ ಬೇರೆ ವಿಭಾಗಗಳ ನಡುವೆ ಅಂತರಕ್ರಿಯೆ ಏಕೆ ಮತ್ತು ಹೇಗೆ ಮುಖ್ಯ ಎಂದು ತೋರಿಸುವ ಇನ್ನೂ ಅನೇಕ ಅಂಶಗಳಿವೆ. ಆದರೆ ಈಗಾಗಲೇ ಇದನ್ನು ಸ್ಪಷ್ಟಪಡಿಸಲಾಗಿದೆ ಎಂದು ನಾನು ಭಾವಿಸಿದ್ದೇನೆ. ಇಂತಹ ಅಂತರಕ್ರಿಯೆಯಿಂದ ಮುಖ್ಯವಾಗಿ ಕೆಲಸ ಸರಾಗವಾಗಿ ಆಗುತ್ತದೆ, ಪರಸ್ಪರ ಮಾಹಿತಿ ದೊರೆಯುತ್ತದೆ, ಒಂದು ವ್ಯವಸ್ಥಿತ ತಂಡವಾಗಿ ಕೆಲಸ ಮಾಡುವುದು ಸಾಧ್ಯವಾಗುತ್ತದೆ ಹಾಗೂ ಒಟ್ಟಾರೆಯಾಗಿ ಕೆಲಸದ ವ್ಯವಸ್ಥೆ ಉತ್ತಮವಾಗಿ ಆಗುತ್ತದೆ. ಮೂಲತಃ ಸಂಪಾದಕ ಇತರ ವಿಭಾಗಗಳೊಂದಿಗೆ ಅಂತರಕ್ರಿಯಿಸಬೇಕಾದ ಅಗತ್ಯವಿದೆ; ಏಕೆಂದರೆ ಪ್ರಕಾಶನ ಪ್ರಕ್ರಿಯೆಯನ್ನು ಪ್ರಾರಂಭಿಸಿದ ನಂತರ – ಅಂದರೆ ಹಸ್ತಪ್ರತಿಯೊಂದನ್ನು ಪುಸ್ತಕವನ್ನಾಗಿ ಮಾಡುವುದು – ಹಸ್ತಪ್ರತಿ ತಮ್ಮ ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ಹೋದ ಕ್ಷಣದಲ್ಲೇ ಸಂಪಾದಕರು ಅದರ ಬಗ್ಗೆ ಕೈ ತೊಳೆದುಕೊಳ್ಳುವಂತಿಲ್ಲ. ಪುಸ್ತಕಗಳನ್ನು ಹೊರತರುವುದು ಮಕ್ಕಳನ್ನು ಜಗತ್ತಿಗೆ ತಂದಂತೆ ಎಂದು ನಾವೆಲ್ಲಾ ಹೇಳುತ್ತೇವೆ; ಅದೇ ಸೃಷ್ಟಿಕಾರ್ಯ, ಅದೇ ತಲೆನೋವುಗಳು, ಅದೇ ಉದ್ವೇಗ ಹಾಗೂ ಮಗು ಅಥವಾ ಪುಸ್ತಕದೊಡನೆಯ ಸಂಬಂಧ ಸಾಧ್ಯವಾದಷ್ಟೂ ಕಾಲ ಹಾಗೇ ಮುಂದುವರೆಯಬೇಕಾದ ಅದೇ ಅಗತ್ಯ ಇದೆ ಎಂದು ನಾನು ಭಾವಿಸುತ್ತೇನೆ. ನಿಮ್ಮ ಪ್ರಕಾಶನ ಸಂಸ್ಥೆಯಲ್ಲಿ ಇತರ ವಿಭಾಗಗಳ ಕೆಲಸದ ಬಗ್ಗೆ ನಿಮಗೆ ಅರಿವಿದ್ದರೆ ಹಾಗೂ ಅದರ ಪ್ರಾಮುಖ್ಯತೆಯನ್ನು ನೀವು ಗೌರವಿಸಿದರೆ, ಆ ಗೌರವ ನಿಮ್ಮ ಕೆಲಸಕ್ಕೂ ದೊರೆಯುವ ಹಾಗೂ ನಿಮ್ಮ ಕೆಲಸಕ್ಕೆ ಯೋಗ್ಯವಾದ ಮೌಲ್ಯ ದೊರೆಯುವ ಸಂಭವ ಹೆಚ್ಚು.

ನಾನಿಲ್ಲಿ ಸೂಚಿಸಿರುವ ಪ್ರತಿಯೊಂದು ಅಂಶಕ್ಕೂ ವಿರುದ್ಧವಾದ ಅಂಶವೊಂದಿದೆ. ಭಾರತೀಯ ಪ್ರಕಾಶನ ಕ್ಷೇತ್ರ ಎಷ್ಟು ಜಟಿಲ, ಎಷ್ಟು ಸವಿಸ್ತಾರವಾಗಿದೆಯೆಂದರೆ, ಪ್ರಕಾಶಕರು ಪಠ್ಯಪುಸ್ತಕಗಳನ್ನು, ವೃತ್ತಿ ಪುಸ್ತಕಗಳನ್ನು ಮತ್ತು ವ್ಯಾಸಂಗಿಕ ಪುಸ್ತಕಗಳನ್ನು ಮತ್ತು ಮಕ್ಕಳ ಪುಸ್ತಕಗಳನ್ನು ಪ್ರಕಟಿಸುತ್ತಿರುವಾಗ ಹಾಗೂ ಖಾಸಗಿ ಮತ್ತು ಸರ್ಕಾರಿ ವಲಯಗಳೆರಡೂ ಅದೇ ಪುಸ್ತಕಗಳಿಗೆ ಸ್ಪರ್ಧಿಸುತ್ತಿರುವಾಗ, ಎಲ್ಲ ರೀತಿಯ ಪ್ರಕಾಶನ ಕಾರ್ಯಗಳಿಗೆ ಸರಿಹೊಂದುವ ಅಥವಾ ಸರಿಹೊಂದಬಹುದಾದ ಏನನ್ನೇ ಆದರೂ ಹೇಳುವುದು ಕಠಿಣವಾಗುತ್ತದೆ. ಉದಾಹರಣೆಗೆ, ನಾನು ಹೇಳಿರುವುದರಲ್ಲಿ ಬಹಳಷ್ಟು ಖಾಸಗಿ ವಲಯದ ಪ್ರಕಾಶನ ಸಂಸ್ಥೆಗಳಿಗೆ ಸಂಬಂಧಿಸಿದೆ – ನನ್ನ ಅನುಭವ ಅಲ್ಲಿಯದೇ. ಸರ್ಕಾರಿ ವಲಯದ ಪ್ರಕಾಶನ ಸಂಸ್ಥೆಯಲ್ಲಿ ಎಲ್ಲವೂ ಬೇರೆ ರೀತಿಯಾಗಿರಬಹುದು, ಬಹುಶಃ ಬೇರೆ ರೀತಿಯಾಗಿವೆ; ಆದ್ದರಿಂದ ನಾನು ಹೇಳುವುದರಲ್ಲಿ ಯಾವುದನ್ನೂ ನೀವು ಒಪ್ಪದೆ ಇರಬಹುದು.

ಅನೇಕ ಪ್ರಕಾಶನ ಸಂಸ್ಥೆಗಳಿಗೆ ಪರಸ್ಪರರನ್ನು ಅರಿತು ಕೆಲಸ ಮಾಡುವ ಪ್ರಾಮುಖ್ಯತೆ ತಿಳಿದಿದ್ದರೂ ಸಹ, ಕೆಲವೇ ಕೆಲವು ಸಂಸ್ಥೆಗಳು ಅದನ್ನು ಜಾರಿಯಲ್ಲಿಟ್ಟಿವೆ ಅಥವಾ ಅದನ್ನು ಪ್ರೋತ್ಸಾಹಿಸುತ್ತಿವೆ. ಬಹುತೇಕ ಸಂಸ್ಥೆಗಳಲ್ಲಿ ಏನೋ ಒಂದು ಅನೌಪಚಾರಿಕವಾದ ರೀತಿಯಲ್ಲಿ ಈ ಅಂತರಕ್ರಿಯೆ ನಡೆಯುತ್ತದೆ. ಇದು ಉದ್ದೇಶಪೂರ್ವಕವಾಗಿ ಮಾಡುವುದಲ್ಲ; ಸಮಯದ ಕೊರತೆ ಮತ್ತು ಕಾಲಕ್ಕೆ

ಸರಿಯಾಗಿ ಮಾಡಬೇಕಾದ ಕೆಲಸದ ಒತ್ತಡಗಳ ಪರಿಸ್ಥಿತಿಯಿಂದ ಹೀಗಾಗುತ್ತದೆ. ದೊಡ್ಡ ಅಥವಾ ಮಧ್ಯಮ ವರ್ಗದ ಪ್ರಕಾಶನ ಸಂಸ್ಥೆಗಳಲ್ಲಿರುವವರೊಂದಿಗೆ ನೀವು ಮಾತನಾಡಿದರೆ, ಅವರೆಲ್ಲರೂ ಜಂಟಿಯಾಗಿ ಸಂಪಾದಕೀಯ ಮತ್ತು ಮಾರಾಟ ಕುರಿತ ಸಭೆಗಳನ್ನು ನಡೆಸಲು ವಿಚಾರ ಮಾಡಿದರೂ ಸಹ ಅಪರೂಪಕ್ಕೆ ಅವುಗಳನ್ನು ನಡೆಸುತ್ತಾರೆ. ಹಾಗಿದ್ದರೆ, ಈ ರೀತಿಯ ಕೆಲಸ ನಡೆಯುವುದೇ ಆದರೆ ಅಂತರಕ್ರಿಯೆ ಏಕೆ ಅಷ್ಟೊಂದು ಮುಖ್ಯವಾಗಬೇಕು ಎಂದು ನೀವು ಕೇಳಬಹುದು. ಅದಿಲ್ಲದೆಯೇ ಜನರು ತಮ್ಮ ಕೆಲಸ ಮಾಡಿಕೊಂಡು ಹೋಗುತ್ತಾರೆ ಹಾಗೂ ಹೆಚ್ಚಿನ ಗೊಂದಲವೂ ಇಲ್ಲ ಎಂದು ಹೇಳಬಹುದು.

ಬೇರೆಬೇರೆ ವಿಭಾಗಗಳಿಗೆ ಸೇರಿದವರು ನಿಯಮಿತವಾಗಿ ಪರಸ್ಪರ ಪ್ರತಿಕ್ರಿಯಿಸದೆ ಹೋದರೂ ಸಂಪಾದಕರು, ಮುದ್ರಣ ವಿಭಾಗದವರು ಮತ್ತು ಇತರರು ಬೇರೆ ವಿಭಾಗಗಳಲ್ಲಿ ಏನಾಗುತ್ತಿದೆ ಎಂಬುದರ ಬಗ್ಗೆ ಅರಿತುಕೊಳ್ಳುವುದಕ್ಕೆ ಹಾಗೂ ಮಾಹಿತಿಯನ್ನು ಹಂಚಿಕೊಳ್ಳುವುದಕ್ಕೆ ಅವಕಾಶ ಕೊಡುವ ತಮ್ಮದೇ ಆದ ಏರ್ಪಾಡುಗಳನ್ನು ಬಹುತೇಕ ಪ್ರಕಾಶನ ಸಂಸ್ಥೆಗಳು ಹೊಂದಿವೆ. ಉದಾಹರಣೆಗೆ ಇದು ಪಾಕ್ಷಿಕ ಪ್ರಗತಿಯ ವರದಿಯ ರೂಪದಲ್ಲಿರಬಹುದು. ಅಂದರೆ ಈ ವರದಿಯನ್ನು ತಯಾರಿಸುವಾಗ ಪ್ರತಿ ವಿಭಾಗದಿಂದ ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ; ಪ್ರತಿ ಉದ್ಯೋಗಿಗೆ ಪತ್ರಗಳ ಸುತ್ತೋಲೆಯನ್ನು ಕಳಿಸುವ ಏರ್ಪಾಡನ್ನು ಕೆಲವು ಪ್ರಕಾಶನ ಸಂಸ್ಥೆಗಳು ಹೊಂದಿವೆ – ಇದು ಉತ್ತಮ ಕಾರ್ಯನಿರ್ವಹಣೆಗೆ ಸದಾ ಒಂದು ಒಳ್ಳೆಯ ವಿಧಾನವಾಗಿಲ್ಲದಿದ್ದರೂ, (ಪತ್ರವ್ಯವಹಾರ ನಿಮಗೆ ತಲುಪುವ ಹೊತ್ತಿಗೆ ಅದರ ಬಗ್ಗೆ ಏನು ಮಾಡುವುದಕ್ಕೂ ಸಮಯ ಮಿಂಚಿರಬಹುದು ಅಥವಾ ಬಹಳಷ್ಟು ಉದ್ಯೋಗಿಗಳಿಗೆ ಸುತ್ತೋಲೆಯ ಮೂಲಕ ಕಳಿಸಬೇಕಾದ ಬಹಳಷ್ಟು ಪತ್ರ ವ್ಯವಹಾರ ಇರಬಹುದು), ಅದರಿಂದ ಮಾಹಿತಿಯನ್ನು ಪಡೆಯುವುದು ಸಾಧ್ಯವಾಗುತ್ತದೆ. ಇನ್ನು ಅನೌಪಚಾರಿಕವಾದ ವಿಧಾನಗಳೂ ಇವೆ; ಉದ್ಯೋಗಿಗಳು ಪರಸ್ಪರ ಮಾತನಾಡಿಕೊಂಡು ಸಂಸ್ಥೆಯಲ್ಲಿ ಏನಾಗುತ್ತಿದೆ ಎಂಬುದನ್ನು ತಿಳಿದುಕೊಳ್ಳುತ್ತಾರೆ. ಈ ಏರ್ಪಾಡುಗಳು ಬಹಳ ಮುಖ್ಯವಾದರೂ ಇವಷ್ಟೇ ಇರಬಾರದು.

ಕಾಲಕ್ರಮೇಣ ಸಂಪಾದಕರುಗಳು ವೈಯಕ್ತಿಕವಾಗಿ ಯಾವುದು ಒಳ್ಳೆಯ ಪುಸ್ತಕ, ಯಾವುದು ಒಳ್ಳೆಯದಲ್ಲ ಎಂಬುದನ್ನು ಗ್ರಹಿಸಲು ಒಂದು ರೀತಿಯ ವಾಸನಾ ಶಕ್ತಿಯನ್ನು ಪಡೆದುಕೊಳ್ಳುತ್ತಾರೆ; ಅದರಿಂದಾಗಿ ಬೇರೆ ಯಾರನ್ನಾದರೂ ಅವರು ಸಮಾಲೋಚಿಸುವ ಅಗತ್ಯವಾದರೂ ಎಲ್ಲಿದೆ ಎಂದು ನೀವು ಕೇಳಬಹುದು. ಇದು ಅಸತ್ಯವೂ ಅಲ್ಲ; ಸಂಪಾದಕರು ಹೆಚ್ಚಿನ ಸಂದರ್ಭಗಳಲ್ಲಿ ತಾವೇ ನಿರ್ಧಾರ ಕೈಗೊಳ್ಳುತ್ತಾರೆ, ಮುದ್ರಣ ವಿಭಾಗದೊಂದಿಗೆ ವೆಚ್ಚಗಳ ಬಗ್ಗೆಯಾಗಲೀ, ಮಾರಾಟ ವಿಭಾಗದೊಡನೆ ಮಾರಾಟದ ಸಾಧ್ಯತೆಗಳ ಬಗ್ಗೆಯಾಗಲೀ, ಪ್ರಚಾರದ ಬಗ್ಗೆ ಪ್ರಚಾರ ವಿಭಾಗದೊಡನೆಯಾಗಲೀ ಚರ್ಚಿಸುವುದು ಅಪರೂಪ. ಆದರೆ ಇಂತಹ ಪರಿಸ್ಥಿತಿಯ ಬಗ್ಗೆ ಈ ಸಂಪಾದಕರು ಸಂಪೂರ್ಣವಾಗಿ ಸಮಾಧಾನದಿಂದಿದ್ದರು ಎಂಬುದನ್ನು

ಕನಿಷ್ಠ ನನ್ನ ಅನುಭವದಲ್ಲಿ ನಾನೆಂದೂ ಕಂಡಿಲ್ಲ. ಸಂಪಾದಕರು ಮತ್ತು ಮಾರಾಟ ವಿಭಾಗದವರ ನಡುವೆ ಪರಂಪರಾಗತವಾಗಿ ಮತ್ತು ನಿಜವಾಗಿ ಬಿರುಕು ಇದೆ ಎಂಬುದು ನಮಗೆಲ್ಲಾ ತಿಳಿದಿದೆ; ಸಂಪಾದಕರು ತಮ್ಮ ಸಲಹೆಯನ್ನು ಒಪ್ಪಿ ಏನು ಮಾರಾಟವಾಗುತ್ತದೋ ಅದನ್ನೇ ಪ್ರಕಟಿಸಬೇಕೆಂದು ಮಾರಾಟ ವಿಭಾಗದವರು ಬಯಸಿದರೆ, ಉತ್ತಮವಾದದ್ದನ್ನು ಅಥವಾ ಉತ್ತಮ ಎಂದು ತಾವು ಪರಿಗಣಿಸಿದ್ದನ್ನು ಪ್ರಕಟಿಸಬೇಕೆಂದು ಸಂಪಾದಕರು ಬಯಸುತ್ತಾರೆ ಹಾಗೂ ಮಾರಾಟ ಮಾಡುವ "ಗಲೀಜು ಕೆಲಸ"ವನ್ನು ಮಾರಾಟ ವಿಭಾಗದವರಿಗೆ ಬಿಡುತ್ತಾರೆ. ಇದರ ಫಲಿತಾಂಶವೆಂದರೆ ಬಹಳಷ್ಟು ಯೋಗ್ಯ ಸಾಮಗ್ರಿ ಪ್ರಕಟವಾಗುತ್ತದೆ ಹಾಗೂ ಅದು ಪ್ರಕಾಶನ ಸಂಸ್ಥೆಯಿಂದ ಎಂದೂ ಹೊರಗಡೆ ಹೋಗುವುದಿಲ್ಲ; ಇದರಿಂದ ಸಂಪಾದಕರು ಅಸಮಾಧಾನಗೊಳ್ಳುತ್ತಾರೆ. ಅಥವಾ ಬಹಳಷ್ಟು ಕಳಪೆ ಸಾಮಗ್ರಿ ಪ್ರಕಟವಾಗುತ್ತದೆ ಹಾಗೂ ಅದು ಮಾರಾಟವಾಗುತ್ತಲೇ ಇರುತ್ತದೆ ಮತ್ತು ಅದರಿಂದ ಮಾರಾಟ ವಿಭಾಗದವರು ಬಹಳ ಸಂತೋಷಪಡುತ್ತಾರೆ. ಇಷ್ಟಾದರೂ, ಯೋಗ್ಯವಾದ ಆದರೆ ಮಾರಾಟವಾಗದ ಸಾಮಗ್ರಿಯ ಬಗ್ಗೆಯೂ ಸಹ ನೀವು ಮಾರಾಟ ವಿಭಾಗದವರೊಂದಿಗೆ ಚರ್ಚಿಸಿದರೆ, ಮಾರಾಟವಾಗದ ನಿಮ್ಮ ಪುಸ್ತಕವನ್ನು ಮಾರಬಹುದಾದ ಒಂದು ಸಂದರ್ಭ – ಯಾವುದೋ ಒಂದು ಸಮ್ಮೇಳನ ಎನ್ನಿ – ಇದೆ ಎಂಬುದು ನಿಮಗೆ ಗೊತ್ತಾಗಬಹುದು. ಸಾಕಷ್ಟು ದೊಡ್ಡದಾದ ಪ್ರಕಾಶನ ಸಂಸ್ಥೆಯಲ್ಲಿ ಈಗ ಕೃತಿ ಸಂಗ್ರಾಹಕ ಸಂಪಾದಕಿಯಾಗಿರುವ ನನ್ನ ಗೆಳತಿಯೊಬ್ಬರು, ತನ್ನ ಕಚೇರಿಯಲ್ಲಿ ಮಾರಾಟ ವಿಭಾಗದ ಉದ್ಯೋಗಿಗಳ ಪರಿಚಯವಾಂತಿರಲಿ ಆ ವಿಭಾಗ ಹೇಗೆ ಕಾಣುತ್ತದೆ ಎಂಬುದೂ ತನಗೆ ತಿಳಿದಿಲ್ಲ ಎಂದು ನನ್ನಲ್ಲಿ ಹೇಳಿಕೊಂಡರು. ಲೇಖಕರನ್ನು ಭೇಟಿಯಾಗುವ ಮತ್ತು ಹಸ್ತಪ್ರತಿಗಳನ್ನು ಕೋರುವ ಕೆಲಸ ತನಗೆ ಖುಷಿ ಕೊಟ್ಟಿದೆಯೆಂದು ತಿಳಿಸಿದ ಆಕೆ, ತನ್ನಷ್ಟಕ್ಕೆ ತಾನೇ ಈ ಕೆಲಸವನ್ನು ಮಾಡುತ್ತಿರುವುದಾಗಿಯೂ ಕೆಲವೊಮ್ಮೆ ಹೀಗೆ ತಾನಾಗಿ ಮಾಡುವುದಕ್ಕಿಂತಲೂ ಕಚೇರಿಯಲ್ಲಿ ಇತರರೊಂದಿಗೆ, ತನ್ನ ಜೊತೆಯ ಸಂಪಾದಕರೊಂದಿಗೆ ಸಹ ಚರ್ಚಿಸಿದರೆ ಚೆನ್ನಾಗಿರುತ್ತದೆ ಎಂದು ಬಯಸಿದ್ದಾಗಿಯೂ ಹೇಳಿದರು. ಇತರರೊಂದಿಗೆ ಚರ್ಚಿಸುವಾಗ ನಡೆಯುವ ವಿಚಾರಗಳ ತಾಕಲಾಟ, ಒಂದಲ್ಲ ಒಂದು ರೀತಿಯಲ್ಲಿ ನಿರ್ಧಾರ ಕೈಗೊಳ್ಳಲು ನೀವು ಹಿಂಜರಿಯುವುದಕ್ಕೆ ಕಾರಣವಾದ ಒಂದು ಸಣ್ಣ ವಿಷಯದ ಬಗ್ಗೆ ನಿಮ್ಮ ಮನಸ್ಸನ್ನು ಒಂದು ನೆಲೆಗೆ ಒಯ್ಯಲು ಬಹಳ ಸಲ ನೆರವಾಗುತ್ತದೆ.

ಪ್ರಕಾಶನ ಸಂಸ್ಥೆಯಿಂದ ಬೇರೆಯಾದ ಆದರೆ ಅಷ್ಟೇ ಪರಿಣಾಮಕಾರಿಯಾದ ಇನ್ನೊಂದು ಉದಾಹರಣೆ ಇದೆ. ಇಲ್ಲಿ ವರ್ಷದಲ್ಲಿ ಪ್ರಕಟವಾಗುವ ಪುಸ್ತಕಗಳ ಸಂಖ್ಯೆಯೂ ಬಹಳ ದೊಡ್ಡದು, ಅವುಗಳನ್ನು ನಿರ್ವಹಿಸುತ್ತಿರುವ ಸಂಪಾದಕರ ಸಂಖ್ಯೆಯೂ ಅಷ್ಟೇ ದೊಡ್ಡದು ಮತ್ತು ತನ್ನ ಲೇಖಕರ ಹಸ್ತಪ್ರತಿಗಳ ಕಾರ್ಯವನ್ನು ವಹಿಸಿಕೊಳ್ಳುವುದು ಆಯಾ ಸಂಪಾದಕನ ಜವಾಬ್ದಾರಿಯಾಗಿದೆ. ಕೆಲಸದ ಒತ್ತಡ ಬಹಳವಾಗಿರುವುದರಿಂದ ಗೊತ್ತುಪಡಿಸಿದ ಸಂಪಾದಕೀಯ ಸಭೆಗಳು ನಡೆಯುವುದೇ

ಅಪರೂಪ. ಹೀಗಾಗಿ ಸಂಪಾದಕ ಮತ್ತು ಇತರ ವಿಭಾಗಗಳ ನಡುವೆ ಸಂಪರ್ಕ ಬಹಳ ಕಡಿಮೆ ಇರುವುದಷ್ಟೇ ಅಲ್ಲದೆ, ಸಂಪಾದಕೀಯ ವಿಭಾಗಕ್ಕೆ ಸೇರಿದವರ ನಡುವೆಯೂ ಸಂಪರ್ಕ ಅತ್ಯಲ್ಪವಾಗಿರುತ್ತದೆ. ಪ್ರಕಾಶನ ಸಂಸ್ಥೆಯ ಮಾರಾಟ ವಿಭಾಗದವರನ್ನು ತಾನು ಸಂಪರ್ಕಿಸುವುದೇ ಅಪರೂಪವೆಂದು ಸಂಪಾದಕರೊಬ್ಬರು ಹೇಳಿದರೆ ಮಾರಾಟ ವಿಭಾಗದ ಪ್ರತಿನಿಧಿಗಳೊಬ್ಬರು ಸಿಟ್ಟಿನಿಂದ ಸಂಪಾದಕರು ಅವಾಸ್ತವಿಕವಾಗಿರುತ್ತಾರೆಂದೂ, ತಾವು 'ಒಳ್ಳೆಯದು' ಎಂದು ಊಹಿಸಿದ ಎಲ್ಲ ರೀತಿಯ ಪುಸ್ತಕಗಳನ್ನು (ಅವರು ಅವುಗಳನ್ನು 'ಕೆಲಸಕ್ಕೆ ಬಾರದ್ದು' ಎಂದು ಕರೆದರು) ಪ್ರಕಟಿಸುವುದನ್ನು ಮುಂದುವರೆಸಿದ್ದಾರೆ, ಆದರೆ ಈ ಪುಸ್ತಕಗಳನ್ನು ಮಾರುಕಟ್ಟೆಯಲ್ಲಿ ಕೊಳ್ಳುವವರಿಲ್ಲ ಹಾಗೂ ಇವುಗಳನ್ನು ಮಾರುವ ಭಾರವನ್ನು ನನ್ನ ಮತ್ತು ನನ್ನ ಸಹೋದ್ಯೋಗಿಗಳ ಮೇಲೆ ಹೇರಲಾಗಿದೆ ಎಂದೂ ದೂರಿದರು. ಇದೇ ಪ್ರಕಾಶನ ಸಂಸ್ಥೆಯಲ್ಲಿ ಒಬ್ಬ ಸಂಪಾದಕಿ ಅನೇಕ ಕಾರಣಗಳಿಂದಾಗಿ (ಇದರಲ್ಲಿ ಮಾರಾಟ ವಿಭಾಗ ಕೊಟ್ಟಿದ್ದ ದಕ್ಷ ಸಲಹೆಯೂ ಸೇರಿತ್ತು) ಅನರ್ಹವಾಗಿದ್ದ ಹಸ್ತಪ್ರತಿಯೊಂದನ್ನು ನಿರಾಕರಿಸಿದ್ದರು. ಕೆಲವು ತಿಂಗಳುಗಳ ನಂತರ ಲೇಖಕ ತಾನೆಣಿಸಿದ್ದಕ್ಕಿಂತಲೂ ಹೆಚ್ಚು ಜಾಣನಾಗಿದ್ದದ್ದು ಕೊನೆಯ ಗಳಿಗೆಯಲ್ಲಿ ಪತ್ತೆಯಾದಾಗ ಆಕೆಗೆ ಗಾಬರಿಯಾಯಿತು. ಆ ಲೇಖಕನು ಸ್ವಲ್ಪ ಸಮಯ ಕಾದು, ನಂತರ ತಿರಸ್ಕೃತವಾಗಿದ್ದ ತಮ್ಮ ಹಸ್ತಪ್ರತಿಯನ್ನು ಅದೇ ಪ್ರಕಾಶನ ಸಂಸ್ಥೆಯ ಬೇರೊಬ್ಬ ಸಂಪಾದಕರಿಗೆ ಕೊಟ್ಟಿದ್ದರು ಹಾಗೂ ಈ ಸಲ ಇನ್ನೇನು ಒಪ್ಪಂದಕ್ಕೆ ಸಹಿ ಹಾಕಬೇಕು ಎನ್ನುವಷ್ಟರಲ್ಲಿ ಈ 'ವಂಚನೆ' ಬಯಲಾಯಿತು. ಪರಸ್ಪರ ಸಂಪರ್ಕ ಉತ್ತಮವಾಗಿದ್ದಿದ್ದರೆ ಈ ಸಮಸ್ಯೆ ಉಂಟಾಗುತ್ತಿರಲಿಲ್ಲ.

ಒಬ್ಬ ತರುಣ ಸಂಪಾದಕನಾಗಿ ಇಂತಹ ಏರ್ಪಾಡುಗಳ ಪ್ರಾಮುಖ್ಯತೆಯ ಬಗ್ಗೆ ಮಾಲೀಕರಿಗೆ ಹೇಗೆ ಅರಿವು ಮೂಡಿಸುವುದು ಎಂಬ ಪ್ರಶ್ನೆಯನ್ನೂ ಕೇಳಬೇಕಾಗಿದೆ. ವೃತ್ತಿಯಲ್ಲಿ ಮುಂದೆ ಬರಲು ಬಯಸುವ ಎಲ್ಲ ಸಂಪಾದಕರೂ ಬಹುಶಃ ತಮ್ಮ ತಮ್ಮ ನಿರ್ದಿಷ್ಟ ಸನ್ನಿವೇಶಗಳಲ್ಲಿ ಈ ಪ್ರಶ್ನೆಯನ್ನು ಎದುರಿಸಬೇಕಾಗುತ್ತದೆ. ಬಹಳಷ್ಟು ಸಲ, ಇತರ ವಿಭಾಗಗಳ ಬಗ್ಗೆ ಕಲಿಯುವ ಮತ್ತು ಅಲ್ಲಿಯ ಜನರೊಂದಿಗೆ ಪರಸ್ಪರ ಪ್ರತಿಕ್ರಿಯಿಸುವ ಅಗತ್ಯವನ್ನು ನೀವು ಮನಗಂಡರೂ ಸಹ, ಇದರ ಅಗತ್ಯವಿದೆ ಎಂದು ನಿಮ್ಮ ಮಾಲೀಕರಿಗೆ ಅನಿಸದೆ ಇರಬಹುದು ಅಥವಾ ಸಮಯದ ಮತ್ತು ಗೊತ್ತಾದ ಕಾಲಮಿತಿಯಲ್ಲಿ ಮಾಡಬೇಕಾದ ಕಾರ್ಯಗಳ ಒತ್ತಡ ನಿಮ್ಮ ಮೇಲೆ ಎಷ್ಟಿರುತ್ತದೆಯೆಂದರೆ ನಿಮಗೆ ಅಂತಹ ಚಟುವಟಿಕೆಗಳಿಗೆ ಬಿಡುವು ಮಾಡಿಕೊಳ್ಳುವುದು ಅಸಾಧ್ಯವಾಗಬಹುದು. ಇವೆಲ್ಲ ಆಡಳಿತ ವರ್ಗದ ವೈಖರಿಯನ್ನು ಹೆಚ್ಚಾಗಿ ಅವಲಂಬಿಸಿದೆ ಎನ್ನುವುದೇನೋ ಸರಿ. ಸಹಾನುಭೂತಿಯನ್ನುಳ್ಳ ಆಡಳಿತ ವರ್ಗ ನಿಮ್ಮದಾಗಿದ್ದರೆ ಬಹಳಷ್ಟು ಕೆಲಸ ಮಾಡಬಹುದು. ಆದರೆ ಎಂತಹುದೇ ಆಡಳಿತ ವರ್ಗ ಇರಲಿ, ನಿಮ್ಮ ಕೆಲಸವನ್ನು ಹೆಚ್ಚು ಉತ್ತಮವಾಗಿ ಮಾಡುವ ಸಲುವಾಗಿ ಹೆಚ್ಚು ತಿಳಿಯಲು ಮತ್ತು ಹೆಚ್ಚು ಕಲಿಯಲು ನೀವು ಕೇಳುವುದರಲ್ಲಿ ಎಂದೂ ಯಾವ ತೊಂದರೆಯೂ ಇಲ್ಲ

ಎಂಬುದನ್ನು ನೆನಪಿಡುವುದು ಮುಖ್ಯ. ಆಗಾಗ ಇನ್ನೊಂದು ವಿಭಾಗಕ್ಕೆ ಹೋಗಿ ಅಲ್ಲೇನು ನಡೆಯುತ್ತಿದೆ ಎಂಬ ಬಗ್ಗೆ ಸ್ವಲ್ಪ ತಿಳಿದುಕೊಳ್ಳಲು ಪ್ರಯತ್ನಿಸುವುದಕ್ಕೆ ಅವಕಾಶ ಕೊಡಿ ಎಂದು ಬಹುಶಃ ನೀವು ಕೇಳಬಹುದು. ನನ್ನ ವೃತ್ತಿಜೀವನದ ಪ್ರಾರಂಭದಲ್ಲಿ, ನಾನು ನಿರ್ವಹಿಸುತ್ತಿದ್ದ ಕೆಲಸಕ್ಕೆ ಸಂಬಂಧ ಹೊಂದಿದ್ದ ಸಭೆಯಲ್ಲಿ ನನ್ನನ್ನು ಸೇರಿಸಿಕೊಳ್ಳದೆ ಇದ್ದುದಕ್ಕೆ ನನಗೆ ತೀವ್ರ ಹತಾಶೆಯುಂಟಾಗಿದ್ದು ನನಗೆ ನೆನಪಿದೆ. ಆಗ ನಾನು ನನ್ನ ಮಾಲೀಕರಿಗೆ ಭಾವಾವೇಶದಿಂದ ಪತ್ರವೊಂದನ್ನು ಬರೆದು ನನ್ನ ಅಗತ್ಯಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕೆಂದೂ ನನಗೆ ವಿಷಯ ತಿಳಿಸಬೇಕೆಂದೂ ಒತ್ತಾಯಿಸಿದ್ದೆ. ಆ ಕಚೇರಿಯ ಪ್ರಕಾಶನ ಚಟುವಟಿಕೆಯ ಸಮಷ್ಟಿಯಲ್ಲಿ ನನ್ನ ಪಾತ್ರದ ಬಗ್ಗೆ ಸ್ಪಷ್ಟ ತಿಳಿವಳಿಕೆ ಕೊಡಬೇಕೆಂದಷ್ಟೇ ನಾನಾಗ ಕೇಳಿದ್ದು ಎಂದು ಈಗ ನನಗೆ ಮನದಟ್ಟಾಗುತ್ತಿದೆ. ಒಮ್ಮೆ ನನಗೆ ಅದು ತಿಳಿದಾಗ ಅಂದರೆ ನನ್ನ ಜವಾಬ್ದಾರಿ ಏನು ಹಾಗೂ ಇತರರ ಜವಾಬ್ದಾರಿಯೊಂದಿಗೆ ಅದು ಹೇಗೆ ಸಂಬಂಧ ಹೊಂದಿದೆ ಎಂಬುದನ್ನು ತಿಳಿದಾಗ ಕೆಲಸ ಮಾಡುವುದು ಹಾಗೂ ಕಚೇರಿಯ ಒಳಗಡೆ ಮತ್ತು ಹೊರಗಡೆಯ ಜನರೊಡನೆ ವ್ಯವಹರಿಸುವುದು ಹೆಚ್ಚು ಸುಲಭವಾಯಿತು. ಇದನ್ನು ತಿಳಿಯಲು ನಿಮ್ಮದೇ ಆದ ಮಾರ್ಗಗಳನ್ನು ನೀವು ಕಂಡುಹಿಡಿಯಬೇಕು. ಇಲ್ಲಿ ಅನುಸರಿಸಬೇಕಾದ ಯಾವುದೇ ನಿಯಮಗಳಿಲ್ಲ. ಆದರೆ ನಿಮ್ಮ ಕೆಲಸದ ಬಗ್ಗೆ ತಿಳಿದುಕೊಳ್ಳಲು ಕಳೆದ ಸಮಯ ಎಂದೂ ವ್ಯರ್ಥವಲ್ಲ ಎಂಬುದನ್ನು ಮಾತ್ರ ನೆನಪಿಡಬೇಕು. ಇತರ ವಿಭಾಗಗಳ ಕಾರ್ಯಗಳ ಬಗ್ಗೆ ಅರಿತಿರುವುದೂ ಎಚ್ಚರದಿಂದಿರುವುದೂ ನನಗೆ ಬಹಳ ಮುಖ್ಯವಾಗಿತ್ತು ಹಾಗೂ ಅನೇಕ ವರ್ಷಗಳಿಂದ ಪ್ರಕಾಶನ ಚಟುವಟಿಕೆಯಲ್ಲಿ ನಾನು ಪ್ರೀತಿಯಿಂದ ತೊಡಗುವುದಕ್ಕೆ ಇವುಗಳ ತಿಳಿವಳಿಕೆ ಮತ್ತು ಪರಿಚಯವೇ ಕಾರಣ ಎಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

# ಸಂಪಾದಕನಾಗುವ ಬಗೆ

## ಸಾಮ್ಯುಯಲ್ ಇಸ್ರೇಲ್

ಈ ಲೇಖನಗಳ ಸಂಗ್ರಹದ ಓದುಗರು ಗಮನಿಸಿರಬಹುದಾದಂತೆ, ಅವುಗಳಲ್ಲಿ ಸಂಪಾದಕೀಯ ಕೆಲಸಗಳ ವಿವರಣೆ ಮತ್ತು ಚರ್ಚೆ, ಮೇಲಿನ 'ನಿರ್ಧಾರ ಕೈಗೊಳ್ಳುವ' ಮಟ್ಟದಿಂದ 'ನಿಗದಿ ಮಾಡಿದ' ಸಂಪಾದಕೀಯ ಕೆಲಸಗಳ ನಿರ್ವಹಣೆಯ ಕೆಳಗಿನ ಮಟ್ಟಕ್ಕೆ ಬರಲಾಗಿದೆ. ಹೀಗೆ ತಿರುಳಿನಿಂದ ಪರಿಧಿಗೆ ಚಲಿಸುವುದು ತಾರ್ಕಿಕವಾಗಿಯೇ ಇದೆ. ಏಕೆಂದರೆ ಏನು ಪ್ರಕಟಿಸಬೇಕು, ಏನು ಪ್ರಕಟಿಸಬಾರದು ಎಂಬ ಪ್ರಮುಖ ಪ್ರಶ್ನೆ ಕುರಿತಂತೆ ವಿವೇಚನಾಯುಕ್ತ ತೀರ್ಮಾನ ಮತ್ತು ಆಯ್ಕೆ ಮಾಡುವುದು ಎಲ್ಲ ವಾಣಿಜ್ಯಕ ಪ್ರಕಟಣೆಯ ಬುನಾದಿಯಾಗಿದೆ. ಹಾಗೂ ಪ್ರಕಟಣಾ ಪ್ರಕ್ರಿಯೆ ಮುಂದೆ ಸಾಗುವ ದಿಸೆಯೂ ಇದಾಗಿದೆ.

ಆದರೆ ಈ ಸಂಗ್ರಹದ ಓದುಗರ ಪೈಕಿ, ಅದರಲ್ಲೂ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವೃತ್ತಿಗೆ ಹೊಸಬರು ಹಾಗೂ ಅಷ್ಟೇ ಏಕೆ ಸಾಕಷ್ಟು ಹಿರಿಯರಾದ ಸಂಪಾದಕರೂ ಆಗಿರುವ ಓದುಗರ ಪೈಕಿ ಏನನ್ನು ಪ್ರಕಟಿಸಬೇಕು, ಏನನ್ನು ಪ್ರಕಟಿಸಬಾರದು ಎಂಬ ಬಗ್ಗೆ, ಒಂದಿಷ್ಟು ಸಲಹೆ ಮಾಡುವ ಸ್ಥಾನ ಬಲದಿಂದಲೂ ಸಹ, ಏನೂ ಹೇಳಲು ಅಧಿಕಾರವಿಲ್ಲದವರು ಇದ್ದಾರೆ ಎಂದು ನಾನು ಖಂಡಿತವಾಗಿ ತಿಳಿದಿದ್ದೇನೆ. ಮಿತಿಗೊಳಪಟ್ಟ ಇಂತಹ ಸಂಪಾದಕರಿಗೂ ಸಹ (ಅವರನ್ನು ಪ್ರತ್ಯೇಕಿಸಬೇಕಾದರೆ ಮೇಜು ಸಂಪಾದಕರು ಅಥವಾ ಪಠ್ಯ - ಸಂಪಾದಕರು ಎಂದು ಅವರನ್ನು ಕರೆಯಿರಿ) ಅವರಿಗೆ ವಹಿಸಿರುವ ಕಾರ್ಯಕ್ಷೇತ್ರದಲ್ಲೇ ಸೃಜನಾತ್ಮಕವಾಗಿ ಕೆಲಸ ಮಾಡುವ ಹಾಗೂ ನಿರ್ಧಾರ ಕೈಗೊಳ್ಳುವ ಮಟ್ಟಕ್ಕೆ ಮುಂದುವರಿಯುವ ಅವಕಾಶ ಇದೆ ಎಂಬುದು ನನ್ನ ಅಭಿಪ್ರಾಯ. ಇದನ್ನು ಔಪಚಾರಿಕವಾಗಿ ಗುರುತಿಸುವುದಕ್ಕೆ ನಿಷ್ಠುರವಾದ ಸಾಂಸ್ಥಿಕ ರಚನೆಗಳು ಅಡ್ಡಿಯಾದರೂ, ಕಾರ್ಯಸಾಧ್ಯ ಮಟ್ಟದಲ್ಲಿ ಇದು ಆಗಬಹುದು, ಆಗುತ್ತದೆ ಹಾಗೂ ಮಾಡುವ ಕೆಲಸಕ್ಕೆ ಹೆಚ್ಚಿನ ಆಸಕ್ತಿಯನ್ನು ಉಂಟುಮಾಡುತ್ತದೆ. ಅತ್ಯಂತ ಶ್ರೇಷ್ಠ ಸಂಪಾದಕರು

ಬಹುಶಃ ಜನ್ಮತಃ ಸಾಮರ್ಥ್ಯವನ್ನು ಹೊಂದಿದವರಾಗಿರಬಹುದು; ಆದರೆ ಬುದ್ಧಿವಂತಿಕೆ, ಆಸಕ್ತಿ ಮತ್ತು ಪರಿಶ್ರಮ ಹಾಗೂ ಮೊದಲೇ ವೃತ್ತಿಯಲ್ಲಿರುವವರಿಂದ ಒಂದಿಷ್ಟು ಸಹಕಾರ ಮತ್ತು ಪ್ರೋತ್ಸಾಹ ದೊರೆತರೆ ಸಾಮಾನ್ಯರೂ ಉತ್ತಮ ಸಂಪಾದಕರಾಗಬಹುದು. ಇದಕ್ಕಾಗಿಯೇ ಜಟಿಲವಾದ ಸಂಪಾದಕೀಯ ಕೆಲಸಗಳ ಬಗ್ಗೆ ಹಿಂದಿನ ಐದು ತಜ್ಞ ಲೇಖನಗಳಲ್ಲಿರುವ ಅಪಾರ ಮಾಹಿತಿ, ವಿಶ್ಲೇಷಣೆ ಮತ್ತು ಸಲಹೆಯನ್ನು ಪೂರ್ಣಗೊಳಿಸುವಾಗ, ಮೇಲಿನಿಂದ ಕಾಣುವ ಈ ದೃಶ್ಯಕ್ಕೆ ಕೆಳಮಟ್ಟದಿಂದ ಮೇಲೆ ಚಲಿಸುವ ದೃಶ್ಯ ಪೂರಕವಾದರೆ ಉಪಯುಕ್ತವಾಗುತ್ತದೆಂದು ನಾನು ಭಾವಿಸುತ್ತೇನೆ. ಪುಸ್ತಕ ಪ್ರಕಟಣೆಯಲ್ಲಿ ಅನೇಕರ ವೃತ್ತಿಜೀವನ ಈ ದಿಕ್ಕಿನಲ್ಲೇ ವಾಸ್ತವಿಕವಾಗಿ ಮುಂದುವರೆಯುತ್ತದೆ.

ಆದ್ದರಿಂದ ಪುಸ್ತಕ ಪ್ರಕಟಣೆಯ ಸಂಸ್ಥೆಯೊಂದರಲ್ಲಿ ತರಬೇತಿ ಪಡೆಯುತ್ತಿರುವ ಒಬ್ಬ ಕಾಲ್ಪನಿಕ ಸಂಪಾದಕನ ಯೋಗಾಯೋಗವನ್ನು ಗಮನಿಸೋಣ. ಹೊಸಬರನ್ನು ನೇಮಿಸಿಕೊಳ್ಳುವ ವಿಧಾನಗಳು – ವಿಧಾನಗಳಿಲ್ಲದೆಯೂ ಇರಬಹುದು – ಅಪಾರವಾಗಿ ಭಿನ್ನವಾಗಿರುತ್ತವೆ, ಆದ್ದರಿಂದ ಯಾವುದೇ ಸಂಸ್ಥೆಯನ್ನು ಮಾಮೂಲಿ ಎಂದು ವರ್ಣಿಸುವುದಕ್ಕೆ ಹಿಂಜರಿಯಬೇಕಾಗುವುದರಿಂದ ಸಂಸ್ಥೆಯೂ ಕಾಲ್ಪನಿಕ ಎಂದೇ ತಿಳಿಯೋಣ. ನಮ್ಮ ತರಬೇತುದಾರ ಹೀಗೆ ಎಂದು ಹೇಳುವುದು ಕಷ್ಟ. ಆಕೆ ಅಥವಾ ಆತ ಸಾಧಾರಣ ವಿದ್ಯಾರ್ಹತೆಯನ್ನು ಹೊಂದಿದ ತರುಣಿ ಅಥವಾ ತರುಣ (20–25). ತಾನು ಕೆಲಸ ಮಾಡಬೇಕಾದ ಭಾಷೆಯ ಅಭಿವ್ಯಕ್ತಿಯಲ್ಲಿ ಒಳ್ಳೆಯ ಪ್ರಭುತ್ವವಿದೆ; ವ್ಯಾಪಕವಾಗಿ ಮತ್ತು ವಿವಿಧ ವಿಷಯಗಳನ್ನು ಓದಿಕೊಂಡಿರುವ, (ಓದು, ಆಸಕ್ತಿ ವ್ಯಾಪಕವಾಗಿರುವುದನ್ನು ಪ್ರತಿಬಿಂಬಿಸುತ್ತದಾದರೂ ಈ ಆಸಕ್ತಿ ಬಹುಶಃ ಆಳವಾದದ್ದಲ್ಲ) ಬೌದ್ಧಿಕವಾಗಿ ಎಚ್ಚರದಿಂದಿರುವ, ಸ್ಪಷ್ಟವಾಗಿ ಮಾತನಾಡುವ ಆದರೆ ಮಿತವಾಗಿ ಮಾತುಗಳನ್ನು ಬಳಸುವ ಹಾಗೂ ಕೆಲವೊಮ್ಮೆ – ಆದರೆ ಅಗತ್ಯವಾಗೇನೂ ಅಲ್ಲ – ಆಗಾಗ ಬರೆಯುವ ಅಥವಾ ಬರೆಯಲು ಬಯಸುವ ವ್ಯಕ್ತಿ. ಆಕೆಗೆ/ಆತನಿಗೆ ಸಂಪಾದಕೀಯ ಸಹಾಯಕ ಸಹಾಯಕಿ ಎಂಬ ಹುದ್ದೆ ನೀಡುವ ಸಂಭವವಿದೆ ಹಾಗೂ ಬಡತಿ ದೊರೆಯುವವರೆಗೆ ಈ ಲೇಖನದ ಉಳಿದೆಡೆ ಆಕೆ/ಆತನನ್ನು ಸಂ.ಸ. ಎಂದು ಕರೆಯಲಾಗುವುದು. ಸಂ.ಸ. ಗೆ ಒಂದು ಮೇಜು ಅಥವಾ ಅದರಲ್ಲಿ ಅರ್ಧ ಪಾಲು, ಒಂದು ಪೂರ್ತಿ ಕುರ್ಚಿ, ಒಂದು ಪೆನ್ಸಿಲ್, ಪೆನ್ಸಿಲ್ ಚೂಪು ಮಾಡಲು ಒಂದು ಸಾಧನ, ಒಂದು ಎರೇಸರ್, ಒಂದು 'ಬಾಲ್‌ಪಾಯಿಂಟ್', 12" ನ ಒಂದು ಸ್ಕೇಲ್, ಗೆರೆ ಹಾಕಿದ ಒಂದು ಪ್ಯಾಡ್ – ಮತ್ತು ಇವುಗಳೆಲ್ಲವನ್ನೂ ಇಡಲು ಒಂದು ಡ್ರಾಯರ್ (ಅಥವಾ ಒಂದರಲ್ಲಿ ಪಾಲು) ಕೊಡಲಾಗಿದೆ. ಇದಕ್ಕೆ ಮೊದಲು ಅಥವಾ ಇದರ ನಂತರ, ಸಂ.ಸ. ಗೆ ಸಂಪಾದಕೀಯ ವಿಭಾಗದ ಮುಖ್ಯಸ್ಥರು ಮಾಹಿತಿಯನ್ನು, ಬಹುಶಃ ಬಹಳ ಸ್ಥೂಲವಾದ ಮಾಹಿತಿಯನ್ನು ನೀಡುತ್ತಾರೆ ಹಾಗೂ ವಿಭಾಗದ ಸಹೋದ್ಯೋಗಿಯೊಬ್ಬರಿಗೆ ಪರಿಚಯ ಮಾಡಿಕೊಡುತ್ತಾರೆ. ಬಹುಶಃ ಈ ಸಹೋದ್ಯೋಗಿಯೇ ಸಂ.ಸ.ಗೆ

ಕೊಟ್ಟಿರುವ ಮೇಜು ಮತ್ತು ಡ್ರಾಯರ್‌ನ್ನು ಹಂಚಿಕೊಂಡಿರುತ್ತಾರೆ. ಇವರು ನಂತರ ಸಂ.ಸ.ಗೆ ಎಲ್ಲರನ್ನೂ ಪರಿಚಯ ಮಾಡಿಸಿಕೊಡುತ್ತಾರೆ.

ಕರಡಚ್ಚು ತಿದ್ದಲು ಬಳಸುವ ಚಿಹ್ನೆಗಳು, ಶೈಲಿ ಹಾಳೆ ಅಥವಾ ಲಭ್ಯವಿದ್ದರೆ ಶೈಲಿ ಪುಸ್ತಕ, ತಿದ್ದಿದ ಕರಡಚ್ಚುಗಳು ಮತ್ತು ಅವುಗಳ ಪಠ್ಯದ ನಮೂನೆಯ ಹಾಳೆಗಳು, ಪರಿಷ್ಕರಿಸಿದ ಮತ್ತು ಪರಿಷ್ಕರಿಸದ ಪಠ್ಯದ ಮಾದರಿ ಪುಟಗಳ ಅಧ್ಯಯನದೊಂದಿಗೆ ಸಾಮಾನ್ಯವಾಗಿ ಕಲಿಕೆ ಪ್ರಾರಂಭವಾಗುತ್ತದೆ. ಸಂ.ಸ. ಗೆ ಅಭ್ಯಾಸ ಮಾಡಲು ಕರಡಚ್ಚು ಹಾಳೆಗಳ ನಕಲುಗಳನ್ನೂ, ಭಾಷೆಯ ದೃಷ್ಟಿಯಿಂದ ತಿದ್ದಲು ಟೈಪಾದ ಹಸ್ತಪ್ರತಿಗಳ ಜೆರಾಕ್ಸ್ ಪ್ರತಿಗಳನ್ನೂ ಸಹ ಕೊಡಲಾಗುತ್ತದೆ. ಸಂ.ಸ. ನ 'ಹಿರಿಯ' ಸಹೋದ್ಯೋಗಿ-ಬಹುಶಃ ಹೊಸ ಉದ್ಯೋಗಿಗೆ ತನ್ನ ಮೇಜಿನ ಅರ್ಧ ಭಾಗವನ್ನು ಕೊಟ್ಟಿರುವ ಹಾಗೂ ಈಗಾಗಲೇ ಕೆಲವು ತಿಂಗಳ ಅನುಭವವನ್ನು ಹೊಂದಿರುವ ಸಹೋದ್ಯೋಗಿ-ತರಬೇತಿಯುನ್ನು ಪಡೆಯುತ್ತಿರುವ ವ್ಯಕ್ತಿಯ ಪ್ರಶ್ನೆಗಳಿಗೆ ಸಂತೋಷದಿಂದ ಉತ್ತರ ಕೊಡುತ್ತಾರೆ, ಸ್ಥಳದಲ್ಲೇ ಪರಿಶೀಲನೆ ನಡೆಸುತ್ತಾರೆ, ಸಲಹೆ ಕೊಡುತ್ತಾರೆ ಹಾಗೂ ಕಚೇರಿಯ ಸಾಮಾನ್ಯ ದೃಶ್ಯದ ಬಗ್ಗೆ ವಿವರ ನೀಡುತ್ತಾರೆ; ಯಾರು ಏನಾಗಿದ್ದಾರೆ, ಎಲ್ಲಿ ಏನು ನಡೆಯುತ್ತದೆ, ಆಫೀಸಿನಲ್ಲಿ ಸಮಯವನ್ನು ಹೇಗೆ ಕಟ್ಟುನಿಟ್ಟಾಗಿ ಪಾಲಿಸಲಾಗುತ್ತದೆ, ಸಂಸ್ಥೆ ಉಚಿತವಾಗಿ ಕಾಫಿ ಒದಗಿಸುವ ಸಮಯ ಯಾವುದು, ತಿಂಡಿ ತೀರ್ಥಗಳು ಎಲ್ಲಿ ದೊರೆಯುತ್ತವೆ ಇತ್ಯಾದಿಗಳ ವಿವರಗಳನ್ನು ನೀಡುತ್ತಾರೆ. ವೃತ್ತಿಜೀವನದ ಪ್ರವೇಶಕ್ಕೆ ಇಂತಹ ಅನೌಪಚಾರಿಕ ಮಾರ್ಗದರ್ಶನ ಮತ್ತು ಅನುಭವದ ಪಾಠಗಳನ್ನು ಕಲಿಸುವುದು – ಅದರಲ್ಲೂ ಹಂತಹಂತವಾಗಿ ವ್ಯವಸ್ಥಿತ ತರಬೇತಿ ಇಲ್ಲದೆ ಇದ್ದಾಗ – ಅತ್ಯಂತ ಮಹತ್ವದ್ದು ಮತ್ತು ಮೌಲಿಕವಾದದ್ದು ಎಂದು ನಾನು ನಂಬುವುದರಿಂದ ಈ ಮಾತುಗಳನ್ನು ಹೇಳುತ್ತಿದ್ದೇನೆಯೇ ಹೊರತು ಸಚಿತ್ರ ವರ್ಣನೆ ನೀಡುವುದಕ್ಕಲ್ಲ. ವ್ಯವಸ್ಥಿತ ತರಬೇತಿ ಲಭ್ಯವಿದ್ದರೂ ಸಹ, ಹೊಸ ಉದ್ಯೋಗಿ ಸಂಸ್ಥೆಯ ಸಂಸ್ಕೃತಿ, ಚೇತನ ಮತ್ತು ಅದರ ವಿಶಿಷ್ಟ ಗುಣಲಕ್ಷಣಗಳೊಂದಿಗೆ ಬೆರೆಯುವುದಕ್ಕೆ ಇಂತಹ ಅನೌಪಚಾರಿಕ ತರಬೇತಿ ಅಮೂಲ್ಯವಾದ ಸಾಧನವಾಗುತ್ತದೆ.

ಕಾಲಕಾಲಕ್ಕೆ ನಮ್ಮ ಸಂ.ಸ.ನಿಗೆ ತರಬೇತಿ ನೀಡುವ ಹೊಣೆ ಹೊತ್ತ ಹಿರಿಯ ಸಂಪಾದಕರು ಸಂ.ಸ. ಏನು ಮಾಡಿದ್ದಾನೆ ಅಥವಾ ಮಾಡುತ್ತಿದ್ದಾನೆ ಎಂಬುದನ್ನು ಗಮನಿಸುತ್ತಾರೆ. ಆ ಹಂತದಲ್ಲಿ ಸ್ವತಂತ್ರವಾಗಿ ಕಾರ್ಯ ನಿರ್ವಹಿಸುವ ಸಂ.ಸ.ನ ಸಾಮರ್ಥ್ಯವನ್ನು – ಅದಿನ್ನೂ ದೂರವಿದೆ – ಅಳೆಯುವುದಕ್ಕಿಂತಲೂ ಹೆಚ್ಚಾಗಿ ಸಂ.ಸ. ತಿದ್ದುವ ಕೆಲಸ ಮಾಡುವ ಅಥವಾ ಮಾಡದೆ ಇರುವ ಪ್ರತಿ ಹೆಜ್ಜೆಯಲ್ಲೂ, ತಿದ್ದಿ ಪರಿಷ್ಕರಿಸುವ ಅಭ್ಯಾಸದ ಬಗ್ಗೆ ಚರ್ಚಿಸುವುದು ಹಿರಿಯ ಸಂಪಾದಕರ ಉದ್ದೇಶವಾಗಿರುತ್ತದೆ. ಈ ಬದಲಾವಣೆಯನ್ನು ಸಂ.ಸ. ಮಾಡಿದ್ದು ಹೇಗೆ ಸರಿಯಾಗಿತ್ತು, ಇನ್ನೊಂದನ್ನು ಮಾಡಿದ್ದು ಹೇಗೆ ತಪ್ಪಾಗಿತ್ತು, ಸಂ.ಸ. ಏನು ಮಾಡಬೇಕಾಗಿತ್ತು, ಆದರೆ ಮಾಡಲಿಲ್ಲ, ಲೇಖಕರನ್ನು ಸಂ.ಸ ಏನು ಕೇಳಬೇಕಾಗಿತ್ತು ಇತ್ಯಾದಿ.

ಸಂ.ಸ. ಈಗ ನಿಯಮಿತವಾಗಿ ಸಹೋದ್ಯೋಗಿಗಳಿಗೆ ಕೆಲವೊಮ್ಮೆ ಕರಡಚ್ಚು ತಿದ್ದುವವನಾಗಿ, ಕೆಲವೊಮ್ಮೆ ಹಸ್ತಪ್ರತಿಯನ್ನು ಓದುವವನಾಗಿ ನೆರವಾಗುತ್ತಿದ್ದಾನೆ. ನಾವೆಣಿಸಿದಂತೆ ಸಂ.ಸ. ಚುರುಕ ಬುದ್ಧಿಯವನೂ ಶ್ರದ್ಧೆಯಿಂದ ಗಮನಿಸುವವನೂ ಆಗಿದ್ದರೆ, ಪಠ್ಯ ತಿದ್ದುವುದು ಮತ್ತು ಟೈಪ್‌ಸೆಟ್ಟಿಂಗ್‌ಗೆ ಪಠ್ಯವನ್ನು ಸಿದ್ಧಗೊಳಿಸುವುದಕ್ಕೆ (ಪಠ್ಯವನ್ನು ಸಿದ್ಧಗೊಳಿಸುವುದು, ಗುರುತು ಹಾಕುವುದು) ಸಂಬಂಧಿಸಿದಂತೆ ಕಾರ್ಯತಃ ತಿಳಿಯಬೇಕಾದ ಅನೇಕ ವಿಷಯಗಳನ್ನು ತಿಳಿದುಕೊಳ್ಳುತ್ತಾನೆ ಹಾಗೂ ಅಂತಹ ತಿಳಿವಳಿಕೆಯ ಅಗತ್ಯವನ್ನು ಮನಗಾಣುತ್ತಾನೆ. ಹಸ್ತಪ್ರತಿಯನ್ನು ಓದುವವನ ಕೆಲಸ ಮಾಡುತ್ತಿದ್ದರೆ ಸಂ.ಸ. 'ಪ್ಯಾರ' 'ದೊಡ್ಡಕ್ಷರಗಳು' ಪಂಕ್ತಿಯನ್ನು 'ಒಳಚಾಚು', 'ಚಾಚದೆ ಇರು', 'ಉಲ್ಲೇಖದ ಗುರುತು', 'ಉಲ್ಲೇಖದ ಗುರುತು ತೆಗೆ', 'ದಪ್ಪಕ್ಷರಗಳು', 'ಇಟ್ಯಾಲಿಕ್ಸ್', 'ಅರ್ಧವಿರಾಮ', 'ಅಡ್ಡಗೆರೆ' ಮುಂತಾದ ಮುದ್ರಣ ಸಂಕೇತಗಳಿಗೆ ಸಂಬಂಧಿಸಿದ ಮಾಹಿತಿ ಮತ್ತು ಸೂಚನೆಗಳನ್ನು ಕರಡಚ್ಚು ತಿದ್ದುವವರಿಗೆ ಹೇಳುತ್ತಾ ಹೋಗಬೇಕು. ಟೈಪಾದ ಪ್ರತಿಯಲ್ಲಿ ಮೊದಲೇ ಇದ್ದ ಸೂಚನೆಗಳನ್ನು ಮಾರ್ಪಡಿಸಿ ಅನೇಕ ಸಲ ಮುದ್ರಣ ಪ್ರತಿಯಲ್ಲಿ ಸೂಚನೆಗಳನ್ನು ತಿಳಿಸುವ ಸೂಕ್ತ ಸಂಕೇತಗಳನ್ನು ಬರೆದಿರುವುದನ್ನು ಸಂ.ಸ. ಗಮನಿಸುತ್ತಾನೆ. ಆಗಾಗ, ಸಂ.ಸ. ಟೈಪಾದ ಮೂಲ ಪ್ರತಿಯಲ್ಲಿನ ವಾಕ್ಯ ರಚನೆಗಳನ್ನು ವ್ಯಾಪಕವಾಗಿ ತಿದ್ದಿ ಮಾರ್ಪಡಿಸಿರುವುದನ್ನೂ, ಕೆಲವು ವಾಕ್ಯಗಳನ್ನು ಸೇರಿಸಿರುವುದನ್ನೂ, ಕೆಲವನ್ನು ಬಿಟ್ಟಿರುವುದನ್ನೂ ಸಹ ಗಮನಿಸುತ್ತಾನೆ. ಒಂದು ಟೈಪಾದ ಪ್ರತಿಯಲ್ಲಿ ಪ್ರಮುಖವಾಗಿ ಅಲ್ಲದಿದ್ದರೂ, ಇನ್ನೊಂದರಲ್ಲಿ ಅಥವಾ ಮಗುದೊಂದರಲ್ಲಿ ಹೆಚ್ಚು ನಿಶ್ಚಿತವಾಗಿ ಸಂಪಾದಕ/ಪಠ್ಯ ಸಂಪಾದಕನ ಅಷ್ಟೇನೂ ಬಚ್ಚಿಡದ ಕೈ ಸ್ಪಷ್ಟವಾಗಿ ಕಾಣುತ್ತದೆ.

ಒಂದು ಟೈಪಾದ ಪ್ರತಿ ಲೇಖಕನಿಂದ ಟೈಪ್‌ಸೆಟ್ಟರ್‌ಗೆ ನೇರವಾಗಿ ಏಕೆ ಹೋಗುವುದಿಲ್ಲ ಅಥವಾ ಅದನ್ನು ಲೇಖಕ ವರ್ಡ್ ಪ್ರಾಸೆಸರ್‌ನಲ್ಲಿ ತಯಾರಿಸಿದ್ದರೆ ಡಿಸ್ಕ್ ಅನ್ನು ನೇರವಾಗಿ ಫೋಟೊಸೆಟ್ಟರ್‌ಗೆ ಏಕೆ ಕಳಿಸುವುದಿಲ್ಲ ಎಂಬುದನ್ನು ಈಗ ಸಂ.ಸ. ಮನಗಂಡಿದ್ದಾನೆ. ಪಠ್ಯವನ್ನು ತಿದ್ದುವ ಹಾಗೂ ಮುದ್ರಣ ಸಂಕೇತಗಳನ್ನು ಗುರುತಿಸುವ ದೃಷ್ಟಿಗಳೆರಡರಿಂದಲೂ 'ಪಠ್ಯ'ವನ್ನು ಟೈಪ್‌ಸೆಟ್ಟಿಂಗ್‌ಗಾಗಿ 'ಸಿದ್ಧಪಡಿಸಬೇಕೆಂದು' ಸಂ.ಸ. ಈಗ ತಿಳಿದಿರುವುದೇ ಅಲ್ಲದೆ ಈ ಪ್ರಕ್ರಿಯೆಗಳು ಏನನ್ನು ಒಳಗೊಂಡಿವೆ ಎಂಬುದನ್ನೂ ತಿಳಿದಿದ್ದಾನೆ.

ಸಂ.ಸ. ತನ್ನ ಪರಿಶೀಲನೆಯ ಮೂಲಕ (ಕರಡಚ್ಚಿನೊಂದಿಗೆ ಮೂಲ ಪ್ರತಿಯನ್ನು ಹೋಲಿಸಿ) ಹಾಗೂ ಪ್ರಶ್ನೆಗಳನ್ನು ಕೇಳುವ ಮೂಲಕ ಮತ್ತು ತಾನು ನೆರವಾಗುತ್ತಿರುವ ಸಂಪಾದಕರುಗಳೊಂದಿಗೆ ಚರ್ಚಿಸುವ ಮೂಲಕ ಏನು ಅಗತ್ಯವಿದೆ ಹಾಗೂ ಇದು ಪಠ್ಯ ಮುದ್ರಣವಾಗಿ ಪರಿವರ್ತಿತವಾಗುವುದರ ಗುಣಮಟ್ಟದ ಮೇಲೆ ಏನು ಪರಿಣಾಮ ಉಂಟುಮಾಡುತ್ತದೆ ಎಂಬ ಬಗ್ಗೆ ಸಾಕಷ್ಟು ವಿಚಾರ ತಿಳಿದುಕೊಂಡಿರುತ್ತಾನೆ. ಪಠ್ಯವನ್ನು ಅಪೂರ್ಣವಾಗಿ ಅಥವಾ ಅದಕ್ಷತೆಯಿಂದ ಸಿದ್ಧಪಡಿಸುವುದರಿಂದ ಶ್ರಮ, ಸಮಯ ಮತ್ತು ಹಣ ಗಲೀಜು ಕೆಲಸಕ್ಕಾಗಿ

ವ್ಯಯವಾಗಿ ವಿಷಾದನೀಯ ಫಲಿತಾಂಶಗಳು ಉಂಟಾಗುವುದನ್ನೂ ಸಂ.ಸ. ಗಮನಿಸಿದ್ದಾನೆ. ಈಗಾಗಲೇ, ಹಸ್ತಪ್ರತಿಯನ್ನು ಓದುವ ಕೆಲಸ ಮಾಡುವಾಗಲೂ ಶೈಲಿಯಲ್ಲಿನ ಅಸಂಬದ್ಧತೆಗಳು ಹಾಗೂ ಭಾಷೆ ಮತ್ತು ವಸ್ತುವಿನಲ್ಲಿರುವ ತಪ್ಪುಗಳು ಮತ್ತು ಸಂದಿಗ್ಧಗಳನ್ನು ಕುರಿತೂ ಸಹ ಗಮನ ಸೆಳೆದಿರುತ್ತಾನೆ; ಕಾಗುಣಿತದ ಶೈಲಿಗಳಲ್ಲಿನ ವ್ಯತ್ಯಾಸಗಳನ್ನೂ ಪರಾಮರ್ಶೆಗಳು, ವಿಭಾಗಗಳು ಮತ್ತು ಉಪಶೀರ್ಷಿಕೆಗಳು ಹಾಗೂ ಅಡಿಟಿಪ್ಪಣಿಗಳಲ್ಲಿನ ದೋಷಗಳನ್ನೂ ಸಹ ಸಂ.ಸ. ಗುರುತಿಸಿದ್ದಾನೆ.

ಆದ್ದರಿಂದ ಈಗ ಸಂ.ಸ.ನಿಗೆ ಪಠ್ಯವನ್ನು ಪರಿಷ್ಕರಿಸುವ ಕಾರ್ಯವನ್ನು ಹಾಗೂ ಅನುಭವಿಯೊಬ್ಬರ ಮಾರ್ಗದರ್ಶನದಲ್ಲಿ ಕೆಲವು ಮೂಲಭೂತ ಮುದ್ರಣ ಸಂಕೇತಗಳ ಸೂಚನೆಗಳನ್ನು ಗುರುತಿಸುವ ಕಾರ್ಯವನ್ನು ವಹಿಸದೆ ಇರುವುದಕ್ಕೆ ಯಾವ ಕಾರಣವೂ ಇಲ್ಲ. ಈ ಸಮಯಕ್ಕೆ ಸಂ.ಸ. ಮುದ್ರಣ ಸಂಕೇತಗಳಿಗೆ ಸಂಬಂಧಿಸಿದ ಕೆಲವು ಮೂಲ ಪದಗಳು ಮತ್ತು ಅವುಗಳ ಸಂಕ್ಷಿಪ್ತ ರೂಪಗಳ – ಅಚ್ಚಿನ ಅಕ್ಷರ, ಅದರ ಗಾತ್ರ (ಪಾಯಿಂಟ್ ಸಿಸ್ಟಮ್) ದೊಡ್ಡಕ್ಷರಗಳು, ಇಟಾಲಿಕ್ಸ್, ದಪ್ಪಕ್ಷರಗಳು, ಇಂಡೆಂಟ್, ಗೇಜ್, ಎಮ್.ಎನ್. ಪೈಕ ಇತ್ಯಾದಿಗಳ – ಪರಿಚಯ ಹೊಂದಿರುತ್ತಾನೆ.

ಸಂ.ಸ.ನಿಗೆ ಮೊದಲು ಕೊಡುವ ಕೆಲವು ಕೆಲಸಗಳನ್ನು ಎಚ್ಚರಿಕೆಯಿಂದ ಆರಿಸಿ ಕೊಡಲಾಗುವುದು ಹಾಗೂ ಅವುಗಳನ್ನು ಜಾಗ್ರತೆಯಿಂದ ಗಮನಿಸಲಾಗುವುದು; ಇವು ವಿಷಯ – ಪ್ರತಿಪಾದನೆ ಮತ್ತು ವಸ್ತುವಿನ ದೃಷ್ಟಿಯಿಂದ ಈಗಾಗಲೇ ಉತ್ತಮ ರೂಪದಲ್ಲಿರುವ ಟೈಪಾದ ಹಸ್ತಪ್ರತಿಗಳಾಗಿರುತ್ತವೆ. ಲೇಖಕನೇ ಹಸ್ತಪ್ರತಿಯನ್ನು ಹೀಗೆ ಎಚ್ಚರಿಕೆಯಿಂದ ಬರೆದಿರಬಹುದು ಅಥವಾ ಒಬ್ಬ ಹಿರಿಯ ಸಂಪಾದಕರು ಪರಿಷ್ಕರಣೆಯ ಕೆಲಸವನ್ನು ಈಗಾಗಲೇ ಮಾಡಿರಬಹುದು. ಈ ಹಿರಿಯ ಸಂಪಾದಕರು ಸಂ.ಸ.ನ ಕೆಲಸ ಸಾಗುತ್ತಿದ್ದಂತೆ ಸಾಮಾನ್ಯವಾಗಿ ಅದನ್ನು ಪರಿಶೀಲಿಸುವ ಮತ್ತು ಸಮಾಲೋಚನೆ ಮತ್ತು ಸಲಹೆ ಕೊಡಲು ತಾವು ತಯಾರಾಗಿರುವ ಹೊಣೆಯನ್ನು ಬಹುಶಃ ಹೊಂದಿರುತ್ತಾರೆ.

'ಮೇಲ್ನೋಟದ ವಿವರ' ಎಂದು ಶ್ರೀ ದಾವಿಡರ್ ಏನನ್ನು ಕರೆದಿದ್ದಾರೋ – ಅದರ ಬಗ್ಗೆ ಕೆಲಸ ಮಾಡುತ್ತ ಹೋದಂತೆ ಸಂ.ಸ.ನ ಕಣ್ಣುಗಳು ಚುರುಕಾಗುತ್ತಾ ಹೋಗುತ್ತವೆ – ಅದನ್ನು ಒತ್ತಟ್ಟಿಗಿಟ್ಟು ಮೂಲಭೂತ ಭಾಷಾಜ್ಞಾನ ಮತ್ತು ಬೌದ್ಧಿಕ ಸಾಮರ್ಥ್ಯವಿರುವ ಸಂ.ಸ. ಬೆಳೆಸಿಕೊಳ್ಳಬೇಕಾದ ಪ್ರಮುಖ ಗುಣಗಳೆಂದರೆ ಸಮತೂಕದ ತೀರ್ಮಾನ ಹಾಗೂ ಲೇಖಕರ ಅಭಿವ್ಯಕ್ತಿಯ ಶೈಲಿಗಳನ್ನು ಗೌರವಿಸುವುದು. ನಾನು ಯಾವಾಗ ಕೈಹಾಕಬೇಕು ಮತ್ತು ಎಷ್ಟರಮಟ್ಟಿಗೆ ಲೇಖಕರ ನಿರ್ದಿಷ್ಟ ಸಮ್ಮತಿ ಇಲ್ಲದೆ ನಾನು ಏನನ್ನು ಮಾಡಬಾರದು ? ಈ ಭಾಗಕ್ಕೆ ಲೇಖಕರು ಅಥವಾ ಪ್ರವರ್ತಕ ಸಂಪಾದಕರು ಹೊಸದಾಗಿ ಗಮನ ನೀಡಬೇಕಾದ ಅಗತ್ಯವಿದೆಯೇ ? ಹಸ್ತಪ್ರತಿ ಸಂಗ್ರಾಹಕ/ಸಂಪಾದಕ ಲೇಖಕರ ಪಠ್ಯಕ್ಕೆ ಅನುದ್ದೇಶಪೂರ್ವಕವಾಗಿ ಏನಾದರೂ ಹಿಂಸೆ ಮಾಡಿದ್ದಾನೆಯೇ ಹಾಗೂ ಬೆದರಿದ

ಲೇಖಕರು ಆ ಬಗ್ಗೆ ತೆಪ್ಪಗಿದ್ದಾರೆಯೇ? ಪಟ್ಟಿ ಎಕ್ಸ್‌ವೈಜಡ್‌ನಲ್ಲಿ ಕೊಟ್ಟಿರುವ ಅಂಕಿಗಳು ಪಠ್ಯದಲ್ಲಿರುವ ಹೇಳಿಕೆಗೆ ಸಮಂಜಸವಾಗಿಲ್ಲದಂತೆ ಕಾಣುತ್ತಿಲ್ಲವೇ? ಅನುಬಂಧದ ಬಗ್ಗೆ ಹೇಳಿರುವುದನ್ನು, ತಿದ್ದುವಾಗ ಕೈಬಿಟ್ಟಿದ್ದರೂ ಅದು ಪುನಃ ಮುದ್ರಣ ಪ್ರತಿಯಲ್ಲಿ ಹೇಗೆ ಉಳಿದುಕೊಂಡಿದೆ? ಈ ಹೇಳಿಕೆಯನ್ನು ಬಿಟ್ಟ ಮಾತ್ರಕ್ಕೆ ಮುಖ್ಯವಾದದ್ದೇನಾದರೂ ನಷ್ಟವಾಗುವುದೇ? ಅನುಬಂಧವನ್ನು ಕೈಬಿಡುವುದರಿಂದ ಅದಕ್ಕೆ ಪೂರಕವಾಗಿ ಈ ಹಂತದಲ್ಲಿ ಏನನ್ನಾದರೂ ಸೇರಿಸಬೇಕೇ?

ಸಂ.ಸ. ಈಗ ಪೂರ್ಣ ಪ್ರಮಾಣದ ಸಂಪಾದಕನಾಗುವ ಹೆದ್ದಾರಿಯಲ್ಲಿ ಸಾಗಿದ್ದಾನೆ. ಅವನು ಬುದ್ಧಿವಂತನಾಗಿರುವುದರಿಂದಲೂ, ಚುರುಕಾಗಿರುವುದರಿಂದಲೂ ತನ್ನದೇ ಅಭಿಪ್ರಾಯಗಳನ್ನು ಹೊಂದದಿರಲಾರ ಹಾಗೂ ಕೃತಿಗಳ ಪರಿಷ್ಕರಣೆ ಕುರಿತು, ಅವುಗಳ ಯೋಗ್ಯತೆ ಮತ್ತು ಮಾರಾಟದ ಅರ್ಹತೆಗೆ ಸಂಬಂಧಿಸಿದಂತೆ ಅಭಿಪ್ರಾಯಗಳನ್ನೂ, ನಿರ್ಣಯಗಳನ್ನೂ ವ್ಯಕ್ತಪಡಿಸದೆ ಇರಲಾರ. ಹಸ್ತಪ್ರತಿಯ ಪ್ರಾರಂಭಿಕ ಪರಿಗಣನೆ ಮತ್ತು ಸಂಗ್ರಹಣೆ ನಡೆದ ಬಹುಕಾಲದ ನಂತರ ರೂಪುಗೊಂಡ ಮತ್ತು ವ್ಯಕ್ತಪಡಿಸಿದ ಅಭಿಪ್ರಾಯಗಳಾದರೂ ಇವು ಸಂಪಾದಕೀಯ ಅಂದಾಜುಗಳು.

ಸಂ.ಸ. ಈಗ ವಿಷಯವನ್ನು ಚೆನ್ನಾಗಿ ಗ್ರಹಿಸುವವನಾಗಿದ್ದಾನೆ ಹಾಗೂ ಸಮತೋಲನವನ್ನು ಹೊಂದಿದ್ದಾನೆ ಹಾಗೂ ಸಂಪೂರ್ಣವಾಗಿ ಸ್ವತಂತ್ರವಾಗಿ ಪರಿಷ್ಕರಣೆಯ ಕಾರ್ಯವೊಂದನ್ನು ನಿರ್ವಹಿಸಲು ಶಕ್ತನಾಗಿದ್ದಾನೆ ಎಂಬುದು ಬಹುಬೇಗ ಕಾಣುತ್ತದೆ. ಯಾವ ಮಿತಿಗಳಲ್ಲಿ ತಾನು ವೈಯಕ್ತಿಕ ನಿರ್ಣಯವನ್ನು ಅವಲಂಬಿಸಬಹುದು ಹಾಗೂ ಯಾವಾಗ ಹಿರಿಯ ಸಂಪಾದಕರೊಂದಿಗೆ ಅಥವಾ ಲೇಖಕರರೊಂದಿಗೆ ತಾನು ಸಮಾಲೋಚನೆ ಮಾಡಬೇಕು ಎಂಬ ಬಗ್ಗೆ ಸಂಪೂರ್ಣವಾಗಿ ತಿಳಿದಿದ್ದಾನೆ. ಸಂ.ಸ. ಗಳಿಸಿರುವ ವಿಶ್ವಾಸದ (ತನ್ನ ಸ್ವಂತದ್ದು ಹಾಗೂ ಸಂಸ್ಥೆಯ ಅಧಿಕಾರ ವರ್ಗದವರು ಅವನ ಮೇಲಿಟ್ಟಿರುವ) ಹೊಸ ಮಟ್ಟವನ್ನು ಗುರುತಿಸಲು ಅವನಿಗೀಗ ಹೊಸ ಹುದ್ದೆಯೊಂದನ್ನು ನೀಡಬೇಕಾದ ಅಗತ್ಯವಿದೆ. ಸಂ.ಸ.ನಿಗೆ ಸಹಾಯಕ ಸಂಪಾದಕ ಸ್ಥಾನಕ್ಕೆ ಬಡತಿ ನೀಡಲಾಗಿದೆ – ನಮ್ಮ ಸಂಕ್ಷಿಪ್ತ ಲಿಪಿಯಲ್ಲಿ ಸ.ಸಂ.

ಸಂಪಾದಕೀಯ ಕೆಲಸವನ್ನು ತಿಳಿದುಕೊಳ್ಳುವುದರ ಜೊತೆಗೆ, ಸ.ಸಂ. ಮುದ್ರಣ ವಿಭಾಗ ಮತ್ತು ಅಲ್ಲಿಯ ಸಹೋದ್ಯೋಗಿಗಳೊಂದಿಗೆ ಹೊಂದಿರುವ ಔಪಚಾರಿಕ ಮತ್ತು ಅನೌಪಚಾರಿಕ ಸಂಪರ್ಕಗಳ ಮೂಲಕ ಮುದ್ರಣ ಪ್ರಕ್ರಿಯೆಗಳ, ಅವುಗಳ ಸಾಧ್ಯತೆಗಳ ಮತ್ತು ಮಿತಿಗಳ ಬಗ್ಗೆ ಸ್ಥೂಲವಾದ ಪರಿಚಯ ಹೊಂದಿದ್ದಾನೆ. ಸ.ಸಂ. ಪ್ರಚಾರ ಮತ್ತು ಮಾರಾಟ ವಿಭಾಗಗಳ ಜನರೊಂದಿಗೂ ಸಂಪರ್ಕವಿಟ್ಟುಕೊಂಡಿದ್ದಾನೆ ಹಾಗೂ ಪುಸ್ತಕದ ಜಗತ್ತಿನಲ್ಲಿ ಏನಾಗುತ್ತಿದೆ, ಸಂಸ್ಥೆ ಮತ್ತು ಅದರ ಪುಸ್ತಕಗಳು ಹಾಗೂ ಇತರ ಪ್ರಕಾಶಕರ ಪುಸ್ತಕಗಳ ವ್ಯಾಪಾರ ಅಲ್ಲಿ ಹೇಗಿದೆ ಎಂಬ ಬಗ್ಗೆ ನಡೆಯುವ ಹರಟೆಗಳಲ್ಲಿ ನಿಯಮಿತವಾಗಿ ಸೇರುತ್ತಾನೆ.

ತೋರಿಕೆಗೆ ಅಡ್ಡಾದಿಡ್ಡಿಯಾದ ಇಂತಹ ಒಂದು ಮಾಹಿತಿ ವಿನಿಮಯ ಹಾಗೂ

ಜ್ಞಾನದ ವಿನಿಮಯವೂ ಸಹ ಕಾರ್ಖಾನೆಯಲ್ಲಿ ಜೋಡಣಾ ವಿಭಾಗದಲ್ಲಿ ಒಬ್ಬ ಒಂದು ಭಾಗವನ್ನು ಅದರ ಸ್ಥಾನದಲ್ಲಿಡುತ್ತಾನೆ, ಇನ್ನೊಬ್ಬ ಅದಕ್ಕೆ ಗಂಟುಗಳನ್ನು ಸಿಕ್ಕಿಸುತ್ತಾನೆ, ಮೂರನೆಯವನು ಅದಕ್ಕೆ ಸ್ಕ್ರೂಗಳನ್ನು ತಿರುಗಿಸುತ್ತಾನೆ ಮುಂತಾಗಿ ಆಯಾಯಾ ವ್ಯಕ್ತಿ ತನ್ನದಷ್ಟು ಕೆಲಸವನ್ನು ಮಾತ್ರ ಮಾಡುವ ಬಿಗಿಯಾದ ನೌಕರಶಾಹಿಯಂತಹ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲವೆಂದೇ ಹೇಳಬಹುದು. ಒಂದು ಉತ್ತಮ ಪ್ರಕಾಶನ ಸಂಸ್ಥೆಯಲ್ಲಿ ಒಂದಿಷ್ಟು ಪ್ರಿಯವಾದ ಹಾಹಾಕಾರ ಇರುವುದು ಅಪೇಕ್ಷಣೀಯ ಎಂದು ಡಾ. ಅದ್ವಾನಿ ಹೇಳಿರುವುದು ಇಲ್ಲಿ ನಿಶ್ಚಿತವಾಗಿಯೂ ಸಮಂಜಸವಾಗಿದೆ.

ಮೊದಲ ಕೆಲವು ತಿಂಗಳುಗಳಲ್ಲಿ ಅಥವಾ ಅದಕ್ಕೂ ಹೆಚ್ಚು ಕಾಲ, ಸ.ಸಂ. ಯಾವುದೇ ಪಾತ್ರವನ್ನು ವಹಿಸದ ಪ್ರಕ್ರಿಯೆಯ ಮೂಲಕ ಸಂಸ್ಥೆ ಪಡೆದುಕೊಂಡ ಹಸ್ತಪ್ರತಿಗಳ ಪಠ್ಯದ ಪರಿಷ್ಕರಣೆ ಹಾಗೂ ಮುದ್ರಣ ಪ್ರತಿಯಲ್ಲಿ ಗುರುತು ಹಾಕುವ ಕೆಲಸವನ್ನು ವಹಿಸಿಕೊಳ್ಳುತ್ತಾನೆ. ಆದರೆ ಈ ಕೆಲಸವನ್ನು ವಹಿಸಿದ ಸಮಯದಿಂದ ಸ.ಸಂ. ಆ ಹಸ್ತಪ್ರತಿಗಳ ಮತ್ತು ಅವುಗಳ ಲೇಖಕರ ಸಂಪೂರ್ಣ ಹೊಣೆ ಹೊತ್ತಿರುತ್ತಾನೆ. ಹಸ್ತಪ್ರತಿಯನ್ನು ಪಡೆದುಕೊಳ್ಳುವುದಕ್ಕೆ ಮೊದಲು ನಡೆದ ಚರ್ಚೆಯ ಸಮಯದಲ್ಲಿ ಕೃತಿಯನ್ನು ರೂಪಿಸುವ ಮತ್ತು ಪುನರ್ರಚಿಸುವ, ಅದರ ಉದ್ದವನ್ನು ಹೊಂದಿಸುವ, ಅಧ್ಯಾಯಗಳನ್ನು ಪುನಃ ಬರೆಸುವ ಅಥವಾ ಪುನರ್ರಚಿಸುವ ಅಥವಾ ಒಂದಕ್ಕೊಂದು ಸಂಬಂಧಿಸಿದಂತೆ ಅಧ್ಯಾಯಗಳನ್ನು ಹೊಂದಿಸುವ ಮುಂತಾದ ಸಂಪಾದಕೀಯ ಕೆಲಸಗಳನ್ನು ಸಾಕಷ್ಟು ಮಾಡಿರಲಿಕ್ಕೂ ಉಂಟು. ಅಥವಾ ಕೃತಿಯ ಮುದ್ರಣ ಪ್ರತಿಯನ್ನು ಸಿದ್ಧಪಡಿಸುವಾಗ ಇವೆಲ್ಲವನ್ನೂ ಅಥವಾ ಇವುಗಳಲ್ಲಿ ಕೆಲವನ್ನು ಮಾಡಲಾಗುವುದು ಎಂಬ ಬಗ್ಗೆ ಮಾತ್ರ ಒಪ್ಪಿಕೊಂಡಿರಲೂಬಹುದು. ಅಥವಾ ಕೃತಿಯನ್ನು ಒಪ್ಪಿಸಿದ ರೀತಿಯಲ್ಲೇ ಪ್ರಕಟಿಸುವುದಕ್ಕೆ ಸಮ್ಮತಿಸಿರಲೂಬಹುದು. ಇದು ಏನೇ ಇರಲಿ, ಟೈಪ್‌ಸೆಟ್ಟಿಂಗ್ ಪ್ರಾರಂಭವಾಗುವುದಕ್ಕೆ ಮೊದಲು ಸ.ಸಂ. ಮಾಡಬೇಕಾದ ಕೆಲಸ ಯಾವಾಗಲೂ ಬೇಕಾದಷ್ಟಿರುತ್ತದೆ.

ಹಸ್ತಪ್ರತಿ ಸಂಗ್ರಾಹಕ ಸಂಪಾದಕ/ಪ್ರವರ್ತಕ ಸಂಪಾದಕನ ಪಾತ್ರ, ನಿಲುವು, ಅರ್ಹತೆಗಳು ಮತ್ತು ಕಾರ್ಯವ್ಯಾಪ್ತಿಯನ್ನು ಈ ಲೇಖನಗಳ ಸಂಗ್ರಹಕ್ಕೆ ಡಾ. ಅದ್ವಾನಿ ಅವರು ಬರೆದಿರುವ ಲೇಖನದಲ್ಲಿ ಪರಿಣಾಮಕಾರಿಯಾಗಿ ವಿವರಿಸಲಾಗಿದೆ. ಈ ಸಂಪಾದಕ ಅರ್ಧ ಡಜನ್ ಮತ್ತು ಅದಕ್ಕೂ ಹೆಚ್ಚು ಪ್ರಕಾಶನ ಸಲಹೆಗಳನ್ನು ಸಕ್ರಿಯವಾಗಿ ಗಮನಿಸುತ್ತಾ ಒಂದು ಡಜನ್ ಮತ್ತು ಅದಕ್ಕೂ ಹೆಚ್ಚು ಹಸ್ತಪ್ರತಿಗಳನ್ನು-ಈ ಪೈಕಿ ಭರವಸೆ ತೋರುವ ಹಸ್ತಪ್ರತಿಗಳನ್ನು ವಿವರವಾಗಿ – ಪರಿಶೀಲಿಸಬೇಕಾಗಿದ್ದು, ಅನೇಕ ಸ್ಥಳಗಳಿಗೆ ಹೋಗಬೇಕಾಗಿದ್ದು, ಅನೇಕಾನೇಕ ನಿಯತಕಾಲಿಕಗಳು ಮತ್ತು ವೃತ್ತಪತ್ರಿಕೆಗಳ ಮೇಲೆ ಕಣ್ಣಾಡಿಸಬೇಕಾಗಿದ್ದು, ಪ್ರಕಾಶನ ಸಲಹೆಯ ಮೂಲ ಯೋಗ್ಯತೆ ಮತ್ತು ಆಕರ್ಷಣೆಯ ಬಗ್ಗೆ ಒಮ್ಮೆ ಮನವರಿಕೆಯಾದರೆ, ಪ್ರತಿ ಪ್ರಕರಣದಲ್ಲೂ ಸ.ಸಂ. ಲೇಖಕನ ಸಹಯೋಗದೊಂದಿಗೆ

ಅಥವಾ ಲೇಖಕ ನಂತರ ಪರಿಶೀಲಿಸಿ ಒಪ್ಪುವುದಕ್ಕೆ ಅವಕಾಶ ಕಲ್ಪಿಸಿ, ತನ್ನಷ್ಟಕ್ಕೆ ನಿರ್ವಹಿಸಬೇಕಾದ ಸಂಪಾದಕೀಯ ಕೆಲಸದ ಸ್ಥೂಲ ಅಂದಾಜನ್ನು ಮಾತ್ರ ಮಾಡಬೇಕು. ಪ್ರವರ್ತಕ ಸಂಪಾದಕ ಉದ್ದೇಶಿತ ಪುಸ್ತಕದ ಸ್ವರೂಪ, ಪುಸ್ತಕ ತನ್ನ ಗುರಿಯಾಗಿ ಹೊಂದಿರುವ ಓದುಗವರ್ಗ, ತನ್ನ ಅಂತಿಮ ಹಸ್ತಪ್ರತಿಯನ್ನು ಕೊಡುವುದಕ್ಕೆ ಮೊದಲು ತಿದ್ದಿ ಪುನಃ ಬರೆಯುವುದು, ಕತ್ತರಿಸುವುದು, ಹೊಸದಾಗಿ ಸೇರಿಸುವುದು ಮುಂತಾದವುಗಳಿಗೆ ಸಂಬಂಧಿಸಿದಂತೆ ಲೇಖಕ ಮಾಡಬೇಕಾದ್ದೇನು ಹಾಗೂ ಅಗತ್ಯವಾಗಬಹುದಾದ ಪರಿಷ್ಕರಣೆಯ ರೀತಿ ಮತ್ತು ವ್ಯಾಪ್ತಿ ಹಾಗೂ ಅಂತಿಮ ಮುದ್ರಣ ಪ್ರತಿಯನ್ನು ಮುದ್ರಣ ವಿಭಾಗಕ್ಕೆ ಯಾವಾಗ ಕಳಿಸಬೇಕು ಎಂಬ ಬಗ್ಗೆ ಸ್ಥೂಲವಾಗಿ ಸೂಚನೆ ಕೊಡುತ್ತಾನೆ.

ತನಗೆ ವಹಿಸಿದ ಹಸ್ತಪ್ರತಿಯ ಪರಿಷ್ಕರಣೆ ಬಗ್ಗೆ ಸ.ಸಂ. ಮಾಡುವ ಮೊದಲ ಕೆಲಸವೆಂದರೆ, ಶ್ರೀ ದಾವಿಡರ್ ಅವರ ಶಿಫಾರಸನ್ನು ಅನುಸರಿಸಿ ಕೃತಿಯ ಸಾಮಾನ್ಯ ಸ್ವರೂಪ, ಬರೆವಣಿಗೆಯ ಗುಣಮಟ್ಟದ ಸಂವೇದನೆ ಹಾಗೂ ಲೇಖಕರ ಶೈಲಿಯ ಬಗ್ಗೆ ತಿಳಿದುಕೊಳ್ಳಲು ಹಸ್ತಪ್ರತಿಯನ್ನು ಬಹಳ ಬೇಗ ಓದಿ, ಅಲ್ಲಲ್ಲಿ ವಿವರವನ್ನು ಗ್ರಹಿಸುವುದೇ ಆಗಿದೆ. ಸ.ಸಂ. ಪರಿಷ್ಕರಣೆಯ ಸಮಯದಲ್ಲಿ ವಿಶೇಷ ಗಮನ ನೀಡಬೇಕಾದ ಯಾವುದೇ ಲಕ್ಷಣಗಳನ್ನು ಗಮನಿಸುತ್ತಾನೆ ಹಾಗೂ ಪರಾಮರ್ಶೆಯ ಮೂಲಗಳನ್ನು ಅಥವಾ ಬಾಹ್ಯ ಪರಿಣತಿಯ ಅಗತ್ಯಗಳನ್ನು ಮತ್ತು ಮುದ್ರಣಕ್ಕೆ ಬೇಕಾದ ವಿಶೇಷ ಸಾಮಗ್ರಿ ಅಥವಾ ಸೌಲಭ್ಯಗಳನ್ನು ಗಮನಕ್ಕೆ ತಂದುಕೊಳ್ಳುತ್ತಾನೆ. ಗಣಿತದ ಚಿಹ್ನೆಗಳು ಮತ್ತು ಸಂಕೇತಗಳು, ದೊಡ್ಡ ಗಾತ್ರದ ಪಟ್ಟಿಗಳು,ರೇಖಾ ನಕ್ಷೆಗಳು, ಒತ್ತು ಚಿಹ್ನೆಗಳು, ಅಕ್ಷರಗಳು, ಬಣ್ಣದ ಬಳಕೆ, ವಿವಿಧ ಭಾಷಾ ಪ್ರತಿಗಳ ಬಳಕೆ, (ಭಾರತೀಯ ತತ್ವಶಾಸ್ತ್ರದ, ಧಾರ್ಮಿಕ ಮತ್ತು ಚಾರಿತ್ರಿಕ ಕೃತಿಗಳಲ್ಲಿ ಆಗಾಗ ಕಂಡುಬರುವಂತಹವು) – ಇವುಗಳನ್ನು ಉದಾಹರಣೆಗಳಾಗಿ ನೀಡಬಹುದು. ಟೈಪ್‌ಸೆಟ್ಟಿಂಗ್ ಮತ್ತು ಪುಟಗಳ ರೂಪಣೆಯಲ್ಲಿ ಗರಿಷ್ಠ ಅನುಕೂಲ ಮತ್ತು ಮಿತವ್ಯಯ ಉಂಟಾಗುವ ರೀತಿಯಲ್ಲಿ ಸಾಧ್ಯವಾದಷ್ಟೂ ಸಾಮಾನ್ಯ ಸಾಮಗ್ರಿಯನ್ನು ಬಳಸಿ ಹಾಗೂ ದುಬಾರಿಯಾದ ವಿಶೇಷ ಸೌಲಭ್ಯಗಳನ್ನು ಕನಿಷ್ಠ ಪ್ರಮಾಣದಲ್ಲಿ ಬಳಸಿ ಈ ಎಲ್ಲ ಅಂಶಗಳನ್ನು ಕೌಶಲ್ಯದಿಂದ ನಿರ್ವಹಿಸುವುದು ಸ.ಸಂ.ನ ಜವಾಬ್ದಾರಿಯ ಅಂಗವಾಗಿರುತ್ತದೆ. ಮುದ್ರಣಕ್ಕೆ ಅನುವು ಮಾಡಿಕೊಡುವ ಮತ್ತು ವೆಚ್ಚವನ್ನು ತಗ್ಗಿಸುವ ಈ ಜವಾಬ್ದಾರಿಯ ದೃಷ್ಟಿಯಿಂದಲೇ ಕೆಲವು ಸಂಸ್ಥೆಗಳಲ್ಲಿ ಮುದ್ರಣ ಮ್ಯಾನೇಜರ್‌ನ ನಿಯಂತ್ರಣದಲ್ಲಿ ಮುದ್ರಣ ಕಾರ್ಯಭಾರದಂತೆ ಪಠ್ಯ ಪರಿಷ್ಕರಣೆಯನ್ನು ನಡೆಸಲಾಗುವುದು.

ಆದರೆ ನಮ್ಮ ಸ.ಸಂ. ಬಹಳಷ್ಟು ಕೆಲಸ ಮಾಡುತ್ತಿದ್ದಾನೆ. ಸ.ಸಂ. ಹಸ್ತಪ್ರತಿಯ ಪ್ರತಿಯೊಂದು ಪದವನ್ನೂ, ವಾಕ್ಯವನ್ನೂ, ಪ್ಯಾರಾವನ್ನೂ, ವಿಭಾಗವನ್ನೂ, ಅಧ್ಯಾಯವನ್ನೂ ಬಿಡಿಬಿಡಿಯಾಗಿ ಪರಿಶೀಲಿಸುತ್ತಾ ಅದರ ವೃತ್ತಾಂತದ ಬೆಳವಣಿಗೆಯ ಸೂತ್ರವನ್ನು ಹಿಡಿದು ಸಾಗುತ್ತಾ, ವ್ಯಾಖ್ಯಾನ ಅಥವಾ ವೃತ್ತಾಂತದ ಸರಾಗ ಮತ್ತು ತರ್ಕಬದ್ಧ ಹರಿವಿನಲ್ಲಿ ಅಡೆತಡೆಗಳು ಅಥವಾ ಜಟಿಲವಾದ

ಗಂಟುಗಳಿವೆಯೇನೋ ಎಂದು ಗಮನಿಸುತ್ತಾ, ಲೇಖಕರ ಚೌಕಟ್ಟಿನಲ್ಲಿ ಹಾಗೂ ಸಾಧ್ಯವಾದಷ್ಟೂ ಮಟ್ಟಿಗೆ ಆತನ/ಆಕೆಯ ಮಾತುಗಳಲ್ಲೇ ಬರೆವಣಿಗೆಯನ್ನು ಸರಿಪಡಿಸುವ ಕಾರ್ಯಕ್ಕೆ ಮಾರ್ಗೋಪಾಯಗಳನ್ನು ಹುಡುಕುತ್ತಿರುತ್ತಾನೆ. ವ್ಯಾಖ್ಯಾನ ಅಥವಾ ವೃತ್ತಾಂತ ಸಾಗುತ್ತಿದ್ದಂತೆ ಕೆಲವು ಕಡೆ ಸ.ಸಂ. ತಾನು ಒಂದು ಬದಲಾವಣೆಯನ್ನು ಅಥವಾ ಅನೇಕ ಸಾಧ್ಯ ಬದಲಾವಣೆಗಳಲ್ಲಿ ಆಯ್ಕೆಯನ್ನು ಸಲಹೆ ಮಾಡಬಹುದಲ್ಲ ಎನಿಸಬಹುದಾದರೂ, ಅವುಗಳಲ್ಲಿ ಯಾವುದಾದರೂ ಸೂಕ್ತವಿದ್ದ ಪಕ್ಷದಲ್ಲಿ ಯಾವುದು ಸೂಕ್ತ ಎಂದು ಲೇಖಕ ಮಾತ್ರ ನಿರ್ಧರಿಸಬಹುದು; ಇತರ ಪ್ರಕರಣಗಳಲ್ಲಿ, ಸ.ಸಂ. ಬದಲಾವಣೆಯನ್ನು ಸಲಹೆ ಮಾಡದೆ ಇರಬಹುದಾದರೂ ಒಂದು ಸಂದಿಗ್ಧತೆಯನ್ನು ಅಥವಾ ಅಸ್ಪಷ್ಟವಾದ ಭಾಗ ಅಥವಾ ವಾಕ್ಯವನ್ನು ಸೂಚಿಸಿ ಅದನ್ನು ಪುನಃ ಬರೆಯುವಂತೆ ಲೇಖಕರನ್ನು ಕೋರಬಹುದು. ಇದಕ್ಕೂ ಕಟುವಾದದ್ದೆಂದರೆ, ಸ.ಸಂ. ಜಾಗರೂಕತೆಯಿಂದ ಹಸ್ತಪ್ರತಿಯನ್ನು ಓದಿರುವುದರಿಂದ ಅನಗತ್ಯ ಪುನರುಕ್ತಿಗಳು ಅಥವಾ ವಾದಸರಣಿಯಲ್ಲಿ ಕೊರತೆಗಳು ಕಾಣಿಸಿಕೊಳ್ಳಬಹುದು. ಈ ಕೊರತೆಗಳನ್ನು ತುಂಬಬೇಕಾಗುತ್ತದೆ ಹಾಗೂ ವಾಸ್ತವ ಜೀವನದ ಉದಾಹರಣೆಗಳಿಂದ ಕೃತಿಯ ವಸ್ತುವನ್ನು ಕೆಲವೆಡೆ ಬಲಪಡಿಸಬೇಕಾದ ಅಗತ್ಯವೂ ಉಂಟಾಗುತ್ತದೆ.

ಸ.ಸಂ.ನ ಪ್ರಗತಿಯ ಈ ಹಂತದಲ್ಲಿ, ಸಂಪಾದಕ – ಲೇಖಕನ ನಡುವಣ ಸಂಬಂಧಗಳ ಬಗ್ಗೆ ಶ್ರೀ ದಯಾಳ್ ಅವರು ಹೇಳಿರುವ ಎಲ್ಲ ಜಾಣ ಮಾತುಗಳಿಗೆ ಸ.ಸಂ. ಲಕ್ಷ್ಯ ಕೊಡಬೇಕಾಗುತ್ತದೆ. ಪ್ರೇರೇಪಕ ಸಂಪಾದಕ ಲೇಖಕನೊಂದಿಗೆ ಹೊಂದಿದ ವಿಶ್ವಾಸ, ಸಂಸ್ಥೆಯ ಬಗ್ಗೆ ಉಂಟುಮಾಡಿದ ಸೌಹಾರ್ದ ಭಾವನೆಯನ್ನು ಸ.ಸಂ. ಬೆಳೆಸಬೇಕು. ಲೇಖಕರ ಬಗ್ಗೆ, ಅವರ ಸಾಮರ್ಥ್ಯ ಮತ್ತು ಅವರ ಪಾಂಡಿತ್ಯದ ಬಗ್ಗೆ ಹೊಂದಬೇಕಾದ ಗೌರವವನ್ನು ಸಂಪಾದಕ ತನ್ನ ಆತ್ಮಗೌರವ, ಘನತೆಯೊಂದಿಗೆ ಸಮತೋಲನಗೊಳಿಸಬೇಕು.

ಒಂದು ಹಸ್ತಪ್ರತಿಯನ್ನು ಪರಿಷ್ಕರಿಸುವಾಗ ಒಬ್ಬ ಸಂಪಾದಕ ಅದನ್ನು ಎಷ್ಟು ಸಲ ಓದಬೇಕು ಹಾಗೂ ಪ್ರತಿಸಲ ಓದುವಾಗಲೂ ಏನನ್ನು ಗಮನಿಸಬೇಕು, ಏನನ್ನು ಮಾಡಬೇಕು ಎಂಬ ಬಗ್ಗೆ ಶ್ರೀ ದಾವಿಡಾರ್ ಅವರು ತಮ್ಮ ಲೇಖನದಲ್ಲಿ ಬರೆದಿದ್ದಾರೆ. ಈ ಬಗ್ಗೆ ಯಾವುದೇ ಬಿಗಿ ನಿಯಮಗಳು ಅಥವಾ ನಿರ್ದಿಷ್ಟ ವಿಧಾನಗಳು ಇಲ್ಲ ಹಾಗೂ ಇರಬೇಕಾಗಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಸಂಪಾದಕನ ಸಾಮರ್ಥ್ಯ, ಅನುಭವ ಮತ್ತು ಮನೋಧರ್ಮ ಹಾಗೂ ಪ್ರತಿ ಕೆಲಸದಲ್ಲಿ ಪರಿಷ್ಕರಿಸಬೇಕಾದ ಸಾಮಗ್ರಿಯ ಸ್ವರೂಪ ಹಾಗೂ ಪರಿಷ್ಕರಣೆಯ ಮಟ್ಟದ ಅಗತ್ಯವನ್ನು-ಹಗುರ, ಸಾಧಾರಣ ಅಥವಾ ಭಾರಿ – ಅವಲಂಬಿಸಿ, ಪ್ರತಿ ಸಂಪಾದಕ ತನ್ನ ಸಂಪಾದಕೀಯ ಹೊಣೆಗಳನ್ನು ನಿರ್ವಹಿಸಲು ತನ್ನದೇ ವಿಧಾನವನ್ನು ರೂಪಿಸಿಕೊಳ್ಳುತ್ತಾನೆ. ಮತ್ತೊಬ್ಬ ಸಂಪಾದಕ/ಪತ್ಯ ಸಂಪಾದಕ ಈ ಮೊದಲೇ ಮಾಡಿದ ಸಂಪಾದಕೀಯ ಕೆಲಸ ಅಥವಾ ನಂತರ ಮಾಡಲಿರುವ ಕೆಲಸವೂ

ವ್ಯತ್ಯಾಸವನ್ನುಂಟುಮಾಡುತ್ತದೆ. ಹಸ್ತಪ್ರತಿಯನ್ನು ಪ್ರತಿಸಲವೂ ಒಬ್ಬನೇ ವ್ಯಕ್ತಿ ಓದಬೇಕೆಂದೇನೂ ಇಲ್ಲ.

ಒಬ್ಬ ಸಂ.ಸ.ನಂತೆ, ಒಬ್ಬ ಸ.ಸಂ.ನೂ ಮೂಲ ವಿದ್ಯಾರ್ಹತೆಯ ದೃಷ್ಟಿಯಿಂದ ವಿಚಾರಗಳಲ್ಲಿ ಹಾಗೂ ಲಿಖಿತ ರೂಪದಲ್ಲಿ ಅವುಗಳ ಅಭಿವ್ಯಕ್ತಿಯಲ್ಲಿ ಆಸಕ್ತಿ ಹೊಂದಿದವನು. ಆದ್ದರಿಂದ ಸ.ಸಂ.ನೂ ತಾನು ಕೆಲಸ ಮಾಡುತ್ತಿರುವ ಕೃತಿಗಳ ಬಗ್ಗೆ ತಟಸ್ಥ ನಿಲುವನ್ನು ಹೊಂದಲಾರ. ತನಗೆ ಆಸಕ್ತಿ ಇಲ್ಲದಂತಹ ಹಸ್ತಪ್ರತಿಗಳನ್ನು ಕುರಿತಂತೆ ಕೆಲಸ ಮಾಡಬೇಕೆಂದು ಸ.ಸಂ.ನಿಗೆ ಹೇಳಲಾಗುತ್ತದೆ. ಸಾಧ್ಯವಿರುವ ಅತ್ಯಂತ ಕೆಟ್ಟ ಪ್ರಕರಣವೊಂದರಲ್ಲಿ, ಸ.ಸಂ. ತನಗೆ ಒಂದಿಷ್ಟೂ ರುಚಿಸದ ಹಾಗೂ ತೀವ್ರವಾಗಿ ತಾನು ಆಕ್ಷೇಪಿಸುವ ಮತ್ತು ನಿಜವಾಗಿಯೂ ಪ್ರಕಟಣೆಗೆ ಅರ್ಹವಲ್ಲ ಎಂದು ತಾನು ಭಾವಿಸಿದ ಹಸ್ತಪ್ರತಿಯನ್ನು ಕುರಿತು ಕೆಲಸ ಮಾಡಬೇಕಾಗುತ್ತದೆ. ವೃತ್ತಿಪರಿಣತನಾದ ನಮ್ಮ ಸ.ಸಂ. ಕರ್ತವ್ಯಪರನಾಗಿ ಹಸ್ತಪ್ರತಿಯ ಕಾರ್ಯವನ್ನು ಕೈಗೊಂಡರೂ ಹಾಗೂ ತನ್ನಿಂದ ಸಾಧ್ಯವಾದಷ್ಟು ಅತ್ಯುತ್ತಮವಾಗಿ ಈ ಕೆಲಸವನ್ನು ಮಾಡಿದರೂ ಹಸ್ತಪ್ರತಿಯ ಯೋಗ್ಯತೆ, ವಸ್ತು, ಉಪಯೋಗ ಮತ್ತು ವಾಣಿಜ್ಯಕ ಸಾಧ್ಯತೆ – ಅದರ ನೈತಿಕತೆಯನ್ನು ಸಹ – ಕುರಿತಂತೆ ತನ್ನ ವೈಯಕ್ತಿಕ ನಿರ್ಣಯವನ್ನು ಸ.ಸಂ. ನಿಶ್ಚಿತವಾಗಿಯೂ ಮುಚ್ಚಿಡುವುದಿಲ್ಲ ಹಾಗೂ ಪರಿಸ್ಥಿತಿಯ ಅಗತ್ಯ ಮತ್ತು ಅವಕಾಶಕ್ಕೆ ತಕ್ಕಂತೆ ಔಪಚಾರಿಕವಾಗಿ ಅಥವಾ ಅನೌಪಚಾರಿಕವಾಗಿ ಕೃತಿಯ ಮೌಲ್ಯಮಾಪನವನ್ನು ವ್ಯಕ್ತಪಡಿಸಲು ಹಿಂಜರಿಯುವುದಿಲ್ಲ.

ತಿಂಗಳುಗಳು ಕಳೆದಂತೆ, ಸ.ಸಂ. ತಾನು ವೈಯಕ್ತಿಕವಾಗಿ ನಿರ್ವಹಿಸುತ್ತಿರುವ ಹಸ್ತಪ್ರತಿಗಳನ್ನೇ ಅಲ್ಲದೆ ತನ್ನ ಸಂಸ್ಥೆ ವಹಿಸಿಕೊಂಡಿರುವ ಹಸ್ತಪ್ರತಿಗಳನ್ನು ಮತ್ತು ಇತರ ಪ್ರಕಾಶಕರು ಹೊರತಂದಿರುವ ಪುಸ್ತಕಗಳನ್ನು ಸಹ ಚಿಕಿತ್ಸಕ ದೃಷ್ಟಿಯಿಂದ ಪರಿಶೀಲಿಸುತ್ತಾನೆ. ಪ್ರಕಾಶಕನ ಕಣ್ಣು ಮತ್ತು ಹುಟ್ಟುಬುದ್ಧಿಯಿಂದ ಸ.ಸಂ. ಅವುಗಳನ್ನು, ಅವುಗಳ ವಾಣಿಜ್ಯಕ ಯಶಸ್ಸು ಅಥವಾ ವೈಫಲ್ಯ – ನಿಜವಾದ್ದು ಅಥವಾ ನಿರೀಕ್ಷಿಸಿದ್ದು – ಸೇರಿದಂತೆ, ಗಮನಿಸುತ್ತಾನೆ. ಪುಸ್ತಕಗಳ ವಿಮರ್ಶೆಗಳ ಬಗ್ಗೆ, ವೈಯಕ್ತಿಕವಾಗಿ ಅತ್ಯಲ್ಪವಾದ ನೇರ ಆಸಕ್ತಿ ಇರುವ ವಿಷಯಗಳ ವಿಮರ್ಶೆಗಳೂ ಸೇರಿದಂತೆ, ಸ.ಸಂ. ಹೆಚ್ಚು ಹೆಚ್ಚು ಆಸಕ್ತಿ ತೋರಿಸುತ್ತಾನೆ. ಸಮಾಜದಲ್ಲಿ ಮತ್ತು ಮಾಧ್ಯಮಗಳಲ್ಲಿ ಪ್ರತಿಬಿಂಬಿತವಾಗುವ ಹಾಲಿ ಕಾಳಜಿಗಳು ಹಾಗೂ ಪ್ರಕಟವಾಗುತ್ತಿರುವ, ಗಮನಿಸಲಾಗುತ್ತಿರುವ ಮತ್ತು ಮಾರಾಟವಾಗುತ್ತಿರುವ ಪುಸ್ತಕಗಳ ವಿಷಯಗಳ ನಡುವಣ ಪರಸ್ಪರ ಸಂಬಂಧವನ್ನೂ ಆತ ಗಮನಿಸುತ್ತಿರುತ್ತಾನೆ. ಸ.ಸಂ.ನ ಬುದ್ಧಿ ಹೀಗೆ ಕೆಲಸ ಮಾಡುತ್ತಿರುವಾಗ, ಆತ ತನ್ನ ಸಂಸ್ಥೆಯೊಳಗೇ ಪ್ರಕಟಣೆಗೆ ಏನನ್ನು ಒಪ್ಪಿಕೊಳ್ಳಲಾಗಿದೆ ಎಂಬ ಬಗ್ಗೆ ಮಾತ್ರವಲ್ಲದೆ ಏನನ್ನು ಪ್ರಕಟಿಸಬೇಕು ಮತ್ತು ಅವುಗಳು ಎಲ್ಲಿ ಲಭಿಸುತ್ತವೆ ಎಂಬ ಬಗ್ಗೆಯೂ ತನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿರುತ್ತಾನೆ.

ಸ.ಸಂ. ತೋರಿಸಿದ ಉತ್ಸಾಹದಿಂದ ಉತ್ತೇಜನಗೊಂಡ ನಿರ್ವಾಹಕ ಸಂಪಾದಕರು ಪೂರ್ವಭಾವಿ ಪರಿಶೀಲನೆ ಮತ್ತು ಅಭಿಪ್ರಾಯಕ್ಕಾಗಿ ಪಡೆದುಕೊಂಡಿರುವ

ಹಸ್ತಪ್ರತಿಯನ್ನು ಕೆಲವು ಸಂದರ್ಭಗಳಲ್ಲಿ ಸ.ಸಂ.ಗೆ ಕೊಟ್ಟಿದ್ದಾರೆ. ಸ.ಸಂ.ರ ಸಮತೋಲನದ ಪರಿಶೀಲನಾ ವರದಿಗಳು ಮತ್ತು ಶಿಫಾರ್ಸುಗಳು ನಿರ್ವಾಹಕ ಸಂಪಾದಕ ಅಥವಾ ಪ್ರಕಾಶನ ನಿರ್ವಾಹಕರ – ಅವರನ್ನು ಹೇಗೇ ಕರೆಯಲಿ – ಮನಸ್ಸಿಗೆ ನಾಟಿದ್ದು ಸ.ಸಂ. ಈಗ ಕೃತಿ ಸಂಗ್ರಾಹಕ ಸಂಪಾದಕನ ಹುದ್ದೆಗೆ ಬಡತಿ ಹೊಂದುವುದಕ್ಕೆ ಅರ್ಹನಾಗಿದ್ದಾನೆ ಎಂಬುದು ಅವರಿಗೆ ಮನದಟ್ಟಾಗುತ್ತದೆ. ಕೃತಿ ಸಂಗ್ರಾಹಕ ಸಂಪಾದಕನ ಪಾತ್ರ ಮತ್ತು ಕಾರ್ಯಭಾರದ ಬಗ್ಗೆ ಡಾ. ಅದ್ವಾನಿ ಅವರು ಈ ಪುಸ್ತಕದ ಎರಡನೆಯ ಲೇಖನದಲ್ಲಿ ವಿವರವಾಗಿ ಬರೆದಿದ್ದಾರೆ. ಆದರೆ ನಾನು ಈ ಲೇಖನದ ಉಳಿದ ಭಾಗದಲ್ಲಿ ಈ ವ್ಯಕ್ತಿಯನ್ನು 'ಸಂಪಾದಕ' ಎಂದೇ ಕರೆಯುತ್ತೇನೆ.

ಆದರೆ ನಾನು ಇದೀಗ ಬರೆದಿರುವುದನ್ನು ಸ್ವಲ್ಪ ಮಾರ್ಪಡಿಸಬೇಕಾಗಿದೆ ಅಥವಾ ವಿಶದೀಕರಿಸಬೇಕಾಗಿದೆ. ಡಾ. ಅದ್ವಾನಿ ಅವರು ವರ್ಣಿಸಿರುವ ವ್ಯಕ್ತಿ ಸಾಮಾನ್ಯ ಸಂಗ್ರಾಹಕ ಸಂಪಾದಕರಿಗಿಂತ ಎರಡಲ್ಲದಿದ್ದರೂ ಒಂದು ಮೆಟ್ಟಿಲು ಮೇಲಿರುವವರು. ಡಾ. ಅದ್ವಾನಿ ಅವರು ಈ ವ್ಯಕ್ತಿಗೆ ನೀಡಿರುವ ವಿದ್ಯಾರ್ಹತೆಗಳು ಮತ್ತು ಅಧಿಕಾರಗಳಿಂದ ಈ ವ್ಯಕ್ತಿಗೆ ನಾನು ಸಂಪಾದಕೀಯ ಅಥವಾ ಪ್ರಕಾಶನ – ನಿರ್ದೇಶಕ /ನಿರ್ವಾಹಕ ಅಥವಾ ಪ್ರಕಾಶಕ ಎಂಬ ಹುದ್ದೆಯನ್ನು ನೀಡಿಯೇನು. ಈ ವ್ಯಕ್ತಿ ಸಂಸ್ಥೆಯ ನೀತಿಯ ಚೌಕಟ್ಟಿನೊಳಗೆ (ಈ ನೀತಿಯನ್ನು ರೂಪಿಸುವಲ್ಲಿ ಆತನ ಪಾತ್ರವೂ ಇದ್ದಿರಬಹುದು) ಸಂಸ್ಥೆಯ ಪರವಾಗಿ ಪ್ರಕಾಶನ ನಿರ್ಧಾರಗಳನ್ನು ಕೈಗೊಳ್ಳಲು, ಅಗತ್ಯ ಎಂದು ಪರಿಗಣಿಸಿದರೆ ಸಂಪಾದಕರ ತಂಡವೊಂದರಿಂದ ಸಲಹೆ, ಅಭಿಪ್ರಾಯ ಮತ್ತು ಸಂಪಾದಕೀಯ ನೆರವನ್ನು ಪಡೆಯಲು, ಮಂಡಳಿಯಿಂದ ಅಧಿಕಾರ ಪಡೆದಿರುತ್ತಾನೆ. ಮೊದಲನೆಯ ದಿನದಿಂದಲೇ ಈ ಮಟ್ಟದಲ್ಲಿ ಮತ್ತು ಈ ಪ್ರಮಾಣದಲ್ಲಿ ಸ್ವಾತಂತ್ರ್ಯವನ್ನು ನಾವು ಎಷ್ಟೇ ಅಪೇಕ್ಷಿಸಿದರೂ, ಇದು ನಮಗೆ ಹೆಚ್ಚು ಕಡಿಮೆ ದೂರದ ಗುರಿಯಾಗಿಯೇ ಇರುತ್ತದೆ. ಈ ಗುರಿಯನ್ನು ತಲುಪಲು ನಾವೆಲ್ಲರೂ ಉತ್ಕಟೇಚ್ಛೆ ಹೊಂದಿದ್ದರೂ ಕೆಲವರು ಮಾತ್ರ ಅದನ್ನು ಸಾಧಿಸುತ್ತಾರೆ. ಬಹುತೇಕ ಸಂಗ್ರಾಹಕ ಸಂಪಾದಕರು ಪ್ರತಿ ಕೃತಿಯ ಪ್ರಕಟಣಾ ಸಲಹೆಗೂ ಮೇಲಿನ ಅಧಿಕಾರಿಯೊಬ್ಬರ ಸಮ್ಮತಿಯನ್ನು ಪಡೆಯುವುದು ಅವಶ್ಯಕವಾಗಿದೆ.

ನಿರ್ಧಾರಗಳನ್ನು ಕೈಗೊಳ್ಳುವ ವಿಧಿವಿಧಾನಗಳು ಸಂಸ್ಥೆಯಿಂದ ಸಂಸ್ಥೆಗೆ ಬದಲಾಗುತ್ತವೆ ಹಾಗೂ ಒಂದೇ ಸಂಸ್ಥೆಯಲ್ಲಿ ಬೇರೆಬೇರೆ ಸಂಪಾದಕರಿಗೆ ಸಂಬಂಧಿಸಿದಂತೆ ಇವು ಬೇರೆ ಬೇರೆಯಾಗಬಹುದು. ಅನೇಕ ಸಲ ಇದು ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ಮುಂದಿಡುವ ರೀತಿಯದಾಗಿರುತ್ತದೆ – ಸಂಪಾದಕ ತನ್ನ ಶಿಫಾರ್ಸನ್ನು ಅಂಗೀಕರಿಸುವ ಅಧಿಕಾರ ಹೊಂದಿದ ವ್ಯಕ್ತಿಗೆ ನೇರವಾಗಿ ಸಲ್ಲಿಸುತ್ತಾನೆ. ಆತ ಮಾಲೀಕ, ನಿರ್ವಾಹಕ ನಿರ್ದೇಶಕ, ಪ್ರಕಾಶಕ ಅಥವಾ ಡಾ. ಅದ್ವಾನಿ ಅವರು ವಿವರಿಸಿರುವ ಪ್ರಕಾಶಕ ನಿರ್ವಾಹಕನಾಗಿರಬಹುದು. ಇಂತಹ ಶಿಫಾರ್ಸನ್ನು ಅನೌಪಚಾರಿಕಾಗಿ ಅಥವಾ ಸಂಪೂರ್ಣವಾಗಿ ಬಾಯಿಮಾತಿನಲ್ಲಿ ಅಥವಾ ಕೃತಿಯ ವಸ್ತು ಮತ್ತು ಉದ್ದೇಶ, ಲೇಖಕ ಮತ್ತು ಲೇಖಕರ ಹಿನ್ನೆಲೆ ಮತ್ತು ಅವರ

ಅರ್ಹತೆಗಳು ಹಾಗೂ ಹಿಂದೆ ಪ್ರಕಟವಾಗಿರುವ ಬರೆವಣಿಗೆಗಳು, ತಜ್ಞ ಓದುಗ(ರ)ನ ಅಭಿಪ್ರಾಯಗಳು ಮತ್ತು ಶಿಫಾರ್ಸುಗಳು; ಶಿಫಾರ್ಸು ಮಾಡಿರುವ ಮುದ್ರಣದ ಪ್ರತಿಗಳ ಸಂಖ್ಯೆ; ಮುದ್ರಣ ವೆಚ್ಚ, ಪುಸ್ತಕದ ಉದ್ದೇಶಿತ ಮಾರಾಟ ಬೆಲೆ; ಮಾರುಕಟ್ಟೆ, ಎಷ್ಟು ಮಾರಾಟವಾಗಬಹುದು ಎಂಬ ಅಂದಾಜು ಹಾಗೂ ಎಷ್ಟು ಮಾರಿದರೆ ಹಾಕಿದ ಹಣ ಬರುತ್ತದೆ; ಲಾಭ ಎಷ್ಟು, ಪುಸ್ತಕದ ಮಾರಾಟವನ್ನು ಉತ್ತೇಜಿಸಲು ಇರುವ ಮಾರ್ಗಗಳು ಮತ್ತು ಅವುಗಳಿಗಾಗುವ ವೆಚ್ಚಗಳು; ಪುಸ್ತಕದೊಂದಿಗೆ ಸ್ಪರ್ಧಿಸುವ ಇತರ ಪುಸ್ತಕಗಳ ವಿವರ; ಇತ್ಯಾದಿಗಳ ಬಗ್ಗೆ ಮಾಹಿತಿಯನ್ನು ನೀಡುವ ಪ್ರಕಾಶನ ಸಲಹಾ ಪರಿಪತ್ರದ ಆಧಾರದ ಮೇಲೆ ಮಾಡಬಹುದು; ಇಂತಹ ಪ್ರಕಾಶನ ಸಲಹಾ ಪರಿಪತ್ರವನ್ನು ತುಂಬಲು ಪ್ರವರ್ತಕ ಸಂಪಾದಕ ಮುದ್ರಣ, ಪ್ರಚಾರ, ಮಾರಾಟ ಮತ್ತು ಲೆಕ್ಕಪತ್ರ ವಿಭಾಗಗಳ ಸಹೋದ್ಯೋಗಿಗಳಿಂದ ಹಿನ್ನೆಲೆ ಮಾಹಿತಿಯನ್ನು ಪಡೆಯುವುದು ಹಾಗೂ ವೆಚ್ಚ, ಬೆಲೆ, ಮಾರಾಟ ಮತ್ತು ಲಾಭಗಳ ಬಗ್ಗೆ ಸಂಪಾದಕರ ಅಂದಾಜುಗಳ ಬಗ್ಗೆ ಟಿಪ್ಪಣಿ ಬರೆಯುವುದು ಅಗತ್ಯ ಎಂಬುದು ಸ್ಪಷ್ಟ.

ಕೆಲವು ಪ್ರಕಾಶನ ಸಂಸ್ಥೆಗಳಲ್ಲಿ, ಬೇರೆಬೇರೆ ಸಂಪಾದಕರು ವೈಯಕ್ತಿಕವಾಗಿ ತುಂಬಿದ ಪ್ರಕಾಶನ ಸಲಹಾ ಪರಿಪತ್ರಗಳ ಆಧಾರದ ಮೇಲೆ ವಾರಕ್ಕೊಮ್ಮೆ ಅಥವಾ ತಿಂಗಳಿಗೊಮ್ಮೆ ನಡೆಯುವ "ಸಂಪಾದಕೀಯ ಸಭೆಗಳಲ್ಲಿ" ಪ್ರಕಾಶನ ಸಲಹೆಗಳನ್ನು ಚರ್ಚಿಸಲಾಗುವುದು. ಈ ಸಭೆಗಳಲ್ಲಿ, ಪ್ರವರ್ತಕ ಸಂಪಾದಕರು ಬೇರೆಬೇರೆಯಾಗಿ ತಮ್ಮ ಸಲಹೆಗಳನ್ನು ತಮ್ಮ ಜೊತೆಯ ಸಂಪಾದಕರು ಮತ್ತು ಸಂಪಾದಕೀಯ ನಿರ್ವಾಹಕರ ಮುಂದೆಯೇ ಅಲ್ಲದೆ, ಮಾರಾಟ, ಉತ್ತೇಜನ ಮತ್ತು ಹಣಕಾಸು ವಿಭಾಗಗಳ ನಿರ್ವಾಹಕರ ಮುಂದೂ ಮತ್ತು ಅನೇಕ ಸಂದರ್ಭಗಳಲ್ಲಿ ನಿರ್ವಾಹಕ ನಿರ್ದೇಶಕರ ಮುಂದೂ ಇಡುತ್ತಾರೆ. ಆದ್ದರಿಂದ ಸಂಪಾದಕ ಮೊದಲಿಗೆ ತನ್ನ ಸಲಹೆಯನ್ನು ತನ್ನ ಸ್ವಂತ ಸಂಸ್ಥೆ ಒಪ್ಪಿಕೊಳ್ಳುವಂತೆ ಮಾಡಬೇಕು ಹಾಗೂ ಸಂಸ್ಥೆ ಅದನ್ನು ತನ್ನ ಮಡಿಲಿಗೆ ಹಾಕಿಕೊಂಡು ಪೋಷಿಸಿ, ಸಂಪಾದಕೀಯ ಮತ್ತು ಮುದ್ರಣ ಪ್ರಕ್ರಿಯೆಗಳ ನಂತರ ಅದನ್ನು ಹೊರ ಜಗತ್ತಿಗೆ ನೀಡಿ ಅದರ ಮಾರಾಟಕ್ಕೆ ಉತ್ತೇಜನ ನೀಡುವಂತೆ ಅದರ ಮನವೊಲಿಸಬೇಕು.

ಹಸ್ತಪ್ರತಿಯ 'ಅಂಗೀಕಾರ' ಮತ್ತು ಮುದ್ರಣ ಹಾಗೂ ಬಿಡುಗಡೆಯ ಹಂತಗಳಾಚೆಯೂ ಬೇರೆಬೇರೆ ವಿಭಾಗಗಳ ನಡುವೆ ಅಂತರಕ್ರಿಯೆ ಹೇಗೆ ಅಪೇಕ್ಷಣೀಯವಷ್ಟೇ ಅಲ್ಲ ಅಗತ್ಯವೂ ಹೌದು ಎಂಬುದನ್ನು ಚಿತ್ರಿಸುವ ಕೆಲವು ನಿಜಜೀವನದ ಸನ್ನಿವೇಶಗಳನ್ನು ಶ್ರೀಮತಿ ಬುಟಾಲಿಯಾ ಅವರ ಲೇಖನ ನಿರೂಪಿಸುತ್ತದೆ. ಹಸ್ತಪ್ರತಿಗಳನ್ನು ಪಡೆದುಕೊಳ್ಳುವ ನಿರ್ಧಾರಗಳಿಗೆ ಸಂಬಂಧಿಸಿದ ವಿಧಿವಿಧಾನಗಳಲ್ಲಿ ಕೆಲವು ವ್ಯತ್ಯಾಸಗಳನ್ನು ನಾನಿಲ್ಲಿ ವಿವರಿಸಿದ್ದೇನೆ. ಪ್ರಕಾಶನ ನಿರ್ಧಾರಗಳನ್ನು ಕ್ವಚಿತ್ತಾಗಿ ಒಬ್ಬ ಸಂಪಾದಕ ಕೈಗೊಳ್ಳುವುದರಿಂದ ಹಾಗೂ ಅವನೇ ಬೇರೆ ಯಾರಿಗೂ ಸಂಬಂಧಪಡದ ರೀತಿಯಲ್ಲಿ ಪ್ರಕಾಶನ ಪ್ರಕ್ರಿಯೆಯನ್ನು ಕ್ವಚಿತ್ತಾಗಿ ಕೈಗೊಳ್ಳುವುದರಿಂದ ಇಂತಹ ನಿರ್ಧಾರಗಳನ್ನು ಸಂಪಾದಕ ಸದಾ ವೈಯಕ್ತಿಕವಾಗಿ

ಇಷ್ಟಪಡಲಿಕ್ಕಿಲ್ಲ ಎಂಬುದನ್ನು ಹೇಳುವುದೇ ನನ್ನ ವಿವರಣೆಯ ಮುಖ್ಯ ಉದ್ದೇಶ. ಇದರಲ್ಲಿ ತೀರ ವಿಪರೀತದ ಪ್ರಕರಣವೆಂದರೆ ಶ್ರೀ ದಯಾಲ್ ಅವರು ಪ್ರಸ್ತಾಪಿಸಿರುವ ಪ್ರಕರಣ. ಅದರಲ್ಲಿ ಒಬ್ಬ ಮಾಲೀಕ ತನ್ನ ಸಂಪಾದಕನನ್ನು ಹೇಳದೆಕೇಳದೆ ಹಾಗೂ ಅವನಿಗೆ ಜಿಗುಪ್ಸೆಯಾಗುವಂತೆ, ಕೃತಿಯ ಯೋಗ್ಯತೆಗೆ ಹಾಗೂ ಪುಸ್ತಕದ ರೂಪದಲ್ಲಿ ಅದರ ಮಾರಾಟದ ಅರ್ಹತೆಗೆ ಸಂಬಂಧವಿಲ್ಲದ ಕಾರಣಗಳಿಗಾಗಿ 'ಪಡೆದುಕೊಂಡ' ಹಸ್ತಪ್ರತಿಯನ್ನು ಸಂಪಾದಕನ ಮಡಿಲಿಗೆ ಹಾಕಿದ ಪ್ರಕರಣ ಅದು. ಪುಸ್ತಕ ಪ್ರಕಾಶನದ ಸಂಪಾದಕನಾಗಿ ನನ್ನ ವೃತ್ತಿಜೀವನದ ಪ್ರಾರಂಭಿಕ ವರ್ಷಗಳಲ್ಲಿ ಒಂದಕ್ಕಿಂತಲೂ ಹೆಚ್ಚು ಸಲ ನಾನು ವೈಯಕ್ತಿಕವಾಗಿ ಎದುರಿಸಿದಂತಹ ಸನ್ನಿವೇಶ ಇದು. ಆಗ ನಾನೇನು ಮಾಡಿದೆ ? ನನಗೆ ದಿಗ್ಭ್ರಮೆಯಾಗಿತ್ತು. ನಾನು ಮನಬಿಚ್ಚಿ ಮಾತನಾಡಿದೆ. ನನ್ನ ಮಾಲೀಕರು ಸಂತೋಷದಿಂದ ನನ್ನ ಅಭಿಪ್ರಾಯಗಳನ್ನು ಒಪ್ಪಿಕೊಂಡರು – ಆದರೆ ಅವರಿಗೆ ತಮ್ಮದೇ ಆದ ಕಾರಣಗಳಿದ್ದವು; ಅವನ್ನು ಹೇಳದೆ ಇದ್ದರೂ ಅವು ಸಾಕಷ್ಟು ಸ್ಪಷ್ಟವಾಗಿಯೇ ಇದ್ದವು. ಆಗ ನಾನು ಮಾಡಿದ್ದೇನು ? ಒಂದು ಕೆಟ್ಟ ಕೆಲಸವನ್ನು ಎಷ್ಟು ಉತ್ತಮವಾಗಿ ಮಾಡಬಹುದೋ ಅದನ್ನು ಮಾಡಲು ತೊಡಗಿದೆ.

ನಿರ್ಧಾರ ಕೈಗೊಳ್ಳುವ ಮಟ್ಟದಲ್ಲಿ ಒಂದು ನೈತಿಕ ಆಯಾಮದ ಬಗ್ಗೆ ಡಾ. ಅದ್ವಾನಿ ಪ್ರಸ್ತಾಪಿಸಿದ್ದಾರೆ. ಅನುಷ್ಠಾನದ ಮಟ್ಟದಲ್ಲಿ ಅದು ಹೇಗೆ ಕೆಲಸ ಮಾಡುತ್ತದೆ ? ವೈಯಕ್ತಿಕವಾಗಿ ಹೇಳಬೇಕಾದರೆ, ನನ್ನ ಮನಸ್ಸಾಕ್ಷಿ ನನಗೆ ಅಷ್ಟೇನೂ ತೊಂದರೆ ಕೊಡಲಿಲ್ಲ ಎಂಬುದನ್ನು ನಾನು ಒಪ್ಪಿಕೊಳ್ಳಬೇಕು. ಒಟ್ಟಾರೆಯಾಗಿ ನಾನು ನನ್ನ ಕೆಲಸದ ಬಗ್ಗೆ-ಅದರಲ್ಲಿ ಹೆಚ್ಚಿನದು ಯೋಗ್ಯವಾದ ಪುಸ್ತಕಗಳನ್ನು ಕುರಿತ ಕೆಲಸವಾಗಿತ್ತು – ಸಂತೋಷದಿಂದಿದ್ದೆ; ನನ್ನದೇ ಆದ ರೀತಿಯಲ್ಲಿ ಪ್ರಕಾಶನ ನಿರ್ಧಾರಗಳ ಮೇಲೆ ನಾನು ಸಾಕಷ್ಟು ಪ್ರಭಾವ ಬೀರುತ್ತಿದ್ದೆ ಹಾಗೂ ನನ್ನ ಮಾಲಿಕರು ಅನುಮಾನಿಸುತ್ತಿದ್ದ ಯೋಜನೆಗಳನ್ನು ಕೈಗೊಳ್ಳಲೂ ನಾನು ಅವರನ್ನು ಹುರಿದುಂಬಿಸುವ ಮಟ್ಟಿಗೆ ಆಗಾಗ ಯಶಸ್ವಿಯಾಗುತ್ತಿದ್ದೆ. ಒಂದು ಕಡೆ ಕಳೆದುಕೊಂಡದ್ದು ಇನ್ನೊಂದು ಕಡೆ ಬರುತ್ತದೆ ಎಂಬ ಸಿದ್ಧಾಂತದ ಆಧಾರದ ಮೇಲೆ ಮಾಲೀಕರು ಆ ಯೋಜನೆಗಳಿಗೆ ಹಣವನ್ನು ಸಂತೋಷವಾಗಿಯೇ ಒದಗಿಸಿದರು.

ನನ್ನ ಕೆಲವು ಪ್ರೀತಿಯ ಯೋಜನೆಗಳನ್ನು ತಿರಸ್ಕರಿಸಲಾದ ಸಂದರ್ಭಗಳೂ ಇದ್ದವು ಎಂದು ಹೇಳಬೇಕಾಗಿಲ್ಲ. ಈ ಪೈಕಿ ಒಂದು ಹಸ್ತಪ್ರತಿ ವಿದೇಶಕ್ಕೆ ಹೋಗದಿದ್ದರ ದುಃಖ ನನಗೆ ಕೊನೆಯವರೆಗೂ ಉಳಿಯಿತು. ಅದನ್ನೇ ಇಲ್ಲಿ ಹೇಳಲು ಏಕೆ ಆರಿಸಿದನೆಂದರೆ ಅದರ ವಿಷಯದಲ್ಲಿ ನನಗೆ ಆಳವಾದ ಆಸಕ್ತಿ ಇತ್ತು ಹಾಗೂ ಹಸ್ತಪ್ರತಿಯನ್ನು ಓದಿ ನಾನು ಸಂತೋಷಪಟ್ಟಿದ್ದೆ, ಅದರಿಂದ ಪ್ರಯೋಜನ ಪಡೆದಿದ್ದೆ. ಘಟನೆ ನಡೆದ ಹಲವಾರು ವರ್ಷಗಳ ನಂತರ ಹಸ್ತಪ್ರತಿಯ ಲೇಖಕರು ಸಾರ್ವಜನಿಕ ಭಾಷಣವೊಂದರಲ್ಲಿ ತಮ್ಮ ಕೃತಿ ತಿರಸ್ಕೃತವಾದದ್ದನ್ನು ಪ್ರಸ್ತಾಪಿಸಿ ಅದು ಭಾರತೀಯ ಪ್ರಕಾಶಕರಿಗೆ ದೂರದೃಷ್ಟಿ ಇಲ್ಲದೆ ಇರುವುದರ ಉದಾಹರಣೆ ಎಂದು ಹೇಳಿದ್ದನ್ನು ಕೇಳುವ ಅವಮಾನವನ್ನು ನಾನು ಅನುಭವಿಸಬೇಕಾಯಿತು. ಇದಕ್ಕೂ ಕೆಟ್ಟದ್ದೆಂದರೆ,

ಸುಮಾರು 25 ವರ್ಷಗಳ ಅಂತರದ ನಂತರ ನಾನು ಸಂಪಾದಕನಾಗಿ ನಿರ್ವಹಿಸಿದ ಅದೇ ಲೇಖಕರ ನೆನಪುಗಳನ್ನು ಕುರಿತ ಕೃತಿಯ ಹಸ್ತಪ್ರತಿಯಲ್ಲಿ ಮತ್ತು ಕರಡಚ್ಚಿನಲ್ಲಿ ಅದರ ವಿವರಣೆಯನ್ನು ನಾನು ಪದೇಪದೇ ಓದಬೇಕಾಯಿತು. ಅದರಲ್ಲಿ ಯಾವ ಹೆಸರುಗಳನ್ನೂ ಕೊಡದೆ ಇದ್ದುದು ಲೇಖಕರ ಸೌಜನ್ಯವಾಗಿತ್ತು. ಹಾಗೂ ಅವರ ಕ್ಲಬ್‌ನಲ್ಲಿ ಇಬ್ಬರೂ ಕಾಫಿ ಕುಡಿಯುತ್ತಿದ್ದಾಗ ಈ ಘಟನೆಯ ಬಗ್ಗೆ ಮಾತನಾಡಿದೆವಾದರೂ ಅವರಲ್ಲಿ ಯಾವುದೇ ಕಹಿ ಭಾವನೆ ಇರಲಿಲ್ಲ. ಆ ಮೊದಲ ಹಸ್ತಪ್ರತಿ ಪ್ರಕಟಿತಗೊಳ್ಳದೆ ಮೂಲೆಯಲ್ಲಿ ಬಿದ್ದಿದ್ದರೆ ನಮ್ಮಿಬ್ಬರ ಭೇಟಿ ಅಷ್ಟೇ ಹಿತಕರವಾಗಿರುತ್ತಿತ್ತೇ ?

ನನಗೆ ಕೆಲಸ ಬೇಕಾಗಿತ್ತು ಹಾಗೂ ಆ ಸಮಯದಲ್ಲಿ ಪ್ರಕಾಶನ ವಲಯದಲ್ಲಿ ನನಗೆ ದೊರೆಯಬಹುದಾದ ಹಾಗೂ ನನಗೆ ನಿಜವಾಗಿಯೂ ಸೂಕ್ತವಾದ ಬೇರೆ ಕೆಲಸಗಳೂ ಇರಲಿಲ್ಲ. ಆದರೆ ಆಗ ಇನ್ನೊಂದು ಕೆಲಸ ಹುಡುಕುವ ಬಗ್ಗೆ ನಾನೆಂದೂ ಯೋಚಿಸಲೂ ಇಲ್ಲ; ನಾನು ಮಾಡುತ್ತಿದ್ದ ಕೆಲಸ ಲವಲವಿಕೆಯಿಂದ ಮತ್ತು ಸಂತೋಷದಿಂದ ಕೂಡಿತ್ತು.

ಈಗ ತಾನೇ ವಿವರಿಸಲಾದ ನನ್ನ ಪ್ರಾರಂಭಿಕ ಅನುಭವ ನನಗೆ ಯಾವುದೇ ನೋವಿನ ನೈತಿಕ ಸಮಸ್ಯೆಯನ್ನುಂಟುಮಾಡಲಿಲ್ಲ ಎಂಬುದನ್ನು ಸಾಮಾನ್ಯವಾಗಿ ಒಪ್ಪಬಹುದು ಎಂದು ನಾನು ನಿರೀಕ್ಷಿಸುತ್ತೇನೆ. ಆದರೆ ಪರಿಸ್ಥಿತಿ ಬಹಳ ಕೆಡಬಹುದು, ಕೆಟ್ಟಿದೆ ಸಹ. ಪ್ರಕಟಣೆಗೆ ಅನರ್ಹ ಎಂದು ತಾನು ಪರಿಗಣಿಸಿದ ಹಸ್ತಪ್ರತಿಯನ್ನು ಕುರಿತು ಕೆಲಸ ಮಾಡುವಂತೆ ಒಬ್ಬ ಸಂಪಾದಕನಿಗೆ ಪದೇಪದೇ ಹೇಳತೊಡಗಿದರೆ ಆತ/ಆಕೆ ಏನು ಮಾಡಬೇಕು ಎಂಬ ಪ್ರಶ್ನೆಯನ್ನು ಆಗಾಗ ಕೇಳಲಾಗುತ್ತದೆ. ಒಂದು ಎತ್ತರದ 'ನೈತಿಕ' ಪೀಠದ ಮೇಲೆ ಕುಳಿತು 'ಆತ/ಆಕೆ ಕೆಲಸವನ್ನು ಬಿಟ್ಟು ಹೋಗಬೇಕು' ಎಂದು ಉತ್ತರಿಸುವುದು ಸುಲಭ. ಆದರೆ ನಮ್ಮಲ್ಲಿ ಹೆಚ್ಚಿನವರಿಗೆ ಉದ್ಯೋಗ ಮತ್ತು ಅದರಿಂದ ದೊರೆಯುವ ಸಂಬಳದ ಅಗತ್ಯವಿದೆ ಹಾಗೂ ಯಾವುದೋ ಮೂಲೆಯಲ್ಲಿ ದೊರೆಯಬಹುದಾದ ಇನ್ನೂ ಉತ್ತಮವಾದ ಕೆಲಸವನ್ನು ಕಾಣುವ ಆಸೆಯಿಂದ ಕೈಯಲ್ಲಿರುವ ಕೆಲಸವನ್ನು ಬಿಟ್ಟುಬಿಡುವ ಸಂಭವ ಇರುವುದಿಲ್ಲ. ಆದ್ದರಿಂದ ನ್ಯಾಯಬಾಹಿರವಾದ ಅಥವಾ ನಿಜಕ್ಕೂ ಕೀಳಾದ ಹಾಗೂ ನೈತಿಕವಾಗಿ ಭ್ರಷ್ಟವಾದ ಚಟುವಟಿಕೆಯಲ್ಲಿ ತೊಡಗಬೇಕೆಂದು ಹೇಳಿದ ಹೊರತು ನಮ್ಮ ಕೆಲಸ ಮಾಡಿಕೊಂಡು ಹೋಗುವುದು, 'ಕೆಟ್ಟ' ಪುಸ್ತಕಗಳ ಬಗ್ಗೆಯೂ ನಮ್ಮಿಂದ ಸಾಧ್ಯವಾದಷ್ಟು ಉತ್ತಮ ಕೆಲಸ ಮಾಡುವುದು, ಒಂದು ಉತ್ತಮ ದಿಸೆಯಲ್ಲಿ ಪ್ರಕಾಶನ ನಿರ್ಧಾರಗಳು ಆಗುವಂತೆ ಪ್ರಭಾವ ಬೀರಲು ಸದಾ ಪ್ರಯತ್ನಿಸುವುದು ನಮ್ಮಲ್ಲಿ ಹೆಚ್ಚಿನವರು ಅನುಸರಿಸಬೇಕಾದ ಮಾರ್ಗವಾಗಬೇಕು. ಜಾಹೀರಾತು ವೃತ್ತಿಗೆ ಸೇರಿದ ಒಬ್ಬ ವ್ಯಕ್ತಿ ತಾನು ವೈಯಕ್ತಿಕವಾಗಿ ಬಳಸುವ ಶ್ಯಾಂಪೂ ಅಥವಾ ತಾನು ಪರವಾಯಿಲ್ಲ ಎಂದು ಭಾವಿಸಿದ್ದ ಮುಖಕ್ಷೌರದ ನಂತರ ಬಳಸುವ ಲೋಶನ್‌ನ ಮಾರಾಟಕ್ಕೆ ಮಾತ್ರ ಹೇಗೆ ಉತ್ತೇಜನ ನೀಡಬೇಕಾಗಿಲ್ಲವೋ ಅದೇ ರೀತಿ ವೃತ್ತಿಪರ ದೃಷ್ಟಿಯಿಂದ ನೋಡಿದಾಗ ಒಬ್ಬ ಸಂಪಾದಕನ ಕೆಲಸ ಆತನ/ಆಕೆಯ

ವೈಯಕ್ತಿಕ ರುಚಿಗಳನ್ನು, ನಂಬಿಕೆಗಳನ್ನು, ನಿಲುವುಗಳನ್ನು ಸದಾ ಮತ್ತು ಅಗತ್ಯವಾಗಿ ಪ್ರತಿಬಿಂಬಿಸಬೇಕಾಗಿಲ್ಲ. ಈ ಹೋಲಿಕೆ ದೋಷಯುಕ್ತವೇನೋ ಸರಿ. ಪುಸ್ತಕಗಳಿಗೂ ಶ್ಯಾಂಪೂ ಮತ್ತು ಮುಖಕ್ಷೌರಾನಂತರ ಬಳಸುವ ಲೋಶನ್‌ಗೂ ಏನೇನೂ ಸಂಬಂಧವಿಲ್ಲ, ಅವು ವಸ್ತುಗಳೇನೋ ಸರಿ. ಆದರೆ ಡಾ. ಅದ್ವಾನಿ ಅವರು ಹೇಳಿದಂತೆ 'ಅವು ಜನರನ್ನು ಮೂಲಭೂತವಾದ ದೃಷ್ಟಿಯಲ್ಲಿ ರೂಪಿಸುವ ವಸ್ತುಗಳಾಗಿವೆ.' 'ಪುಸ್ತಕಗಳ ಪ್ರಕಾಶನದ ತತ್ವ ನಿರ್ದಿಷ್ಟವಾಗಿ ಏನೆಂದರೆ ಅಥವಾ ಏನಾಗಿರಬೇಕೆಂದರೆ ಒಂದು ಸಂಸ್ಕೃತಿಯಲ್ಲಿ ವಿಚಾರದ ಪ್ರಕ್ರಿಯೆಗಳನ್ನು ಮತ್ತು ಭಾವನಾ ತರಂಗಗಳನ್ನು ಹೀನಾಯಗೊಳಿಸಿ, ಕೆಳದರ್ಜೆಗೆ ಎಳೆಯುವಂತಹ ವಸ್ತುಗಳನ್ನು ತಯಾರಿಸಿ ಮಾರುವ ಚಟುವಟಿಕೆಗಳಿಗಿಂತ ಪ್ರಕಾಶನ ಭಿನ್ನವಾದ್ದು ಎಂದು ಗುರುತಿಸುವ ಚಟುವಟಿಕೆಯಾಗಿರಬೇಕು, ಎಂದು ಅವರು ಹೇಳಿದ್ದಾರೆ.

ನೈತಿಕ ನಿರ್ಣಯ ನೀಡುವುದು ಕಠಿಣವಾದ ಕೆಲಸ ಹಾಗೂ ಅದನ್ನು ಹಗುರವಾಗಿ ಪರಿಗಣಿಸಬಾರದು. ನಾನೇ ಸರಿ ಎಂಬ ಸ್ವಪ್ರತಿಷ್ಠೆ ನಮ್ಮಲ್ಲಿ ಹಲವರ ದೌರ್ಬಲ್ಯವಾಗಿದೆ. ನಮ್ಮ ದೃಢವಾದ ಅಭಿಪ್ರಾಯಗಳು ಬಲವಾಗಿದ್ದಷ್ಟೂ ಅವುಗಳು ಎಷ್ಟರಮಟ್ಟಿಗೆ ಸರಿ ಎಂಬ ಬಗ್ಗೆ ಸ್ವಸಂತೃಪ್ತಿ ಉಂಟಾಗುವ ಅಪಾಯ ಹೆಚ್ಚು; ಸೌಂದರ್ಯ ಮೀಮಾಂಸೆ ಕುರಿತ ಮತ್ತು ಸೈದ್ಧಾಂತಿಕವಾದ ನಮ್ಮ ನಿರ್ಣಯಗಳನ್ನು ಹಾಗೂ ನಮ್ಮ ವೈಯಕ್ತಿಕ ಇಷ್ಟಾನಿಷ್ಟಗಳನ್ನೂ ಸಹ ನೈತಿಕ ನಿಲುವುಗಳೊಂದಿಗೆ ಗುರುತಿಸುವುದೂ ಸುಲಭವಾಗುತ್ತದೆ. ಆದ್ದರಿಂದಲೆ, ಪ್ರಕಾಶನಕ್ಕೆ ಸಂಪೂರ್ಣವಾಗಿ ಬದ್ಧನಾಗದ ಹೊರತು ಹಾಗೂ ಒಂದು ನಂಬಿಕೆಯ ಕಟ್ಟುನಿಟ್ಟಿನ ವ್ಯವಸ್ಥೆಯ ಆಧಾರದ ಮೇಲೆ ಒಂದು 'ಧ್ಯೇಯ' ಕ್ಕಾಗಿ ಪ್ರಕಾಶನ ಕಾರ್ಯದಲ್ಲಿ ಸಂಪೂರ್ಣವಾಗಿ ತೊಡಗದ ಹೊರತು (ಕೆಲವು ವರ್ಷಗಳು ನಾನು ಮಾಡಿದಂತೆ) ತನ್ನ ನೈತಿಕ ನಿರ್ಣಯವನ್ನು ಎಚ್ಚರಿಕೆಯಿಂದ ಹಾಗೂ ನಿಶ್ಚಿತವಾಗಿ ನಮ್ರತೆಯಿಂದ ಬಳಸಬೇಕಾಗುತ್ತದೆ. ಬೌದ್ಧಿಕ ಕಸುವು ಮತ್ತು ಋಜುತ್ವ ಸೈದ್ಧಾಂತಿಕ ದರ್ಪವಾಗಬಾರದು. ಸಂಪಾದಕೀಯ ಶಿಖರದಲ್ಲಿರುವ ವ್ಯಕ್ತಿಗೆ ಇದು ವಿಶೇಷವಾಗಿ ಮುಖ್ಯ. ಏಕೆಂದರೆ ಒಂದು ಪುಸ್ತಕದ ಪರಿಣಾಮ ಅಥವಾ ಪ್ರಭಾವ ಕೆಲವು ನೂರು ವ್ಯಕ್ತಿಗಳ ಅಥವಾ ಲಕ್ಷಾಂತರ ಜನರ ಮೇಲೆ ಹಾಗೂ ಮುಂದಿನ ಪೀಳಿಗೆಗಳ ಮೇಲೆ ಆಗಬಹುದಾದರೂ ಅದು ಜನರನ್ನು ಮೂಲಭೂತವಾದ ರೀತಿಯಲ್ಲಿ ರೂಪಿಸುವ ಶಕ್ತಿ ಹೊಂದಿರುತ್ತದೆ. ಆದ್ದರಿಂದ ಕೆಲವೇ ವ್ಯಕ್ತಿಗಳ ಮೇಲಾಗಲೀ, ಅನೇಕರ ಮೇಲಾಗಲೀ, ಪ್ರಭಾವ ಬೀರಬಹುದಾದ ವಸ್ತುವನ್ನು ಲಘುವಾಗಿ ಪರಿಗಣಿಸಲಾಗದು.

ಬುದ್ಧಿಜೀವಿಗಳ ಸಮುದಾಯಕ್ಕೆ ವಿದ್ವತ್ತಿನ ನಿಯತಕಾಲಿಕಗಳ ಮತ್ತು ವ್ಯಾಸಂಗಿಕ ಪ್ರಕಾಶನ ಸಂಸ್ಥೆಗಳ ಸಂಪಾದಕರು ಮಾಹಿತಿ ಮತ್ತು ವಿಚಾರಗಳು ಹಾಗೂ ಅವುಗಳನ್ನು ಕುರಿತ ಚರ್ಚೆಗಳ ಪ್ರಸಾರದ ಬಾಗಿಲುಗಳನ್ನು ಕಾಯುವವರಿದ್ದಂತೆ; ತಾನು ಒಳಗೆ ಹೋಗಲು ಬಿಡುವ ವಸ್ತುವಿನ ಬಗ್ಗೆ ದ್ವಾರಪಾಲಕನಿಗೆ ಬಹಳ ದೊಡ್ಡ ಜವಾಬ್ದಾರಿ ಇದೆ, ಅದೇ ರೀತಿ ಒಳಗೆ ಬರದಂತೆ ಏನನ್ನು ತಡೆಯುತ್ತಾನೋ ಅದರ

ಬಗ್ಗೆಯೂ ಅಷ್ಟೇ ಜವಾಬ್ದಾರಿ ಆತನಿಗಿದೆ. ಇದು ವಿಶೇಷವಾಗಿ ಗುಣಮಟ್ಟಕ್ಕೆ ಸಂಬಂಧಿಸದ ಕಾರಣಕ್ಕಾಗಿ ಕೃತಿಯೊಂದನ್ನು ಪ್ರಕಟಿಸದೆ ಇರುವ ನಿರ್ಧಾರ ಕೈಗೊಳ್ಳುವ ಪರಿಸ್ಥಿತಿಗೆ ಅನ್ವಯಿಸುತ್ತದೆ. ಇಂತಹ ನಿರ್ಧಾರಗಳನ್ನು ಏಕೆ ಕೈಗೊಳ್ಳಲಾಗುವುದೆಂದರೆ ಮೂಲತಃ ಪುಸ್ತಕ ಪ್ರಕಟಣೆ ಒಂದು ಉದ್ಯಮವಾಗಿದೆ ಹಾಗೂ ಶ್ರೀ ದಾವಿಡರ್ ಅವರು ಹೇಳುವಂತೆ ಅದು 'ಅಂತಿಮವಾಗಿ ಹಣಕಾಸಿನ ಫಲಿತಾಂಶವನ್ನು ಸಂಪೂರ್ಣವಾಗಿ ಅವಲಂಬಿಸಿದ ಉದ್ಯಮವಾಗಿದೆ' ಹಾಗೂ 'ನಾವು ಉದ್ಯಮದಲ್ಲಿ ಸರಿಯಿಲ್ಲದಿದ್ದರೆ ನಾವು (ಸೃಜನಾತ್ಮಕವಾಗಿ ಹೇಳುವುದಾದರೆ) ಒಳ್ಳೆಯ ಅಥವಾ ಕೆಟ್ಟ ಪ್ರಕಾಶಕರಾಗಲಾರೆವು'.

ವ್ಯಾಪಾರಿ ದೃಷ್ಟಿಯಿಂದ ಅಥವಾ ತಪ್ಪು ಅಂದಾಜಿನ ಕಾರಣವಾಗಿ ಒಂದು ಉತ್ತಮ ಕೃತಿಯನ್ನು ತಿರಸ್ಕರಿಸಿದ ಬಗ್ಗೆ ನಾವು ಬಹಳ ಸಂಕಟ ಪಡಬೇಕಾಗಿಲ್ಲ ಎಂಬ ಮಾತನ್ನು ಪ್ರಕಾಶನ ಕ್ಷೇತ್ರದ ಬಗ್ಗೆ ಬರೆದಿರುವ ಪಾಶ್ಚಿಮಾತ್ಯ ಲೇಖಕರು ಒಪ್ಪಿರುವಂತೆ ತೋರುತ್ತದೆ. ಏಕೆಂದರೆ, ಒಂದು ಉತ್ತಮ ಕೃತಿಯನ್ನು ಎಷ್ಟೇ ಸಲ ತಿರಸ್ಕರಿಸಲಾಗಿದ್ದರೂ ಅದು ಅಂತಿಮವಾಗಿ ಒಬ್ಬ ಪ್ರಕಾಶಕರಿಂದ ಪುರಸ್ಕೃತಗೊಳ್ಳುತ್ತದೆ ಎಂದು ಅವರು ಹೇಳುತ್ತಾರೆ. ಬಹುಶಃ ಅವರ ಪರಿಸ್ಥಿತಿಗಳಲ್ಲಿ ಮತ್ತು ಅನುಭವದಲ್ಲಿ ಇದು ಸರಿ ಇರಬಹುದು. ಮಾನವಿಕ ವಿದ್ಯೆಗಳು ಮತ್ತು ಸಮಾಜ ವಿಜ್ಞಾನಗಳ ವ್ಯಾಸಂಗಿಕ ಅಧ್ಯಯನಗಳಿಗೆ ಸಂಬಂಧಿಸಿದಂತೆ ಈ ಮಾತು ಭಾರತದಲ್ಲೂ ನಿಜವಾಗುತ್ತದೆ ಎಂದು ಡಾ. ಅದ್ವಾನಿ ಭಾವಿಸುತ್ತಾರಾದರೂ, ದುರದೃಷ್ಟವಶಾತ್ ಅತ್ಯುತ್ತಮ ಕಾರಣಗಳಿಗಾಗಿ ಇದು ಹೀಗಾಗುತ್ತಿಲ್ಲ. ಇಂತಹ ಬೆಳವಣಿಗೆ ಎರಡೂ ಕಡೆ ಹರಿತವಾದ ಮೊನೆಗಳನ್ನು ಹೊಂದಿರುವುದರ ಸ್ವರೂಪವನ್ನು ಅವರು ಎತ್ತಿ ತೋರಿಸಿದ್ದಾರೆ – ಒಂದು ಕಡೆ ಬರೆಯುವುದಕ್ಕೆ ಲೇಖಕರಿಗೆ ಪ್ರೋತ್ಸಾಹ ನೀಡುವುದು ಹಾಗೂ ಮತ್ತೊಂದು ಕಡೆ ಸಂಪಾದಕೀಯ ಮತ್ತು ಮುದ್ರಣ ಗುಣಮಟ್ಟಗಳನ್ನು ತಗ್ಗಿಸುವುದು ಹಾಗೂ ಅನುಮಾನಾಸ್ಪದ ಮಾರಾಟ ತಂತ್ರಗಳನ್ನು ಬಳಸುವುದು.

ನನ್ನ ದೃಷ್ಟಿಯಲ್ಲಿ ಭಾರತದಲ್ಲಿಂದು ನಾವು ಪ್ರತಿ ಯೋಗ್ಯ ಪುಸ್ತಕ ಬಹಳ ಕಾಲ ಕಾಯಬೇಕಾಗದೆ ಪ್ರಕಾಶಕರಿಂದ ಪುರಸ್ಕೃತವಾಗುತ್ತದೆ ಎಂದು ಹೇಳಲಾರೆವಾದರೂ, ಕಳೆದ ಸುಮಾರು ಹತ್ತು ವರ್ಷಗಳಲ್ಲಿ ಪರಿಸ್ಥಿತಿ ತೀವ್ರವಾಗಿ ಬದಲಾದಂತೆ ತೋರುತ್ತಿದೆ. ಅರುವತ್ತರ ದಶಕದಲ್ಲಿ ಭಾರತೀಯ ಲೇಖಕರು ಇಂಗ್ಲಿಷ್‌ನಲ್ಲಿ ಬರೆದ ಕಾಲ್ಪನಿಕ ಕೃತಿಗಳನ್ನು ಹಾಗೂ ಭಾರತೀಯ ಭಾಷೆಗಳಲ್ಲಿ ಬರೆದ ಕೃತಿಗಳ ಇಂಗ್ಲಿಷ್ ಅನುವಾದಗಳನ್ನು ಉತ್ತೇಜಿಸಿ, ಮಾರಲು ನಾವು ನಡೆಸಿದ ಪ್ರಯತ್ನಗಳಿಂದ ಮುದ್ರಿತ ಕೃತಿಗಳ ಸಂಖ್ಯೆ ಎಂದೂ 2000 ದಾಟಲಿಲ್ಲ ಹಾಗೂ ಅದಕ್ಕೂ ಶೋಚನೀಯವೆಂದರೆ 200 ಮುಟ್ಟಿದ್ದೇ ಅಪರೂಪವಾಗಿತ್ತು ಎಂಬುದು ನನ್ನ ನೆನಪಿಗೆ ಬರುತ್ತದೆ. ಇಂದು, 90ರ ದಶಕದಲ್ಲಿ, ಭಾರತದ ಸೃಜನಾತ್ಮಕ ಲೇಖಕರು ಉದ್ಯಮಶೀಲ ಪ್ರಕಾಶಕರ ತಂಡವೊಂದರ ಬೆಂಬಲ ಹೊಂದಿದ ರಾಷ್ಟ್ರೀಯ ವೇದಿಕೆಯನ್ನು ಕೊನೆಗಾದರೂ ಪಡೆದಿದ್ದಾರೆ. ಇದರಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ ಸದ್ಯದ

ಭಾರತೀಯ ಪರಿಸ್ಥಿತಿಗಳಲ್ಲಿರುವ ರೀತಿಯಲ್ಲಿ (ತುರ್ತುಪರಿಸ್ಥಿತಿಯ ನಂತರದ ಅವಧಿಯಲ್ಲಿ) ವೈಯಕ್ತಿಕ ಓದುಗ/ಕೊಳ್ಳುವವನು ಪುಸ್ತಕದ ಮಾರಾಟವನ್ನು ನಿರ್ಧರಿಸುತ್ತಾನೆಯೇ ಹೊರತು ಅನುದಾನ ಪಡೆದ ಸಂಸ್ಥೆಗಳಾಗಲೀ, ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆಗಳಾಗಲೀ ಅಲ್ಲ ಎಂಬುದೇ ಆಗಿದೆ. ಐವತ್ತರ ಮತ್ತು ಅರುವತ್ತರ ದಶಕದಲ್ಲಿ ಇದ್ದ ಪರಿಸ್ಥಿತಿಗೂ ಈಗಿನ ಪರಿಸ್ಥಿತಿಗೂ ಅಜಗಜಾಂತರ ಬದಲಾವಣೆ ಆಗಿದೆ. ಶ್ರದ್ಧಾಸಕ್ತಿಯುಳ್ಳ ಸಂಪಾದಕರು ಉತ್ತೇಜನ, ಪ್ರಚಾರ ಮತ್ತು ಮಾರಾಟ ವಿಭಾಗಗಳಲ್ಲಿ ಹೊಸ ಮಾರ್ಗಗಳನ್ನು ರೂಪಿಸುವವರ ನಿಕಟ ಸಹಯೋಗದಿಂದ ಹಾಗೂ ಬಹುಶಃ ಕೆಲವೊಮ್ಮೆ ಡಾ. ಅದ್ವಾನಿ ಅವರು ವರ್ಣಿಸಿದ ವೈಯಕ್ತಿಕ ಪ್ರಕಾಶಕರ ಸಹಯೋಗದಿಂದ ಶ್ರಮಿಸಿದ್ದು ಈ ಬದಲಾವಣೆಯ ಮತ್ತೊಂದು ಗಮನಾರ್ಹ ಅಂಶವಾಗಿದೆ. ಇದು ನಿಜವಾಗಿದ್ದರೆ, ಕೇವಲ ಲಾಭದ ದೃಷ್ಟಿಯಿಂದ ಸಂಪಾದಕೀಯ ಗುಣಮಟ್ಟ ತಗ್ಗಬಹುದಾದರೂ, ಪರಿಣತರಾದ ಹಾಗೂ ತತ್ವಗಳಿಗೆ ನಿಷ್ಠವಾದ ಸಂಪಾದಕರ ತಲೆಗಳು ಮತ್ತು ಹೃದಯಗಳಿಂದ ಆ ಗುಣಮಟ್ಟವನ್ನು ಎತ್ತರಿಸಲೂಬಹುದು ಎಂಬುದನ್ನು ನಾವು ರುಜುವಾತು ಮಾಡಿದ್ದೇವೆ. ಪುಸ್ತಕದಂಗಡಿಗಳಲ್ಲಿ ಈಗ ಲೇಖಕ ಮತ್ತು ಓದುಗ ಹೆಚ್ಚುಹೆಚ್ಚಾಗಿ ಸಂಧಿಸುತ್ತಿದ್ದಾರೆ; ಸಂಪಾದಕ ಮತ್ತು ಮಾರಾಟ ವಿಭಾಗದ ಆತನ ಸಹೋದ್ಯೋಗಿ ಮರೆಯಲ್ಲಿ ನಿಂತು ಹಣ ಎಣಿಸುತ್ತಿದ್ದಾರೆ.

# ಸಂಪಾದಕತ್ವದ ಕರೆ

ಹೆಚ್.ವೈ. ಶಾರದಾ ಪ್ರಸಾದ್

ನಾನು ಹೇಗೆ ಸಂಪಾದಕನಾದೆ ಎಂಬ ಬಗ್ಗೆ ಮಾತನಾಡಲು ನಾನೇಕೆ ಒಪ್ಪಿಕೊಂಡೆನೋ ನನಗೆ ಗೊತ್ತಿಲ್ಲ. ಇದು ಒಂದು ಪೇಚಿನ ಕೆಲಸ – ಏಕೆಂದರೆ ನಾನೇನು ಬರೆದರೂ ಅದನ್ನು ಸ್ವಪ್ರಚಾರ ಎಂದು ಅರ್ಥೈಸಬಹುದು. ನನ್ನ ಅನುಭವಗಳು ಬಹಳ ವಿಶೇಷವಾದುದೇನೂ ಅಲ್ಲ ಹಾಗೂ ಅವು ಬೇರೆಯವರಿಗೆ ಬಹಳ ಸ್ವಾರಸ್ಯವಾಗಿರಲಿಕ್ಕಿಲ್ಲ. ನನ್ನ ನೆನಪುಗಳ ಬುತ್ತಿಯನ್ನು ಬಿಚ್ಚಿ ಬರೆಯುವ ವಿಚಾರವನ್ನು-ಇದು ನಿವೃತ್ತಿ ಹೊಂದಿದ ಮನುಷ್ಯನ ಚಪಲ – ನಾನು ತಡೆಹಿಡಿದಿರುವುದಕ್ಕೆ ಅದೇ ಕಾರಣ.

ನನ್ನ ಬಾಲ್ಯದಿಂದಲೂ ನಾನು ಪತ್ರಕರ್ತನಾಗಲು ಬಯಸಿದ್ದರಿಂದ ನಾನು ಒಬ್ಬ ಸಂಪಾದಕನಾದೆ. ಏಕೆ ? ನಾನು ಹುಡುಗನಾಗಿದ್ದಾಗ ಇತರ ಹುಡುಗರು ಎಂಜಿನ್ ಡ್ರೈವರ್‌ಗಳಾಗಬೇಕೆಂದು ಏಕೆ ಬಯಸಿದರೋ ಅದೇ ಕಾರಣದಿಂದ ನಾನು ಪತ್ರಕರ್ತನಾಗಬಯಸಿದೆ. ತೀವ್ರ ಆಕರ್ಷಣೆಯೇ ಆ ಕಾರಣವಾಗಿತ್ತು. ಜನರು ವೃತ್ತಪತ್ರಿಕೆಗಳಿಗಾಗಿ ಕಾಯುತ್ತಿದ್ದದ್ದು, ಅವುಗಳಲ್ಲಿ ಮಗ್ನರಾಗಿರುತ್ತಿದ್ದದ್ದು, ಅವುಗಳನ್ನು ಹಂಚಿಕೊಂಡು ಅವುಗಳ ಬಗ್ಗೆ ಚರ್ಚಿಸುತ್ತಿದ್ದದ್ದು ನನ್ನ ಮನಸ್ಸನ್ನು ಸೆಳೆದಿತ್ತು. ಅದು ಸ್ವಾತಂತ್ರ್ಯ ಚಳವಳಿಯ ಕಾಲವಾಗಿತ್ತು. ಮಹಾತ್ಮ ಗಾಂಧಿಯವರು ಹೇಳಿದ್ದು, ಮಾಡಿದ್ದರ ವರದಿಗಳನ್ನು ಹಾಗೂ ಸಂಪಾದಕರ ಆವೇಶಪೂರಿತ ಲೇಖನಗಳನ್ನು ಓದಿದಾಗ ಮೈನವಿರೇಳುತ್ತಿತ್ತು. ಈ ಸಂಪಾದಕರಲ್ಲಿ ಕೆಲವರು ನಮ್ಮ ಕುಟುಂಬದ ಮಿತ್ರರಾಗಿದ್ದರಿಂದ ಅವರನ್ನು ಕಾಣುವ ಸೌಭಾಗ್ಯ ನನ್ನದಾಗಿತ್ತು.

ನನಗೆ ಆರು ವರ್ಷ ವಯಸ್ಸಾಗಿದ್ದಾಗ ನಾನು ಹೆಮ್ಮೆಯಿಂದ ಹಾಗೂ ಸ್ವಾಭಿಮಾನದಿಂದ ನಾನು ಪತ್ರಕರ್ತನಾಗುತ್ತೇನೆ ಎಂದು ಹೇಳಿಕೊಂಡೆ. ಶಾಲಾ ಬಾಲಕನಾಗಿ ನಾನು ಬರೆದ ಸಣ್ಣಪುಟ್ಟ ಲೇಖನಗಳು ಕೆಲವು ನಿಯತಕಾಲಿಕಗಳಲ್ಲಿ ಪ್ರಕಟವಾದವು ಹಾಗೂ ನನ್ನ ಸೋದರತ್ತೆಯರು, ಸೋದರ ಮಾವಂದಿರು ನನ್ನ ಬೆನ್ನು ತಟ್ಟಿದರು.

---

ಬೆಂಗಳೂರಿನಲ್ಲಿ ತಾಯಿನಾಡು ದಿನಪತ್ರಿಕೆ ಆಗ ಪ್ರಕಟಗೊಳ್ಳುತ್ತಿತ್ತು. ಅದರ ಸಂಪಾದಕರು "ನಗರಸಂಚಾರಿಯ ಡೈರಿ" ಎಂಬ ಶೀರ್ಷಿಕೆಯಲ್ಲಿ ಬರೆಯುತ್ತಿದ್ದ ದೈನಿಕ ಅಂಕಣ ಜನಪ್ರಿಯವಾಗಿತ್ತು. ನಾನು ಹೈಸ್ಕೂಲ್‌ನಲ್ಲಿದ್ದಾಗ ಕೆಲವು ಪ್ಯಾರಾಗಳನ್ನು ಬರೆದು ಸಂಪಾದಕರಿಗೆ ಕಳಿಸಿದೆ ಹಾಗೂ ಅವುಗಳನ್ನು ಪ್ರಕಟಿಸಲು ಅವರು ಒಪ್ಪಿದಾಗ ನಾನು ಸಂಭ್ರಮಪಟ್ಟೆ. ಒಂದು ಸಂದರ್ಭದಲ್ಲಿ ಅವರು ಪರಊರಿಗೆ ಹೋಗಬೇಕಾಯಿತು ಹಾಗೂ ನನಗೆ ಅಂಕಣ ಬರೆಯಲು ಹೇಳಿದರು. ಒದ್ದೆ ಮುದ್ರಣ ಕಾಗದದ ಮೇಲಿನ ಶಾಯಿಯ ವಾಸನೆ – ಆ ದಿನಗಳಲ್ಲಿ ಕರಡಚ್ಚುಗಳನ್ನು ತೆಗೆಯುತ್ತಿದ್ದುದೇ ಹಾಗೆ – ಅಮಲೇರಿಸುವಂತಿತ್ತು.

ನಂತರ ನಾನು ಕಾಲೇಜ್‌ಗೆ ಹೋದೆ ಹಾಗೂ 'ಭಾರತ ಬಿಟ್ಟು ತೊಲಗಿ' ಚಳವಳಿಯಲ್ಲಿ ಭಾಗವಹಿಸಿ ಎಂಟು ತಿಂಗಳ ಜೈಲುವಾಸ ಅನುಭವಿಸಿ ಪದವಿ ಪಡೆಯಲು ಪುನಃ ಕಾಲೇಜ್ ಸೇರಿದೆ. ಜೈಲಿನಲ್ಲಿದ್ದಾಗ ರಾಜಕಾರಣಿಗಳ ನಡವಳಿಕೆಯನ್ನು ಕಂಡಿದ್ದರಿಂದ ಅವರಂತೆ ಒಬ್ಬನಾಗಲು ನಾನು ಇಚ್ಛಿಸಲಿಲ್ಲ. ಜನರಿಗೆ ಸೇವೆ ಮಾಡುವ ಬೇರೊಂದು ಉತ್ತಮ ಮಾರ್ಗವಿತ್ತು ಹಾಗೂ ಅದು ಪತ್ರಿಕೆಗಳ ಮೂಲಕ ಮಾಡಬಹುದಾದ ಸೇವೆಯಾಗಿತ್ತು. ಪತ್ರಿಕೋದ್ಯಮದಲ್ಲಿ ಒಳ್ಳೆಯ ಸಂಬಳ ಇಲ್ಲ ಎಂಬುದು ನನಗೆ ತಿಳಿದಿತ್ತು; ಆದರೆ ಅದರ ಸಡಗರ, ಸಂಭ್ರಮಗಳಿಗೆ ಬೇರೆ ಎಷ್ಟು ವೃತ್ತಿಗಳು ಎಣೆಯಾಗಬಲ್ಲವು ?

ಕಾಲೇಜಿನ ನಂತರ ನಾನು ನೇರವಾಗಿ ಮದ್ರಾಸ್‌ಗೆ ಹೋಗಿ ಅಲ್ಲಿ ದಿ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕೆಯ ಸಂಪಾದಕರಾಗಿದ್ದ ಹಾಗೂ ಸಾಹಸಿ ಎಂದು ಹೆಸರಾಗಿದ್ದ ಖಾಸಾ ಸುಬ್ಬರಾವ್ ಅವರನ್ನು ಭೇಟಿಯಾದೆ. ಸೈಮನ್ ಕಮಿಷನ್ ವಿರುದ್ಧ ನಡೆಸಿದ ಪ್ರದರ್ಶನದಲ್ಲಿ ಬಿದ್ದ ಲಾಠಿ ಏಟುಗಳ ಗುರುತುಗಳು ಅವರ ಬೆನ್ನ ಮೇಲಿದ್ದವು ಎಂದು ಹೇಳಲಾಗಿತ್ತು. ಕೆಲಸಕ್ಕೆ ಸೇರುವಂತೆ ಅವರು ನನಗೆ ಹೇಳಿದರು. ಅದೇ ಕಾಲಕ್ಕೆ ಪ್ರತಿ ಸಂಜೆಯನ್ನೂ ನಾನು ಆಫೀಸಿನಲ್ಲಿ ಕಳೆಯುವ ಕೊನೆಯ ಸಂಜೆ ಎಂದು ಭಾವಿಸಬೇಕೆಂದೂ ಎಚ್ಚರಿಸಿದರು. ಅಂತಹ ನಿಲುವಿನಿಂದ ವೃತ್ತಿಯ ಅನಿಶ್ಚಯತೆಗಳನ್ನು ಎದುರಿಸುವುದು ಹೊಸ ಉದ್ಯೋಗಿಗೆ ಸಾಧ್ಯವಾಗುತ್ತದೆ ಎಂದು ಅವರು ಹೇಳಿದರು. ನನ್ನ ನೇಮಕಾತಿಯ ಕಾಗದಕ್ಕೆ ಮ್ಯಾನೇಜರ್ ಸಹಿ ಹಾಕಿದ್ದು ಸಹಜವೇ ಆಗಿತ್ತು.

ರಾತ್ರಿ ಪಾಳಿಯ ಕೆಲಸ – ಇತರರು ಮಲಗಿದ್ದಾಗ ಕೆಲಸ ಮಾಡುವುದು, ಅವರು ಬೆಳಿಗ್ಗೆ ಎದ್ದು ಏನು ಓದುತ್ತಾರೆನ್ನುವುದನ್ನು ಮೊದಲೇ ತಿಳಿಯುವುದು, ನಾವು ಕೆಲಸ ಮಾಡಿದ ಮೇಜುಗಳ ಮೇಲೆ ಮಲಗಿ ರೋಟರಿ ಮುದ್ರಣ ಯಂತ್ರಗಳ ಶಬ್ದದ ಜೋಗುಳಕ್ಕೆ ನಿದ್ರಿಸುವುದು – ವಿಶೇಷವಾಗಿ ಶ್ರಮದಾಯಕವಾಗಿತ್ತು ಹಾಗೂ ರೋಚಕವಾಗಿತ್ತು. ನನ್ನ ವಯೋಗುಂಪಿಗೆ ಸೇರಿದ ಸಹೋದ್ಯೋಗಿಗಳ ಹಾಗೂ ಅನೇಕ ವರ್ಷಗಳ ದುಡಿಮೆಯಿಂದ ಎಲ್ಲವನ್ನೂ ವಿನೋದ, ವ್ಯಂಗ್ಯಗಳಿಂದ ನೋಡುತ್ತಿದ್ದ ಆದರೆ ಬಹಳ ಉದಾರಿಗಳೂ ಆಗಿದ್ದ ಹಿರಿಯ ಸಹೋದ್ಯೋಗಿಗಳ ಸಹವಾಸ ಅಷ್ಟೇ ಚೇತೋಹಾರಿಯಾಗಿತ್ತು.

1945ರ ಆ ವರ್ಷದ ಕೊನೆಯಲ್ಲಿ ನನಗೊಂದು ಕನಸಿನಂತಹ ಅನುಭವವಾಯಿತು. ಮದ್ರಾಸ್‌ಗೆ ಭೇಟಿ ನೀಡಿದ್ದ ಮಹಾತ್ಮ ಗಾಂಧಿಯವರನ್ನು ನಾನು ಆಗ ಸಂಧಿಸಿದೆ. ಅವರ ಹಿರಿಯ ಮೊಮ್ಮಗ ಕಾಂತಿಲಾಲ್ ನನ್ನ ಗೆಳೆಯರಾಗಿದ್ದರು ಹಾಗೂ ಗಾಂಧಿಯವರಲ್ಲಿಗೆ ನನ್ನನ್ನು ಕರೆದೊಯ್ಯಲು ಅವರು ದುಂಬಾಲು ಬಿದ್ದರು. ಮಹಾತ್ಮ ಅವರ ಸಮಯವನ್ನು ಕಳೆಯುವ ಹಕ್ಕು ನನಗಿರಲಿಲ್ಲವಾದ್ದರಿಂದ ನಾನು ಹೋಗಲು ಹಿಂಜರಿದೆ. ಆದರೆ "ನಾನು ಎಂತಹವರ ಸಹವಾಸದಲ್ಲಿದ್ದೇನೆ ಎಂಬುದನ್ನು ತಿಳಿಯಲು ನನ್ನ ಸ್ನೇಹಿತರನ್ನು ತಮ್ಮಲ್ಲಿಗೆ ಕರೆದುಕೊಂಡು ಬರಬೇಕೆಂದು ನನ್ನ ಅಜ್ಜ ಹೇಳಿದ್ದಾರೆ" ಎಂದು ಕಾಂತಿಲಾಲ್ ಮಾಡಿದ ವಾದಕ್ಕೆ ಉತ್ತರವಿರಲಿಲ್ಲ.

ಬೆಳಗಿನ ಜಾವದ ಸಮಯ. ವರ್ಷದ ಆ ಸಮಯ ಮತ್ತು ಆ ದಿನ ಮದ್ರಾಸ್ ಸಹ ತಂಪಾಗಿತ್ತು. "ಏನು ಮಾಡುತ್ತಿದ್ದೀಯ" ಎಂದು ಗಾಂಧೀಜಿ ನನ್ನನ್ನು ಕೇಳಿದರು. ನಾನು ಉತ್ತರಿಸಿದಾಗ ಅವರು ಕಣ್ಣು ಮಿನುಗಿಸಿ, 'ಓ ! ಜಗತ್ತು ಬದಲಾಯಿಸುವುದಕ್ಕೆ ಹೊರಟಿದ್ದೀಯಾ !' ಎಂದರು. ಅವರು ತಮ್ಮ ಹೆಬ್ಬೆರಳು ಮತ್ತು ತೋರು ಬೆರಳಿನಿಂದ 21 ವರ್ಷ ವಯಸ್ಸಿನ ನನ್ನ ಕಿವಿಯನ್ನು ಹಿಂಡಿದ್ದು ನೆನೆಸಿಕೊಂಡರೆ ಈಗಲೂ ಅದು ಅನುಭವವಾಗುತ್ತದೆ.

ಈ ನಡುವಣ ವರ್ಷಗಳಲ್ಲಿ ಅವರ ಆ ಮಾತು ಜಗತ್ತನ್ನು ಬದಲಾಯಿಸುವ ನನ್ನ ಸಾಮರ್ಥ್ಯದ ಬಗ್ಗೆ ಹೆಚ್ಚು ಯೋಚಿಸದಿರಲು ನನಗೆ ನೆರವಾಗಿದೆ.

ಮದ್ರಾಸ್‌ನಿಂದ ನಾನು ಎಕ್ಸ್‌ಪ್ರೆಸ್ ಗುಂಪಿನ ಬಾಂಬೆ ಆವರ್ತಿಯ ಪತ್ರಿಕೆಗೆ ಹೋದೆ. ಪೋತನ್ ಜೋಸೆಫ್ ಮತ್ತು ಫ್ರಾಂಕ್ ಮೊರೇಸ್ ಅವರಂತಹ ಸಂಪಾದಕರೊಂದಿಗೆ ಕೆಲಸ ಮಾಡುವ ಹಾಗೂ ದಿ ಬಾಂಬೆ ಕ್ರಾನಿಕಲ್ ನ ಎಸ್.ಎ. ಬ್ರೆಲ್ವಿ, ಜಿ.ಎನ್. ಆಚಾರ್ಯ ಮತ್ತು ಕೆ.ಯು. ಕಿಣಿ ಅವರಂತಹ ಸಂಪಾದಕರ ಪರಿಚಯದ ಭಾಗ್ಯ ನನ್ನದಾಗಿತ್ತು. ದಿ ಫ್ರೀ ಪ್ರೆಸ್ ಜರ್ನಲ್‌ನ ಎಂ.ವಿ. ಕಾಮತ್ ನನ್ನ ಒಳ್ಳೆಯ ಮಿತ್ರರಾದರು. ಮೈಸೂರಿನಲ್ಲಿ ಹಿಂದೆ ನನ್ನ ನೆರೆಯವರಾಗಿದ್ದ ಆರ್.ಕೆ. ಲಕ್ಷ್ಮಣ್ ಸಹ ಆಗ ಆ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದರು. ನಾನು ಪರಿಚಯ ಪಡೆದ ಇತರ ಸ್ವಾರಸ್ಯಪೂರ್ಣ ವ್ಯಕ್ತಿಗಳೆಂದರೆ ಡಿ.ಜಿ. ತೆಂಡೂಲ್ಕರ್ ಮತ್ತು ಎಸ್.ಆರ್. ಟಿಕೇಕರ್.

ಪತ್ರಿಕಾ ವೃತ್ತಿ ಆಗ ತುಂಬಾ ಉದ್ವೇಗಕರವಾಗಿತ್ತು – ಕಡಿಮೆ ಸಂಬಳ ಪಡೆಯುತ್ತಿದ್ದ ಮತ್ತು ಕೆಚ್ಚಿನ ನೌಕರರು ಮಾಲೀಕರರೊಂದಿಗೆ ಸದಾ ಸಂಘರ್ಷಿಸುತ್ತಿದ್ದರು. ನಮ್ಮ ಪತ್ರಿಕೆಯ ಮುದ್ರಣ ವಿಭಾಗದ ನೌಕರರು ಮುಷ್ಕರ ಹೂಡಿದ್ದರಿಂದ ಭಾರತ ಸ್ವಾತಂತ್ರ್ಯ ಗಳಿಸಿದ ರಾತ್ರಿ ನಮ್ಮ ಪತ್ರಿಕೆಯನ್ನು ಹೊರತರಲಾಗದೆ ತೀವ್ರ ಆಶಾಭಂಗವಾಗಿತ್ತು. ಆದರೆ ಓಹ್, ಇನ್ನೊಂದು ರಾತ್ರಿ – 30ನೆ ಜನವರಿ 1948ರ ರಾತ್ರಿ – ಕೆಲಸ ಮಾಡುವುದು ಅದೆಂತಹ ಅನುಭವವಾಗಿತ್ತು.

ಪತ್ರಕರ್ತರ ಕಾರ್ಮಿಕ ಸಂಘದ ಚಳವಳಿಯಲ್ಲಿ ನಾನು ಸಕ್ರಿಯವಾಗಿದ್ದೆ ಹಾಗೂ ಅದರಿಂದ ನಾನು ಕೆಲಸ ಕಳೆದುಕೊಳ್ಳಬೇಕಾಯಿತು. ಹತ್ತು ವರ್ಷಗಳ ದುಡಿಮೆಯ

ನಂತರ ನಾನು ದಿನಪತ್ರಿಕೆಯ ಪ್ರಪಂಚವನ್ನು ತ್ಯಜಿಸಬೇಕಾಯಿತು. ಕಿರುಕುಳದ ಮನುಷ್ಯ ಎಂಬ ನನ್ನ ಖ್ಯಾತಿಯಿಂದಾಗಿ ಇತರ ವೃತ್ತಪತ್ರಿಕಾ ಮಾಲೀಕರು ನನ್ನನ್ನು ಮುಟ್ಟುವ ಗೋಜಿಗೆ ಹೋಗಲಿಲ್ಲ. ಭಾರತ ಸರ್ಕಾರದ ಪ್ರಕಾಶನ ವಿಭಾಗದ ನಿರ್ದೇಶಕರು ಸರ್ಕಾರಿ ಸೇವೆಗೆ ಸೇರುವಂತೆ ನನ್ನ ಮನವೊಲಿಸಿದರು. ನನ್ನ 'ಸ್ವಾತಂತ್ರ್ಯ' ವನ್ನುಳಿಸಿಕೊಳ್ಳುವ ಇಚ್ಛೆಯಿಂದಾಗಿ ನಾನು ಸರ್ಕಾರಿ ಸೇವಗೆ ಸೇರಲು ಹಿಂಜರಿದಾಗ, ಅವರು 'ನೀವು ಗೋಯಂಕಾ ಅವರಿಗಾಗಿ ಕೆಲಸ ಮಾಡಬಹುದಾದರೆ, ಜವಹರಲಾಲ್ ನೆಹರು ಅವರಿಗಾಗಿ ಏಕೆ ಮಾಡಬಾರದು ?' ಎಂದು ಪ್ರಶ್ನಿಸಿದಾಗ ಸೂಕ್ತ ಪ್ರತ್ಯುತ್ತರ ನನ್ನಲ್ಲಿರಲಿಲ್ಲ.

ಹೀಗೆ ನಾನು ಬಾಂಬೆಯಿಂದ ದೆಹಲಿಗೆ ಹೋಗಿ ಪುಸ್ತಕಗಳು, ವಿವಿಧ ಸಂಗ್ರಹಗಳು ಮತ್ತು ಅಧಿಕೃತ ನಿಯತಕಾಲಿಕಗಳ ಸಂಪಾದಕನಾದೆ. ನಾನು ಸಂಪಾದಿಸಿದ ಅಥವಾ ಪರಿಷ್ಕರಿಸಿದ ಹಸ್ತಪ್ರತಿಗಳ ಲೆಕ್ಕವನ್ನು ನಾನು ಇಟ್ಟಿಲ್ಲವಾದರೂ, ಸಾಮಾನ್ಯವಾಗಿ ಅಧಿಕೃತ ಪ್ರಚಾರ ಸಾಮಗ್ರಿಯ ರಾಶಿಯಲ್ಲಿ ಕಂಡುಬರುವ ಅವಿದ್ಯೆಗಿಂತಲೂ ಬಹಳ ಕಡಿಮೆ ವಿದ್ಯಾಹೀನತೆ ಅವುಗಳಲ್ಲಿತ್ತು ಎಂದು ನನಗೆ ನಾನೇ ಬೆನ್ನು ತಟ್ಟಿಕೊಳ್ಳುತ್ತೇನೆ. ನನಗೆ ವಹಿಸಿದ ಕಾರ್ಯಭಾರಗಳಲ್ಲಿ ನನಗೆ ಬಹಳ ತೃಪ್ತಿ ಕೊಟ್ಟಿದ್ದೆಂದರೆ ಜವಹರಲಾಲ್ ನೆಹರು ಅವರ ಭಾಷಣಗಳ ಸಂಪುಟಗಳನ್ನು ಪರಿಷ್ಕರಿಸುವ ಕಾರ್ಯ. ತಾವು ಮಾಡಿದ ಭಾಷಣಗಳನ್ನು ಮೊದಲೇ ಸಿದ್ಧಪಡಿಸಿರಲಿಲ್ಲವಾದ್ದರಿಂದ ಅವುಗಳಲ್ಲಿ ಹೇಳಿದ್ದನ್ನೇ ಹೇಳಿರಬಹುದೆಂದೂ ಅದರಿಂದಾಗಿ ಅವುಗಳನ್ನು ತಿದ್ದಿ ಪರಿಷ್ಕರಿಸಬೇಕೆಂದೂ ಪಂಡಿತ್‌ಜಿ ಅವರು ಸೂಚಿಸಿದ್ದನ್ನು ಲೇಖನಗಳ ಈ ಸಂಗ್ರಹದಲ್ಲಿ ಬೇರೆಡೆ ನಾನು ವಿವರಿಸಿದ್ದೇನೆ. ವೃತ್ತಪತ್ರಿಕೆಯೊಂದರ ಉಪಸಂಪಾದಕನ ಧಾರ್ಷ್ಟ್ಯದಿಂದ ನೀಲಿ ಪೆನ್ಸಿಲ್ ಅನ್ನು ಬಳಸಿ ನಾನು ತಿದ್ದಿ ಕಳಿಸಿದ್ದ ನೂರು ಪುಟಗಳು ಅವರ ಸಮ್ಮತಿಯೊಂದಿಗೆ ಹಿಂದೆ ಬಂದವು. ನಾನು ಹೇಳಿದ್ದೆಲ್ಲಾ ಪರಮಪವಿತ್ರ ಎಂದು ಭಾವಿಸದಿರುವಂತಹವರು ಇದ್ದಾರೆ ಎಂದು ತಿಳಿದಾಗ ನನಗೆ ಸಮಾಧಾನವೆನಿಸಿತು.

ಯೋಜನಾ ಆಯೋಗದ 'ಯೋಜನಾ' ಪತ್ರಿಕೆಗೆ ನಾನು ಮುಖ್ಯ ಸಂಪಾದಕನಾಗಿದ್ದಾಗ ಹಿರಿಯ ಅಧಿಕಾರಿಗಳು ಮತ್ತು ವಿದ್ವಾಂಸರಿಂದ ನನಗೆ ದೊಡ್ಡ ಬೆಂಬಲ ದೊರೆಯಿತು. ಸರ್ಕಾರ ಅನುಸರಿಸಿದ ಅಭಿವೃದ್ಧಿ ಕಾರ್ಯತಂತ್ರಗಳನ್ನು ಟೀಕಿಸುವ ಲೇಖನಗಳನ್ನು ಪ್ರಕಟಿಸಲು ನಾನು ಹಿಂಜರಿಯಲಿಲ್ಲ. ಮೇಲಧಿಕಾರಿಗಳ ಸಲಹೆಯನ್ನು ನಾನು ಕೋರಲಿಲ್ಲ; ಏಕೆಂದರೆ ಸಲಹೆ ಕೇಳಿದರೆ ಅದನ್ನು ಕೊಡಲಾಗುತ್ತದೆ ಎಂಬುದು ನನಗೆ ತಿಳಿದಿತ್ತು. ಆ ದಿನಗಳಲ್ಲಿ ಯೋಜನಾ ಆಯೋಗ ಒಂದು ಸರ್ಕಾರಿ ಇಲಾಖೆಗಿಂತಲೂ ಹೆಚ್ಚಾಗಿ ಒಂದು ವಿಶ್ವವಿದ್ಯಾಲಯದಂತಿತ್ತು ಹಾಗೂ ಅಲ್ಲಿ ಕೆಲಸ ಮಾಡುವುದೇ ಒಂದು ಶಿಕ್ಷಣವಾಗಿತ್ತು. ದೇಶದೆಲ್ಲೆಡೆಯ ಅನೇಕ ಸಮಾಜವಿಜ್ಞಾನಿಗಳ ಪರಿಚಯವನ್ನು ನಾನು ಅಲ್ಲಿ ಮಾಡಿಕೊಂಡೆ. ಪತ್ರಿಕಾ ವೃತ್ತಿಯ ಇಬ್ಬರು ಧೀಮಂತರಾದ ಎಂ. ಚಲಪತಿ ರಾವ್ ಮತ್ತು ಶಂಕರ್ ಪಿಳ್ಳೈ ಅವರ ಆತ್ಮೀಯ ಬಳಗಕ್ಕೆ ನಾನು ಸೇರಿದೆ ಹಾಗೂ ಕೃಷ್ಣ ಕೃಪಲಾನಿ, ಖುಷವಂತ್‌ಸಿಂಗ್

ಮತ್ತು ರೊಮೇಶ್ ಥಾಪರ್ ಅವರು ಪರಿಚಯವೂ ನನಗಾಯಿತು. ಶ್ರೇಷ್ಠ ಮುದ್ರಣಕಾರರಾದ ಜಿ.ಯು. ಮೆಹ್ತಾ ಅವರ ಹೆಸರನ್ನು ನಾನು ಹೇಳದಿರಬಾರದು.

ಯೋಜನಾ ಆಯೋಗದಲ್ಲಿ ನಾನಿದ್ದ ಕೊನೆಯ ವರ್ಷದಲ್ಲಿ ನನಗೊಂದು ತುಂಬಾ ಅನಿರೀಕ್ಷಿತ ಅವಕಾಶ ದೊರೆಯಿತು. ಶ್ರೀ ನೆಹರು ಅವರ ನಿಧನಾನಂತರ ಅವರ ಬಗ್ಗೆ ನ್ಯೂಯಾರ್ಕ್, ಲಂಡನ್ ಮತ್ತು ವಿಶ್ವದ ಇತರ ರಾಜಧಾನಿಗಳಲ್ಲಿ ಪ್ರದರ್ಶನವೊಂದನ್ನು ಏರ್ಪಡಿಸಲು ನಿರ್ಧರಿಸಲಾಯಿತು. ವಿಶ್ವವಿಖ್ಯಾತ ವಿನ್ಯಾಸಗಾರ ಚಾರ್ಲ್ಸ್ ಈಮ್ಸ್ ಅವರು ಪ್ರದರ್ಶನದ ಕಾರ್ಯವನ್ನು ಕೈಗೊಂಡರು. ಸಮಕಾಲೀನ ಭಾರತೀಯ ಚರಿತ್ರೆಯ ಬಗ್ಗೆ ತಿಳಿದುಕೊಂಡಿದ್ದ ವ್ಯಕ್ತಿಯೊಬ್ಬರು ಸಂಪಾದಕೀಯ ಸಲಹೆಗಾರರಾಗಿ ತಮಗೆ ಬೇಕೆಂದು ಅವರು ಇಚ್ಛಿಸಿದರು. ಆ ಸ್ಥಾನಕ್ಕೆ ನನ್ನ ಹೆಸರನ್ನು ಸೂಚಿಸಲಾಯಿತು. ಅವರೊಂದಿಗೆ ಕೆಲಸ ಮಾಡುತ್ತಿದ್ದಾಗ ನನ್ನ ಚಿತ್ತಭಿತ್ತಿಯಲ್ಲಿ ಹೊಸ ಬಾಗಿಲುಗಳು ತೆಗೆದುಕೊಂಡವು, ಧ್ವನಿ ಮತ್ತು ಅರ್ಥವಷ್ಟೇ ಅಲ್ಲದೆ ಆಕಾರ ಮತ್ತು ಅಂತರವಾಗಿಯೂ ಪದಗಳನ್ನು ಹೊಸ ರೀತಿಯಲ್ಲಿ ನೋಡುವ ದೃಷ್ಟಿ ಉಂಟಾಯಿತು. ಈಮ್ಸ್ ಅವರ 'ಜವಹರಲಾಲ್ ನೆಹರು ಅವರ ಜೀವನ ಮತ್ತು ಅವರ ಭಾರತ' ಶೀರ್ಷಿಕೆಯ ಪ್ರದರ್ಶನವನ್ನು ಜೀವನಚರಿತ್ರೆಯ ಪ್ರದರ್ಶನಗಳ ಕಲೆಯಲ್ಲಿ ಶ್ರೇಷ್ಠವಾದದ್ದು ಎಂದು ಹಾಡಿಹೊಗಳಲಾಗಿದೆ. ಅದರಿಂದ ಪ್ರದರ್ಶನಗಳ ಮೂಲ ರಹಸ್ಯವೊಂದನ್ನು ನಾನು ಕಲಿತೆ – ಅವು ನೀವು ನಡೆಯುತ್ತಾ ನೋಡುವ ಆಲ್ಬಂನಂತೆ. ಇದರ ಅನುಭವ 1969ರ ಗಾಂಧಿ ಶತಮಾನೋತ್ಸವ ಪ್ರದರ್ಶನವನ್ನು ವ್ಯವಸ್ಥೆ ಮಾಡಲು ನನ್ನ ನೆರವಿಗೆ ಬಂತು. ಈ ಮಧ್ಯೆ, ನೆಹರು ಪ್ರದರ್ಶನದಿಂದಾಗಿಯೇ ನಾನು ಶ್ರೀಮತಿ ಇಂದಿರಾ ಗಾಂಧಿ ಅವರ ಸಿಬ್ಬಂದಿಯವರಲ್ಲಿ ಒಬ್ಬನಾಗಿ ಸೇರಿದೆ.

ಪ್ರಧಾನ ಮಂತ್ರಿಯವರ ಕಚೇರಿಯಲ್ಲಿ ವಾರ್ತಾ ಸಲಹೆಗಾರನಾಗಿ ನನ್ನ ಕೆಲಸ ಪತ್ರಿಕಾ ಸಂಬಂಧಗಳ ನಿರ್ವಹಣೆ ಅಥವಾ ಟಿಪ್ಪಣಿಗಳನ್ನು ಮತ್ತು ಕರಡುಗಳನ್ನು ಸಿದ್ಧಪಡಿಸುವುದಕ್ಕೆ ಸೀಮಿತವಾಗಿರಲಿಲ್ಲ. ಪುಸ್ತಕಗಳ ಸಂಪಾದನೆ ಮತ್ತು ಮುದ್ರಣದಲ್ಲಿ ನನ್ನ ಪಾತ್ರವನ್ನು ಉಳಿಸಿಕೊಳ್ಳುವುದು ನನಗೆ ಸಾಧ್ಯವಾಗಿತ್ತು. ನಾಲ್ಕು ಸಂಪುಟಗಳ ಸ್ಪಿರಿಟ್ ಆಫ್ ಇಂಡಿಯಾ ಮತ್ತು ನೆಹರು ಶತಮಾನೋತ್ಸವ ಸಂಪುಟ ಈ ಎರಡು ಪುಸ್ತಕಗಳ ಪ್ರಕಟಣೆಯಲ್ಲಿ ನಾನು ಸಹಭಾಗಿಯಾಗಿದ್ದು, ಇವು ನಾನು ಒಂದಿಷ್ಟು ಹೆಮ್ಮೆಪಡುವ ಪುಸ್ತಕಗಳಾಗಿವೆ.

ಆದರೆ ಒಂದು ವಿಷಾದ ಉಳಿದೇ ಇದೆ: ನನ್ನ ಮೊದಲ ವೃತ್ತಿಯಲ್ಲಿ ನಾನು ಮುಂದುವರೆದಿದ್ದರೆ ಬಹುಶಃ ವೃತ್ತಪತ್ರಿಕೆಯೊಂದರ ಸಂಪಾದಕನಾಗುತ್ತಿದ್ದೆನೋ ಏನೋ.

# ನಾನು ಹೇಗೆ ಸಂಪಾದಕನಾದೆ

## ರುಕುನ್ ಅದ್ವಾನಿ

ನನ್ನ ಪ್ರೌಢಶಾಲಾ ದಿನಗಳಲ್ಲಿ ನಾನು ಡಬ್ಲ್ಯು.ಇ. ಜಾನ್ಸ್, ಬಿಗ್ಗಲ್ಸ್‌ನ ಬಗ್ಗೆ ಬರೆದ ಪುಸ್ತಕಗಳನ್ನು ಓದಿದೆ. ಈ ಬಿಗ್ಗಲ್ಸ್ ಮೊದಲ ವಿಶ್ವಯುದ್ಧದ ಕಾಲ್ಪನಿಕ ವೈಮಾನಿಕ ಹೀರೊ ಆಗಿದ್ದ ಹಾಗೂ ಬೇರನ್ ವಾನ್ ರಿಕ್ಟೋಫೆನ್‌ನಂತಹ ಜರ್ಮನ್ ವೈಮಾನಿಕರನ್ನು ಸೋಲಿಸಿದವನಾಗಿದ್ದ; ನಂತರ ವೈಮಾನಿಕ ಇಂಜಿನಿಯರ್ ಆಗಿದ್ದ ನೆವಿಲ್ ಶೂಟ್ ಬರೆದ, ತಾಂತ್ರಿಕತೆಯ ವಸ್ತುವನ್ನುಳ್ಳ ಪ್ರಣಯ ಕಾದಂಬರಿಗಳಲ್ಲಿ ನನ್ನ ಮನಸ್ಸನ್ನು ಮುಳುಗಿಸಿದೆ. ಈ ಕಾದಂಬರಿಗಳ ಹೀರೋಗಳು ವಿಮಾನಗಳ ಪ್ರೊಪೆಲ್ಲರ್‌ಗಳನ್ನೂ, ಹೆಂಗಸರ ಹೃದಯಗಳನ್ನೂ ತಿರುಗಿಸುತ್ತಿದ್ದರು. ದೊಗಲೆ ಷರಾಯಿ ಹಾಗೂ ಕಂದುಬಣ್ಣದ ಚರ್ಮದ ಜಾಕೆಟ್ ತೊಟ್ಟು ನನಗಾಗಿ ಕಾಯುತ್ತಿದ್ದ ಮಹಿಳಾಮಣಿಯರ ಹೃದಯಗಳನ್ನು ಗೆಲ್ಲಲು ವಿಮಾನದ ಕಾಕ್‌ಪಿಟ್‌ನಿಂದ ಕೆಳಗಿಳಿಯುವ ವಿಮಾನಚಾಲಕನಾಗುವುದೇ ನನ್ನ ವಿಧಿಲಿಖಿತದಲ್ಲಿದೆ ಎಂದು ನಾನಾಗ ತಿಳಿದಿದ್ದೆ.

ವಿಮಾನದ ನಿಯಂತ್ರಣ ಸಾಧನದ ಬದಲಿಗೆ ನೀಲಿ ಪೆನ್ಸಿಲ್ ಅನ್ನು ಈಗ ಹಿಡಿದಿರುವ ನಾನು ಜೀವನ ಬದಲಾಗಿರುವುದನ್ನು ಕಾಣುತ್ತಿದ್ದೇನೆ. ನನ್ನ ಬಳಿ ಇರುವ ಮದ್ದುಗುಂಡುಗಳೆಂದರೆ ಕೆಲವು ಚತುರೋಕ್ತಿಗಳಷ್ಟೆ; ನಾನು ಇವುಗಳಿಂದ ಗಳಿಸುವ ವಿಜಯಗಳು ಇತರರ ಗದ್ಯದ ಮೇಲೆ ಗಳಿಸುವಂತಹವು ಮಾತ್ರ. ಇದು ವೀರೋಚಿತವಲ್ಲದ ಶ್ರಮ ಇರಬಹುದಾದರೂ, ಬಹಳ ಸ್ವಾರಸ್ಯವಾದದ್ದೇ. 1975ರಲ್ಲಿ ಇದು ಪ್ರಾರಂಭವಾಯಿತು.

ಆ ವರ್ಷ ನಾನು ಇಂಗ್ಲಿಷ್‌ನಲ್ಲಿ ಬಿಎ ಆನರ್ಸ್ ಮುಗಿಸಿದೆ; ವಿಮಾನಪಡೆಗೆ ಅದು ಸೂಕ್ತ ಅರ್ಹತೆಯಾಗಿರಲಿಲ್ಲ. ಪುಸ್ತಕದಂಗಡಿಯೊಂದನ್ನು ಇಟ್ಟುಕೊಂಡಿರುವ ನನ್ನ ತಂದೆಗೆ ಪ್ರಕಾಶನ ಕ್ಷೇತ್ರದ ಜನರ ಪರಿಚಯ ಇತ್ತು. ಎಂ.ಎ. ಮಾಡುವ ಇಚ್ಛೆ ಇಲ್ಲ ಎಂದು ಖಚಿತವಾಗಿ ನೀನು ತಿಳಿದಿದ್ದರೆ ನನ್ನ ಪರಿಚಿತರನ್ನು ನೀನು

ಭೇಟಿಯಾಗಬಹುದು ಎಂದು ಅವರು ಸಲಹೆ ಮಾಡಿದರು. ನನಗೆ ಪುಸ್ತಕಗಳ ಬಗ್ಗೆ ಆಸಕ್ತಿ ಇತ್ತು ಹಾಗೂ ಅವುಗಳ ಸೃಷ್ಟಿಗೆ ನೆರವಾಗುವ ವಿಚಾರ ಸಾಕಷ್ಟು ಉತ್ಸಾಹಕಾರಿಯಾಗಿತ್ತು – ಕೇಳುವವರಿಲ್ಲದ ಎಂ. ಎ. ಪದವಿಯನ್ನು ಪಡೆಯುವುದಕ್ಕಿಂತ ಅಥವಾ ಹೀಗೆ ನಡೆಯುತ್ತದೆ ಎಂದು ಹೇಳಬಹುದಾದ ನನ್ನ ತಂದೆಯ ವ್ಯಾಪಾರವನ್ನು ನೋಡಿಕೊಳ್ಳುವ ಸಪ್ಪೆ ಕೆಲಸಕ್ಕಿಂತ ಇದು ನಿಶ್ಚಿತವಾಗಿ ಹೆಚ್ಚು ಮೆಚ್ಚಿನ ಸಲಹೆಯಾಗಿತ್ತು. ಹೀಗಾಗಿ ನಾನು ದಹೆಲಿ ಸಾರಿಗೆ ಬಸ್ಸಿಗೆ ಕೈಕಾಲುಗಳಿಂದ ಜೋತು ಬಿದ್ದು ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನ (ಒಯುಪಿ) ಸಂಪಾದಕೀಯ ಕಚೇರಿ ಇದ್ದ ದರಿಯಾಗಂಜ್‌ಗೆ ಪ್ರಯಾಣ ಮಾಡಿದೆ.

ಆಗ ಒಯುಪಿಯ ಮುಖ್ಯಸ್ಥರಾಗಿದ್ದ ರವಿ ದಯಾಲ್ ಅವರನ್ನು ನಾನು ಭೇಟಿಯಾಗಬೇಕಿತ್ತು. ಅವರು ಧರಿಸಿದ್ದ ಟ್ವೀಡ್ ಮೇಲಂಗಿ ಮತ್ತು ರೇಷ್ಮೆಯ ಅಂಗವಸ್ತ್ರದ ಆಕರ್ಷಣೆಗೆ ಅವರು ಸದಾ ಹಚ್ಚುತ್ತಿದ್ದ ಬೀಡಿಗಳು ವಿರುದ್ಧವಾಗಿದ್ದಂತೆ ತೋರುತ್ತಿದ್ದವು. ಅವರ ಸ್ವರೂಪ ಮತ್ತು ಅವರ ಮಾತಿನಿಂದ, ಅವರು ನನ್ನಂತೆ ಭಾರತೀಯ ಮತ್ತು ಆಂಗ್ಲ–ಐರೋಪ್ಯ ಮಿಶ್ರ ಸಂತಾನದವರಂತೆ ಕಂಡರು. ವಿರೋಧಾಭಾಸಗಳು ಎಂದು ಸಂಕುಚಿತ ಮನೋಭಾವದ ರಾಷ್ಟ್ರೀಯವಾದಿಗಳು ಏನನ್ನು ಕರೆಯುತ್ತಾರೋ ಅಂತಹ ವಿವಿಧ ಸಾಂಸ್ಕೃತಿಕ ಪ್ರಭಾವಗಳನ್ನು ಸಂತೋಷದಿಂದ ಮತ್ತು ವಿಶಾಲ ಮನೋಭಾವನೆಯಿಂದ ಒಪ್ಪಿದ್ದ ವ್ಯಕ್ತಿಯಾಗಿದ್ದಂತೆ ಅವರು ಕಂಡರು. ನಾವಿಬ್ಬರೂ ಸ್ವಲ್ಪ ಹೊತ್ತು – ಅವರು ಒಯುಪಿ ಬಗ್ಗೆ ಮತ್ತು ಸಂಪಾದಕರಾಗಿ ತಮ್ಮ ಕೆಲಸದ ಬಗ್ಗೆ ಹಾಗೂ ನಾನು, ಅವರ ಸರಾಗವಾದ ಮಾತು ಹಾಗೂ ಅವರ ಸ್ಥಾನದ ದೃಷ್ಟಿಯಿಂದ ಸಲೀಸಾಗಿ ಮಾತನಾಡಲಾಗದೆ ಇಪ್ಪತ್ತರ ವಯಸ್ಸಿನಲ್ಲಿ ನಾನು ಹೇಳಿಕೊಳ್ಳಬಹುದಾಗಿದ್ದ ಚೂರುಪಾರು ಅರ್ಹತೆಗಳ ಬಗ್ಗೆ ಮಿತವಾಗಿ – ಮಾತನಾಡಿದೆವು. ನಿಮಗೆ ಕೆಲಸ ಕೊಡುವ ಸಾಧ್ಯತೆ ಇದೆ, ಆದರೆ ಈ ಬಗ್ಗೆ ನಾವು ಸ್ವಲ್ಪ ಯೋಚಿಸಬೇಕಾಗಿದೆ ಹಾಗೂ ನೀವು ನಮ್ಮ ಹಣಕಾಸು ಮತ್ತು ಆಡಳಿತ ವಿಭಾಗದ ಸಂತೋಷ್ ಕೆ. ಮುಕರ್ಜಿ ಅವರನ್ನು ಭೇಟಿಯಾಗಿ ಎಂದು ಅವರು ನನಗೆ ಹೇಳಿದರು.

ಅದರಂತೆ ನಾನು ಎಸ್‌ಕೆಎಮ್ ಅವರನ್ನು ಭೇಟಿಯಾದೆ. 1987ರಲ್ಲಿ ಆರ್‌ಡಿ ಅವರ ಸ್ಥಾನದಲ್ಲಿ ಒಯುಪಿ ಮುಖ್ಯಸ್ಥ ಸ್ಥಾನಕ್ಕೆ ಹೋದ ಅವರು – ಬಟ್ಟೆಯ ಬಗ್ಗೆ ಅಷ್ಟೇನೂ ಆಸಕ್ತಿ ಇಲ್ಲದ, ವೈರಾಗ್ಯದ ನೋಟದ ಆದರೆ ಮೃದುವಾದ ಮತ್ತು ಹಿತವಾದ ಧ್ವನಿಯ – ಬೇರೆಯೇ ರೀತಿಯ ಆಸಾಮಿಯಾಗಿ ಕಂಡರು. ನಾವಿಬ್ಬರೂ ಅನಿಶ್ಚಯತೆಯಿಂದ ಹಾಗೂ ಪರಸ್ಪರ ಚಡಪಡಿಸಿ ಅಲ್ಪ ಕಾಲ ಕಳೆದೆವು. ಅದರ ಕೊನೆಯಲ್ಲಿ ಅವರು ನನಗೆ ಮಾರಾಟ ವಿಭಾಗದಲ್ಲಿ ಪ್ರಾರಂಭಿಸಿ ಅಲ್ಲಿಂದ ಮೇಲಕ್ಕೆ ಸಂಪಾದಕೀಯ ವಿಭಾಗಕ್ಕೆ ಹೋಗಲು ಪ್ರಯತ್ನಿಸುವ ವ್ಯಕ್ತಿಗೆ ಒಂದು ಸ್ಥಳ ಖಾಲಿ ಇದೆ ಎಂದು ಹೇಳಿದರು. ಈ ಬಗ್ಗೆ ನಾನು ಸ್ವಲ್ಪ ಯೋಚಿಸಬೇಕಾಗಿದೆ ಎಂದು ಹೇಳಿ ಮನೆಯ ಕಡೆ ದೆಹಲಿ ಸಾರಿಗೆ ಬಸ್ ಹಿಡಿಯಲು ಅಲ್ಲಿಂದ ತೆರಳಿದೆ.

ಈ ಬಗ್ಗೆ ನಾನು ಯೋಚಿಸುತ್ತಿದ್ದಂತೆ ನನ್ನ ಬಿಎ ಫಲಿತಾಂಶಗಳು ಪ್ರಕಟವಾದವು.

ನನ್ನ ಫಲಿತಾಂಶ ಬಹಳ ಉತ್ತಮವಾಗಿತ್ತು ಹಾಗೂ ಒಯುಪಿಯು ಮಾರಾಟ ವಿಭಾಗದ ಕೆಲಸದಲ್ಲಿ ಅಲ್ಪ ಸಂಬಳ ಪಡೆಯುವುದರ ಬದಲಿಗೆ ಎಂ.ಎ. ಪದವಿ ಮೂಲಕ ಹೆಚ್ಚಿನ ಜಾಣ್ಮೆ ಮತ್ತು ವ್ಯಾಸಂಗಿಕ ಪ್ರಭೆಯನ್ನು ಗಳಿಸಲು ಪ್ರಯತ್ನಿಸುವುದರಿಂದ ನನ್ನ ವೃತ್ತಿಜೀವನ ಮುಂದಕ್ಕೆ ಉತ್ತಮವಾಗಿರುತ್ತದೆ ಎಂಬುದು ನನ್ನ ಕುಟುಂಬದವರ ಬಲವಾದ ಅಭಿಪ್ರಾಯವಾಗಿತ್ತು. ಆಗ ನಾನೊಂದು ಮೋಟರ್‌ಸೈಕಲ್ ಕೊಂಡೆ, ಹೆಣ್ಣುಗಳೊಂದಿಗೆ ಸರಸಸಲ್ಲಾಪದಲ್ಲಿ ತೊಡಗಿದೆ ಹಾಗೂ ಮುಂದಿನ ಎರಡು ವರ್ಷಗಳಲ್ಲಿ ನಿರರ್ಥಕವಾಗಿ ಗಡಿಬಿಡಿಗೊಳ್ಳುತ್ತಿರುವ ಬಗ್ಗೆ ನಾನು ಆಗಾಗ ಆಲೋಚನಾಪರನಾಗುತ್ತಿದ್ದೆ.

1977ರಲ್ಲಿ ನಾನು ಯಶಸ್ವಿಯಾಗಿ ಎಂ.ಎ. ಮುಗಿಸಿದೆ, ನನ್ನ ಕಾಲೇಜ್‌ನವರೇ ನನಗೆ ಉಪಾಧ್ಯಾಯ ಹುದ್ದೆ ಕೊಡಲು ಮುಂದಾದರು ಹಾಗೂ ವಿದೇಶಗಳಲ್ಲಿ ಕಲಿಯುವ ಅವಕಾಶವನ್ನು ಒದಗಿಸಬಹುದಾದ ವಿದ್ಯಾರ್ಥಿವೇತನಕ್ಕೆ ಸಂಬಂಧಿಸಿದ ಸಂದರ್ಶನಗಳ ಕರೆಯೂ ಬಂದಿತು. ಸಂದರ್ಶನದ ಕೋಣೆಯನ್ನು ಪ್ರವೇಶಿಸಿದಾಗ ನಾನು ಮತ್ತೊಮ್ಮೆ ರವಿ ದಯಾಲ್ ಅವರನ್ನು ಎದುರಾದೆ.

ಸಂದರ್ಶನ ಮಂಡಳಿಯ ಸದಸ್ಯರು ನನ್ನ ಸಂದರ್ಶನದ ಬಗ್ಗೆ ಬಹಳ ಪ್ರಭಾವಿತರಾಗಲಿಲ್ಲವೆಂದು ಅವರು ನಂತರ ನನಗೆ ತಿಳಿಸಿದರು. ನನ್ನ ಪಾಲಿಗಂತೂ ದೊಡ್ಡ ದುರ್ಘಟನೆಯಾಗಿದ್ದ ಆ ಸಂದರ್ಶನವನ್ನು ಅವರು ದಯೆಯಿಂದ ಹಾಗೆ ಅರ್ಥೈಸಿದ್ದರು. ಆದರೆ ನನ್ನ ಪರೀಕ್ಷೆಯ ಫಲಿತಾಂಶಗಳು ಉತ್ತಮವಾಗಿದ್ದವು. ಇಂಗ್ಲಿಷ್ ಭಾಷೆಯ ವಿದ್ಯಾರ್ಥಿವೇತನಗಳಿಗೆ ಆಗ ಸ್ಪರ್ಧೆ ಬಿರುಸಿನದಾಗಿರಲಿಲ್ಲ ಹಾಗೂ ವಿದ್ಯಾರ್ಥಿವೇತನವನ್ನು ಕೊಡಲು ರಸ್ತೆಗಳಿಂದ ಯಾರನ್ನೂ ಎಳೆದು ತರುವುದು ಸಂಬಂಧಿಸಿದ ಮಂಡಳಿಗೆ ಬೇಕಾಗಿರಲಿಲ್ಲ. ಹೀಗಾಗಿ ನಾನು ವಿದ್ಯಾರ್ಥಿವೇತನವನ್ನು ಪಡೆದೆ.

ರಮ್ಯವಾದ ಬ್ರಿಟಿಷ್ ವಿಶ್ವವಿದ್ಯಾಲಯವೊಂದರಲ್ಲಿ ನಾಲ್ಕು ವರ್ಷ, ದೆಹಲಿ ಸಾರಿಗೆ ಬಸ್‌ನಲ್ಲಿ ಒಂದು ಗಂಟೆ ಕಳೆಯುವುದಕ್ಕಿಂತಲೂ ಬೇಗ ಕಳೆಯುತ್ತವೆ. ನಾನು ಪಿಹೆಚ್‌ಡಿಯನ್ನು ಇನ್ನೇನು ಮುಗಿಸುವುದರಲ್ಲಿದ್ದಾಗ ನನ್ನ ಕಾಲೇಜ್‌ನಲ್ಲಿ ಒಯುಪಿ ಆಕ್ಸ್‌ಫರ್ಡ್‌ನ ಸುತ್ತೋಲೆಯೊಂದನ್ನು ಕಂಡೆ. ಭಾರತದಲ್ಲಿನ ಒಯುಪಿ ಕಚೇರಿಯಿಂದ ಆ ಸಂಸ್ಥೆಯ ದೆಹಲಿ ಕಚೇರಿಗೆ ಬೇಕಾಗಿದ್ದ ಸಂಪಾದಕರ ಹುದ್ದೆಗೆ ಅಭ್ಯರ್ಥಿಗಳನ್ನು ಸಂದರ್ಶಿಸಲು ಒಬ್ಬರು ಇಂಗ್ಲೆಂಡ್‌ಗೆ ಬರುತ್ತಿದ್ದಾರೆ ಎಂದು ಸುತ್ತೋಲೆಯಲ್ಲಿ ತಿಳಿಸಲಾಗಿತ್ತು. ಆ ವ್ಯಕ್ತಿಯ ಹೆಸರು ರವಿ ದಯಾಲ್ ಎಂದೂ ಸುತ್ತೋಲೆ ತಿಳಿಸಿತು.

ಈ ಸಲ ನಾನು ಅರ್ಜಿ ಹಾಕಿ ನನ್ನ ವ್ಯಾಸಂಗಿಕ ಕಹಳೆಯನ್ನು ಕಡಿಮೆ ಸಂಕೋಚದಿಂದ ಊದಿದೆ. ನನಗೆ ಕೆಲಸವನ್ನು ಪುನಃ ಕೊಡುವುದಾಗಿ ದೆಹಲಿಯಿಂದ ನನ್ನ ಕಾಲೇಜ್‌ನಿಂದಲೂ ನನಗೆ ಪತ್ರ ಬಂದಿತ್ತು. ಹೀಗಾಗಿ ಚೌಕಾಶಿ ಮಾಡಲು ನನ್ನಲ್ಲಿ ಗಟ್ಟಿ ಪದಾರ್ಥ ಇತ್ತು. ಇಲ್ಲಿ ಆರ್‌ಡಿ ಅವರು ಬರಲಾಗಲಿಲ್ಲ ಎಂದು ನನಗೆ ತಿಳಿಸಲಾಯಿತು (ಬಹುಶಃ ಅಭ್ಯರ್ಥಿಗಳ ಹೆಸರುಗಳನ್ನು ಕಳಿಸಿದ್ದರಿಂದಲೇ ಏನೋ,

ಅವರು ದೂರ ಉಳಿದರೆಂದು ತೋರುತ್ತದೆ). ಹೀಗಾಗಿ ಭಾರತದಲ್ಲಿ ಒಂದು ಕಾಲನ್ನಿಟ್ಟಿದ್ದ ಆರ್‌ಡಿ ಅವರ ಮೇಲಧಿಕಾರಿ ಬಿಲ್ ಮಿಚೆಲ್ ಎನ್ನುವವರು ನನ್ನೊಂದಿಗೆ ಮಾತನಾಡಿದರು. ಈ ಮಾತುಕತೆ ಸಫಲವಾಯಿತು, ಏಕೆಂದರೆ ಹೇಳುವಷ್ಟು ಸರಕು ನನ್ನಲ್ಲಿ ನಿಜವಾಗಿ ಇತ್ತೆಂದು ತೋರುತ್ತದೆ. ನನಗೆ ಕೆಲಸ ಕೊಡಲು ಮುಂದಾದರು. ಆದರೆ ಅದಕ್ಕೆ ನವದೆಹಲಿಯ ಅವರ ಪ್ರತಿನಿಧಿಯ ಅಂಗೀಕಾರ ಬೇಕಾಗಿತ್ತು.

ಏಪ್ರಿಲ್ 1982ರ ಸುಮಾರಿಗೆ ರವಿ ದಯಾಲ್ ಅವರಿಂದ ನನ್ನ ನೇಮಕದ ಬಗ್ಗೆ ಲಿಖಿತ ಸೂಚನೆ ತಲುಪಿತು. ಒಯುಪಿಯ ಸಂಪಾದಕೀಯ ವಿಭಾಗದಲ್ಲಿ ಜುಲೈ 1 ರಂದು ನಾನು ಕೆಲಸ ಪ್ರಾರಂಭಿಸಬೇಕಿತ್ತು. ಹತ್ತು ವರ್ಷಗಳ ಹಿಂದಿನ ಮಾತು ಇದು. ಈಗಲೂ ನಾನು ಇದೇ ಕೆಲಸದಲ್ಲಿದ್ದೇನೆ. ಆರ್‌ಡಿ ಅವರು ಒಯುಪಿ ಬಿಟ್ಟು ಸ್ವತಂತ್ರ ಪ್ರಕಾಶರಾಗಿದ್ದಾರೆ. ಎಸ್‌ಕೆಎಮ್ ನಿವೃತ್ತರಾಗಿದ್ದಾರೆ. ಇವರಿಬ್ಬರೂ ಸ್ಥಾಪಿಸಿದ ಮಾನವೀಯ ಸಂಪ್ರದಾಯಗಳು ಮತ್ತು ದುಡಿಮೆಗೆ ಸಂಬಂಧಿಸಿದಂತೆ ನಿರ್ಮಿಸಿದ ವಿವೇಚನಾಯುಕ್ತ ಪರಿಸ್ಥಿತಿಗಳು, ಸಂಪಾದಕರ ಮಟ್ಟಿಗಾದರೂ, ಪ್ರಕಾಶನ ವೃತ್ತಿಯಲ್ಲಿ ದೊರೆಯುವ ಸಂಬಂಳ ಸಾರಿಗೆಗಳ ಕೊರತೆಗಳನ್ನು ತುಂಬಿಕೊಡುತ್ತವೆ. ನನ್ನ ಮುಂದಿನ ಮೇಲಧಿಕಾರಿ ವೃತ್ತಿ ಕೌಶಲ್ಯದ ದೃಷ್ಟಿಯಿಂದ ನನಗೆ ಅಷ್ಟು ರುಚಿಸದಿದ್ದರೆ ಹಾಗೂ ಉತ್ತಮ ಜೀವನ ನಿರ್ವಹಣೆಗೆ ಬೇಕಾದಷ್ಟು ಗಳಿಸುವ ಪ್ರಚೋದನೆಗೆ ತಕ್ಕಷ್ಟು ಬೆಂಬಲ ಕೊಡದೆ ಹೋದರೆ ನಾನು ಪುನಃ ರವಿ ದಯಾಲ್ ಅವರಲ್ಲಿಗೆ ನಡೆಯುತ್ತೇನೆನಿಸುತ್ತದೆ. ಸದ್ಯಕ್ಕೆ, ನವದೆಹಲಿಯಲ್ಲಿ ಇಂಗ್ಲಿಷ್ ಕಲಿತವರ ಸಣ್ಣ ಜಗತ್ತಿನಲ್ಲಿ, ಈ ಲೇಖನವನ್ನು ಬರೆಯುವುದನ್ನು ನನಗೆ ವಹಿಸಿರುವ ಸಂಪಾದಕಿಯ ಒತ್ತಾಯಗಳಿಗೆ ಮಾತ್ರ ನಾನು ಮಣಿಯಬೇಕಾಗಿದೆ; ಆ ಸಂಪಾದಕಿ ನನ್ನ ಪತ್ನಿ ಮಾಲಾ ದಯಾಲ್.

# ಬಹಳಷ್ಟು ಅದೃಷ್ಟ

## ಡೇವಿಡ್ ದಾವಿಡರ್

ನನಗೆ ಬೇಸರವಾಗಿತ್ತು, ತಲೆ ಚಿಟ್ಟು ಹಿಡಿಯುವಷ್ಟು ಬೇಸರವಾಗಿತ್ತು; ಬೇರೆಲ್ಲ ರೀತಿಯಲ್ಲೂ ಬುದ್ಧಿ ಸರಿಯಿರುವ ಜನರನ್ನು, ಮದುವೆ ಮಾಡಿಕೊಳ್ಳುವ ಅಥವಾ ವಾಣಿಜ್ಯಕ ಪ್ರಮಾಣದಲ್ಲಿ ಹಕ್ಕಿಗಳನ್ನು ಸಾಕಲು ಕೊಡೈಕೆನಾಲ್‌ಗೆ ತೆರಳುವಂತಹ ಉಗ್ರ ಕ್ರಮಗಳನ್ನು ಕೈಗೊಳ್ಳುವಂತೆ ಉದ್ರೇಕಿಸುವಂತಹ ಕೊನೆಯ ಹಂತದಲ್ಲಿ ನಾನು ಮುಳುಗಿದ್ದೆ. ಆಗ ನಾನಿದ್ದ ಪರಿಸ್ಥಿತಿಗಳಲ್ಲಿ – ನನಗೆ 25 ವರ್ಷ ವಯಸ್ಸಾಗಿತ್ತು, ನನ್ನ ಮೆಚ್ಚಿನ ನಗರವಾದ ಮುಂಬಯಿಯ ನಿಯತಕಾಲಿಕವೊಂದರಲ್ಲಿ ಒಳ್ಳೆಯ ಕೆಲಸವಿತ್ತು, ವೈಯಕ್ತಿಕ ಜೀವನ ತೃಪ್ತಿಕರವಾಗಿತ್ತು, ಇತ್ಯಾದಿ – ನನ್ನ ಬೇಸರಕ್ಕೆ ಕಾರಣವಾಗುವಂತಹದು ಏನೂ ಇರಲಿಲ್ಲ. ಆದರೂ ನನಗೆ ಬೇಸರವಾಗಿತ್ತು. ಅದೃಷ್ಟವಶಾತ್, ಹಾರ್ವರ್ಡ್ ವಿಶ್ವವಿದ್ಯಾಲಯದ ರ್‍ಯಾಡ್‌ಕ್ಲಿಫ್ ಪ್ರಕಾಶನ ವಿಧಾನಗಳ ಕೋರ್ಸ್‌ಗೆ ಸೇರಿದರೆ ಅದರಲ್ಲಿ ನನಗೆ ಆಸಕ್ತಿ ಉಂಟಾಗಬಹುದೆಂದು ಸಲಹೆ ಮಾಡಿದ ಸಹೋದ್ಯೋಗಿಯೊಬ್ಬರ ರೂಪದಲ್ಲಿ ವಿಧಿಯು ಕೈವಾಡ ಅಥವಾ ದೈವ ಚಿತ್ತ (ಇದರಲ್ಲಿ ನೀವು ಯಾವುದನ್ನಾದರೂ ಆರಿಸಿ), ಮಧ್ಯೆ ಪ್ರವೇಶಿಸಿತು. ಆ ಬೇಸಿಗೆಯಲ್ಲಿ ನಾನು ಅನೇಕ ಜನರ ವಿಶ್ವಾಸದಿಂದ ಮಸ್ಸಾಚುಸೆಟ್ಸ್‌ನಲ್ಲಿರುವ ಕೇಂಬ್ರಿಜ್ ತಲುಪಿದೆ. ಪ್ರಯಾಣ ಮಾಡುವಾಗ ನನ್ನ ಬೇಸರ ಆವಿಯಾಗಿ ಹೋಗಿತ್ತು ಹಾಗೂ ಕೇಂಬ್ರಿಜ್‌ನ ರಮ್ಯತೆಯಿಂದ ಅದು ಆವಿಯಾಗಿಯೇ ಉಳಿಯಿತು. ಒಂದಿಷ್ಟು ಕಠಿಣ ದುಡಿಮೆ ಹಾಗೂ ಬಹಳಷ್ಟು ಸ್ವಾರಸ್ಯದ ಸಮಯ ಕಳೆದ ನಂತರ ಕಿನ್ನರ ಕಥೆ ಮುಗಿಯುವ ಸೂಚನೆಯೇ ಕಂಡುಬರದಿದ್ದುದು ನನ್ನ ಗಮನಕ್ಕೆ ಬಂತು: ಭಾರತದಲ್ಲಿ ಪೆಂಗ್ವಿನ್ ಸಂಸ್ಥೆಯಲ್ಲಿ ಕೆಲಸ ಮಾಡುವ ಅವಕಾಶವನ್ನು ನನ್ನ ಮುಂದಿಡಲಾಯಿತು.

ಸ್ವಲ್ಪ ಸಮಯ ಲಂಡನ್‌ನ ಪೆಂಗ್ವಿನ್ ಸಂಸ್ಥೆಯಲ್ಲಿ ತರಬೇತಿ ಪಡೆದು ಪ್ರಕಾಶನ ವೃತ್ತಿಯ ಮೂಲಭೂತ ಅಂಶಗಳನ್ನು ಕಲಿತ ನಂತರ ನಾನು ದೆಹಲಿ ತಲುಪಿ

ಭಾರತೀಯ ಪ್ರಕಾಶನ ರಂಗದಲ್ಲಿನ ಕೆಲವು ಅತ್ಯುತ್ತಮ ಜನರೊಂದಿಗೆ ಸೇರಿ ಪೆಂಗ್ವಿನ್ ಇಂಡಿಯ ಎಂಬ ಹೊಸ ಸಂಸ್ಥೆಯನ್ನು ಪ್ರಾರಂಭಿಸಬೇಕಾಗಿತ್ತು. ಅಪರೂಪದ ತಾಳ್ಮೆ (ನನ್ನ ಮಾಲೀಕರು ಮತ್ತು ಸಹೋದ್ಯೋಗಿಗಳು ನನ್ನ ಬಗ್ಗೆ ತೋರಿದ) ಬಹಳಷ್ಟು ಅದೃಷ್ಟ, ಆಗಾಗ, ಒಂದಿಷ್ಟೂ ಕಡಿಮೆಯಾಗಿಲ್ಲ ಎಂದು ತೋರುವಂತಹ ಕೆಲಸದ ಒತ್ತಡ, ಪುಸ್ತಕಗಳ ಸೃಷ್ಟಿಯಲ್ಲಿ ನಿಜವಾದ ಆಸಕ್ತಿ – ಇವುಗಳು ಪುಸ್ತಕ ಪ್ರಕಾಶನದ ಜಗತ್ತಿಗೆ ನನ್ನ ಮೊದಲ (ಹಾಗೂ ಇಂದಿನವರೆಗೆ, ಏಕಮಾತ್ರ) ಪ್ರವೇಶದಲ್ಲಿ ನನ್ನೊಂದಿಗಿದ್ದವು. ಏಳು ವರ್ಷಗಳ ಹಿಂದೆ ನನಗಾಗಿದ್ದ ಬೇಸರ ಈಗ ಖಾಯಂ ಆಗಿ ದಿಗ್ಬಂಧನದಲ್ಲಿರುವಂತೆ ತೋರುತ್ತದೆ.

ಪ್ರಕಾಶನ ಜಗತ್ತಿಗೆ ನಾನು ಕಾಲಿಟ್ಟ ಕೆಲವು ವರ್ಷಗಳ ನಂತರ ನ್ಯೂಯಾರ್ಕ್‌ನ ಪ್ರಮುಖ ಪ್ರಕಾಶನ ಸಂಸ್ಥೆಯೊಂದರ ಸಂಪಾದಕೀಯ ಸಮ್ಮೇಳನದಲ್ಲಿ ನಾನು ಭಾಗವಹಿಸಿದೆ. ಅಲ್ಲಿ ಚರ್ಚೆಯಾಗುತ್ತಿದ್ದ ಲೇಖಕರ ಹೆಸರುಗಳು ಮತ್ತು ಅವರಿಗೆ ಮುಂಗಡವಾಗಿ ಕೊಡಲು ಅನುಮೋದಿಸಲಾದ ಅಪಾರ ಮೊತ್ತದ ಹಣ – ಇದನ್ನು ಕೇಳುತ್ತಾ ಸ್ವಲ್ಪ ಕಾಲ ನಾನು ಬೆರಗಾದೆ. ನಂತರ ನನ್ನನ್ನು ದಂಗುಬಡಿಸುವ ವಿಷಯ ಪ್ರಸ್ತಾಪಕ್ಕೆ ಬಂತು:

ಕೃತಿ ಸಂಗ್ರಾಹಕ ಸಂಪಾದಕರಲ್ಲೊಬ್ಬರು ಒಂದು ಪುಸ್ತಕದ ವಿಷಯವನ್ನು ಪ್ರಸ್ತಾಪಿಸಿ, ಪುಸ್ತಕವನ್ನು ಬಹಳ ಕೆಟ್ಟದಾಗಿ ಬರೆಯಲಾಗಿದೆ ಆದರೆ ಅದರ ವಸ್ತು ಮತ್ತು ಶೀರ್ಷಿಕೆ – How to find God in a parking lot (ವಾಹನಗಳ ನಿಲ್ದಾಣದಲ್ಲಿ ದೇವರನ್ನು ಹೇಗೆ ಕಾಣುವುದು) ಸ್ವಾರಸ್ಯಕರವಾಗಿದೆ ಎಂದು ಹೇಳಿದರು. ಈ ಬಗ್ಗೆ ನಿರ್ಧಾರ ಕೈಗೊಳ್ಳುವುದು ಸಂಪಾದಕೀಯ ನಿರ್ದೇಶಕಿಗೆ ಏನೇನೂ ಸಮಸ್ಯೆಯಾಗದು, ಈ ಪುಸ್ತಕ ಖಂಡಿತವಾಗಿಯೂ ಪ್ರಕಟಣೆಗೆ ಅರ್ಹವಲ್ಲ ಎಂದು ನಾನು ಯೋಚಿಸುತ್ತಿದ್ದೆ. ಆದರೆ ಅವರು ಪುಸ್ತಕವನ್ನು ಪ್ರಕಟಿಸಲು ನಿರ್ಧರಿಸಿ, ತಕ್ಕ ಮಟ್ಟಿನ ಮೊಬಲಗಿಗೆ ಕೃತಿಯನ್ನು ಸಂಸ್ಥೆ ಪಡೆದುಕೊಳ್ಳಬೇಕೆಂದು ಸಲಹೆ ಮಾಡಿದಾಗ ನನಗೆ ಅತ್ಯಾಶ್ಚರ್ಯವಾಯಿತು. "ಅದ್ಭುತವಾದ ಶೀರ್ಷಿಕೆ – ಲೇಖಕರು ಒಂದು ಒಳ್ಳೆಯ ಪುಸ್ತಕವನ್ನು ಬರೆಯಲಾಗದಿದ್ದರೆ ಶೀರ್ಷಿಕೆಗೆ ತಕ್ಕ ಪುಸ್ತಕವನ್ನು ಬರೆಯಲು ನಾವು ಬೇರೆ ಯಾರಿಗಾದರೂ ಹೇಳಬಹುದು. Zen and the Art of Motorcycle maintenance (ಜೆನ್ ಮತ್ತು ಮೋಟಾರ್‌ಸೈಕಲ್ ನಿರ್ವಹಣೆಯ ಕಲೆ) ನಂತಹ ಪುಸ್ತಕವನ್ನು ಕೈ ಬಿಟ್ಟಂತೆ ಇದನ್ನು ಬಿಡಲಾಗುವುದಿಲ್ಲ" ಎಂದು ಅವರು ಹೇಳಿದರು. ನನ್ನ ಭ್ರಮೆಗಳು ಮೇಲಿನಿಂದ ಕೆಳಗೆ ಬಿದ್ದುವು; ಈ ಹೆಂಗಸು ಒಂದು ಅಡಚಣೆಯಂತೆ ಎಂದು ನಾನು ನಿರ್ಧರಿಸಿದೆ. ಹೀಗೆ ಪುಸ್ತಕಗಳ ಸೃಷ್ಟಿಯಾಗಬಾರದು. ಪತ್ರಿಕೋದ್ಯಮದಿಂದ ಪ್ರಕಾಶನ ವೃತ್ತಿಗೆ ನಾನು ಬಂದಿದ್ದು ಇದಕ್ಕಾಗಿ ಅಲ್ಲ, ನಾನು ಓದಲು ಪ್ರಾರಂಭಿಸಿದಾಗಿನಿಂದಲೂ ಪುಸ್ತಕಗಳಲ್ಲಿ ನಾನು ಅನುರಕ್ತನಾಗಿದ್ದು ಖಂಡಿತವಾಗಿಯೂ ಈ ಕಾರಣಕ್ಕಲ್ಲ ಎಂದು ಆಗ ನನಗೆನಿಸಿತ್ತು.

ಈ ಘಟನೆ ನಡೆದ ಅನೇಕ ವರ್ಷಗಳ ನಂತರ ಸಂಪಾದಕೀಯ ನಿರ್ದೇಶಕಿಯ ನಿರ್ಧಾರಕ್ಕೆ ನಾನು ಆಗ ತೋರಿದ ಪ್ರತಿಕ್ರಿಯೆ ಸರಿಯೇ ಎಂಬ ಅನುಮಾನ ಈಗ

ನನಗಿದೆ. ಯಾವುದೇ ಪುಸ್ತಕದ ಮೂಲ ಉದ್ದೇಶ ಮಾಹಿತಿ ಕೊಡುವುದು ಮತ್ತು/ಅಥವಾ ಮನರಂಜನೆ ಒದಗಿಸುವುದಾಗಿದ್ದರೆ, ಬಹುಶಃ ಸಂಪಾದಕೀಯ ನಿರ್ದೇಶಕಿಯ ಅಭಿಪ್ರಾಯ ಉಚಿತವಾಗಿಯೇ ಇದೆ, ಆದರಲ್ಲೂ ಪ್ರಕಾಶನ ವೃತ್ತಿ ಉಳಿಯಬೇಕಾಗಿರುವ ಪ್ರಸಕ್ತ ವಾತಾವರಣದಲ್ಲಿ ಇಂತಹ ಅಭಿಪ್ರಾಯವನ್ನು ಮಾನ್ಯ ಮಾಡಬೇಕಾದದ್ದೇ. ಸಮಕಾಲೀನ ಪ್ರಕಾಶನ ರಂಗ ಎದುರಿಸುತ್ತಿರುವ ಬಿಕ್ಕಟ್ಟಿಗೆ (ನನಗೆ ಗೊತ್ತಿರುವುದು ವೃತ್ತಿ ಪ್ರಕಾಶನ ಕ್ಷೇತ್ರ, ಆದರೆ ಪರಿಸ್ಥಿತಿ ಬೇರೆಡೆಯೂ ಕೆಟ್ಟದ್ದಿದೆ ಅಥವಾ ನನಗೆ ತಿಳಿದುಬಂದಿರುವಂತೆ ಅದು ಕೆಟ್ಟದ್ದಿದೆ) ಅತ್ಯಂತ ಸೂಕ್ಷ್ಮಗ್ರಾಹಿ ಪ್ರತಿಕ್ರಿಯೆ ಡಬ್ಲ್ಯು.ಡಬ್ಲ್ಯು. ನಾರ್ಟನ್‌ನ ಅಧ್ಯಕ್ಷ ಡೊನಾಲ್ಡ್ ಲ್ಯಾಮ್ ಅವರಿಂದ ವ್ಯಕ್ತವಾಗಿದೆ. ತಮ್ಮ ವೃತ್ತಿಯ ಬಗ್ಗೆ ಹೆಚ್ಚು ಕಾಳಜಿ ವಹಿಸುವ ಶ್ರದ್ಧಾವಂತ ಓದುಗರಿಂದಾಗಿ, ದೈಹಿಕ ವ್ಯಾಯಾಮದ ಕೋಣೆಗಳಿಂದಾಗಿ, ಮತ್ತು ಇತರ ಎಲ್ಲ ವಿರಾಮವೇಳೆಯ ಚಟುವಟಿಕೆಗಳಿಂದಾಗಿ ಪ್ರಕಾಶಕರು ಓದುಗರನ್ನು ಕಳೆದುಕೊಳ್ಳುತ್ತಿದ್ದಾರೆ ಎಂದು ಅವರು ಹೇಳಿದ ಮಾತುಗಳು ಕೈಕೈ ಹಿಸುಕಿಕೊಂಡು ಮಾಡುವ ಉಪದೇಶಕ್ಕಿಂತಲೂ ಬಹಳ ಎತ್ತರದ ಒಳದೃಷ್ಟಿಯನ್ನು ಒಳಗೊಂಡಿದೆ. ಇದು ಬಹಳ ಯೋಚಿಸಿ ಗಳಿಸಿರುವ ಒಳದೃಷ್ಟಿ ಹಾಗೂ ಪ್ರಕಾಶನ ಕೈಗಾರಿಕೆಯಲ್ಲಿರುವ ನಾವೆಲ್ಲರೂ ಈ ವಿಚಾರವನ್ನು ಗಮನದಲ್ಲಿಟ್ಟಿರುವುದು ಒಳ್ಳೆಯದು. ನಾನು ಹೆಸರು ಹೇಳಿಲ್ಲದ ಆ ಸಂಪಾದಕೀಯ ನಿರ್ದೇಶಕಿ ಬಹುಶಃ ಅಡಚಣೆಯ ವ್ಯಕ್ತಿಯಾಗಿರಲಿಲ್ಲ; ಏಕೆಂದರೆ ಇಂದು ಪ್ರಕಾಶನ ವೃತ್ತಿ ಅಸಾಮಾನ್ಯವಾಗಿರಬೇಕು, ಮನೋರಂಜಕವಾಗಿರಬೇಕು, ಹೊಸದನ್ನು ಸೃಷ್ಟಿಸುವಂತಹದಾಗಿರಬೇಕು ಹಾಗೂ ವಿನೋದದಿಂದ ಕೂಡಿರಬೇಕು (ಇವು ಯಾವುದೂ ಗುಣಮಟ್ಟವನ್ನು ಬಲಿಕೊಡಬೇಕಿಲ್ಲ). ಇದರಿಂದ ಉತ್ತಮ ಪುಸ್ತಕಗಳು, ಸೂಕ್ತ ಪುಸ್ತಕಗಳು, ಓದುಗರನ್ನು ಒಲಿಸಿಕೊಳ್ಳುವ ಪುಸ್ತಕಗಳು ಸೃಷ್ಟಿಯಾಗುತ್ತವೆ. ಇದೇ ಸವಾಲು ಹಾಗೂ ಇದೇ ನನ್ನ ಕರೆಗಂಟೆ. ಪ್ಲಾಸ್ಟಿಕ್ ಕೊಳವೆಗಳನ್ನು ಮಾಡುವ ಕೆಲಸವನ್ನು ಇದು ಖಂಡಿತ ಮೀರಿಸುತ್ತದೆ.

# ಒಂದು ತರಬೇತಿ

## ರವಿ ದಯಾಲ್

ದೆಹಲಿಯ ಸೈಂಟ್ ಸ್ಟೀಫನ್ಸ್‌ನಲ್ಲಿ ಐದು ವರ್ಷಗಳ ಕಾಲ ಚರಿತ್ರೆಯನ್ನು ಓದಿದ ನಂತರ ಹಾಗೂ ಆಕ್ಸ್‌ಫರ್ಡ್‌ನಲ್ಲಿ ಇನ್ನೆರಡು ವರ್ಷ ಅದೇ ವಿಷಯವನ್ನು ಓದಿದ ನಂತರ, ಬಹುಶಃ ಒಂದಲ್ಲ ಒಂದು ವಿಶ್ವವಿದ್ಯಾಲಯದಲ್ಲಿ ಓದು ಮುಂದುವರೆಸುತ್ತಾ, ಇನ್ನಷ್ಟು ಚರಿತ್ರೆಯನ್ನು ಓದುವುದನ್ನು ಬಿಟ್ಟರೆ ಯಾವುದೇ ನಿರ್ದಿಷ್ಟ ಕೆಲಸ ಮಾಡುವುದಕ್ಕೂ ನಾನು ಸೂಕ್ತ ಅರ್ಹತೆ ಹೊಂದಿಲ್ಲ ಎಂದೇ ಭಾವಿಸಿದ್ದೆ. ಈ ಒಂದು ತೋರಿಕೆಯ ನಿರ್ಬಂಧವನ್ನು ಗುರುತಿಸಿ, 1857ರ ನಂತರದ ಭಾರತಕ್ಕೆ ಸಂಬಂಧಿಸಿದ ಚರಿತ್ರೆಯ ಯಾವುದೋ ಒಂದು ಸಣ್ಣ ಭಾಗದ ವಿವರಗಳನ್ನು ಅಧ್ಯಯನ ಮಾಡಿ ಡಾಕ್ಟರೇಟ್ ಪದವಿ ಪಡೆಯಲು ಹಿರಿಯ ವಿದ್ಯಾರ್ಥಿವೇತನಕ್ಕೆ ಅರ್ಜಿ ಸಲ್ಲಿಸಿದೆ. ಇದು ನಡೆದದ್ದು 1961ರ ಪ್ರಾರಂಭದಲ್ಲಿ ಹಾಗೂ ಆಕ್ಸ್‌ಫರ್ಡ್‌ನಲ್ಲಿ ನನ್ನ ಅಂತಿಮ ಪರೀಕ್ಷೆಯನ್ನು ತೆಗೆದುಕೊಳ್ಳುವುದಕ್ಕೆ ಕೆಲವು ತಿಂಗಳುಗಳಿಗೆ ಮುನ್ನ. ನನಗೆ ವಿದ್ಯಾರ್ಥಿವೇತನ ದೊರೆಯಿತಾದರೂ ಈ ಮಧ್ಯೆ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ (ಒಯುಪಿ) ಭಾರತದಲ್ಲಿ ತನಗಾಗಿ ಕೆಲಸ ಮಾಡುವವರು ಯಾರಾದರೂ ಇದ್ದಾರೆಯೇ ಎಂದು ಹುಡುಕುತ್ತಿತ್ತು. ಆಕ್ಸ್‌ಫರ್ಡ್‌ನಲ್ಲಿ ನ್ಯಾಯಶಾಸ್ತ್ರದ ಪ್ರೊಫೆಸರ್ ಆಗಿದ್ದ, ನಾನಿದ್ದ ಕಾಲೇಜ್‌ನ ಖ್ಯಾತ ಸದಸ್ಯರಾಗಿದ್ದ ಹೆಚ್.ಎಲ್.ಎ. ಹಾರ್ಟ್ ಅವರ ಉಪಕಾರದಿಂದ ನಾನು ಒಯುಪಿ ಕಡೆಗೆ ನಡೆಯುವಂತಾಯಿತು ಹಾಗೂ ಸ್ವಲ್ಪ ಸಮಯದಲ್ಲೇ ಅಲ್ಲಿ ನನಗೆ ಕೆಲಸ ಕೊಟ್ಟರು: ಲಂಡನ್ ಮತ್ತು ಆಕ್ಸ್‌ಫರ್ಡ್‌ನಲ್ಲಿ ಒಯುಪಿ ಸಂಸ್ಥೆಯೊಂದಿಗೆ ಕೆಲವು ತಿಂಗಳುಗಳನ್ನು ಕಳೆಯುವುದು, ಆನಂತರ ಮುಂಬಯಿಗೆ ನನ್ನನ್ನು ಕಳಿಸುವ ಸಾಧ್ಯತೆ, ಹಾಗೂ ಭಾರತಕ್ಕೆ ಉಚಿತ ಪ್ರಯಾಣ ಸೌಕರ್ಯ ಇದಿಷ್ಟು ಬಿಟ್ಟರೆ ಈ ಉದ್ಯೋಗದಲ್ಲಿ ನಾನೇನು ಮಾಡಬೇಕು ಎಂಬ ಯಾವ ಕಲ್ಪನೆಯೂ ನನಗಿರಲಿಲ್ಲ. ಧೂಳು ತುಂಬಿದ ಕಾಗದಪತ್ರಗಳಿಂದಾಗಿ ಸೀನು, ಉಬ್ಬಸ ನನಗುಂಟಾಯಿತು ಹಾಗೂ

ಸ್ವದೇಶ ಬಿಟ್ಟಿರುವುದು ನನಗೆ ಇಷ್ಟವಿರಲಿಲ್ಲ. ಆದ್ದರಿಂದ ಚರಿತ್ರೆಯನ್ನು ಕೈಬಿಟ್ಟು, ಏನೂ ತಿಳಿಯದ, ಆದರೆ ಸ್ವಾರಸ್ಯಕರ ಎಂದು ತೋರಿದ ವೃತ್ತಿಯನ್ನು ಪ್ರವೇಶಿಸುವ ಬಗ್ಗೆ ಕುತೂಹಲ ಕೆರಳಿದ ನಾನು ಒಯುಪಿ ಮತ್ತು ಪ್ರಕಾಶನ ಜಗತ್ತನ್ನು ಸೇರಿದೆ.

ಜುಲೈ 1961ರ ಒಂದು ಗೊತ್ತಾದ ತಾರೀಖಿನಂದು ನನ್ನ ಮೊದಲ ದಿನ ಕೆಲಸಕ್ಕೆ ಹಾಜರಾಗಬೇಕೆಂದು ನನಗೆ ಹೇಳಲಾಗಿತ್ತು, ಹಾಗೂ ಅಂದು ಶನಿವಾರವಾಗಿತ್ತು. ಒಯುಪಿಯಲ್ಲಿ ಬಾಗಿಲು ತಟ್ಟಿದಾಗ ಶನಿವಾರ ಕಚೇರಿ ಮುಚ್ಚಿರುತ್ತದೆಂದು ತಿಳಿದುಬಂತು. ಅಲ್ಲಿಯುವರೆಗೆ ನನಗೆ ಅದು ತಿಳಿದಿರಲಿಲ್ಲ. ಸಂಸ್ಥೆಯ ಉಪ ಪ್ರಕಾಶಕ ಫಿಲಿಪ್ ಚೆಸ್ಟರ್ ಅವರನ್ನು ನಾನು ಅಂದೇ ಕಾಣಲೇಬೇಕಾದರೆ ಲಾರ್ಡ್ಸ್ ಕ್ರಿಕೆಟ್ ಮೈದಾನಕ್ಕೆ ಹೋಗಬೇಕೆಂದೂ, ಆಕ್ಸ್‌ಫರ್ಡ್–ಕೇಂಬ್ರಿಜ್ ಕ್ರಿಕೆಟ್ ಪಂದ್ಯವನ್ನು ಅವರು ನೋಡುತ್ತಿರುವ ಸಂಭವವಿದೆಯೆಂದೂ ಅಲ್ಲಿಯ ದ್ವಾರಪಾಲಕ ನನಗೆ ತಿಳಿಸಿದ. ಪ್ರಕಾಶನ ಸಂಸ್ಥೆಯೊಂದರ ಉದ್ಯೋಗಿಯಾಗಿ ನನ್ನ ಮೊದಲ ದಿನವನ್ನು ನನ್ನ ಗೆಳೆಯ ಅಬ್ಬಾಸ್ ಆಲಿ ಬೇಗ್ ಆಕ್ಸ್‌ಫರ್ಡ್ ತಂಡದ ಪರವಾಗಿ ಆಡುತ್ತಿದ್ದುದನ್ನು ನೋಡುತ್ತಾ ಲಾರ್ಡ್ಸ್‌ನ ದಿ ಟ್ಯಾವರ್ನ್‌ನಲ್ಲಿ ಮತ್ತು ಅದರ ಸುತ್ತಮುತ್ತ ಕಳೆದೆ. ಆ ಪಂದ್ಯದಲ್ಲಿ ಪಟೌಡಿ ಕ್ಯಾಪ್ಟನ್ ಆಗಿದ್ದರು ಹಾಗೂ ಅವರ ತಂಡದಲ್ಲಿ ಜವೇದ್ ಬರ್ಕಿಯೂ ಇದ್ದರು ಮತ್ತು ಬ್ರಿಯರ್ಲಿ, ವಿರೋಧಿ ತಂಡದ ಕ್ಯಾಪ್ಟನ್ ಆಗಿದ್ದರು.

ಮುಂದಿನ ಕೆಲವು ತಿಂಗಳುಗಳನ್ನು ಲಂಡನ್ ಮತ್ತು ಆಕ್ಸ್‌ಫರ್ಡ್‌ನಲ್ಲಿರುವ ಒಯುಪಿ ಸಂಸ್ಥೆಯ ಅನೇಕ ವಿಭಾಗಗಳಲ್ಲಿ ಸುತ್ತಾಡುತ್ತಾ ಕಳೆದೆ: ಮಾರಾಟ ಪ್ರತಿನಿಧಿಗಳೊಂದಿಗೆ ಲಂಡನ್ ಮಾರುಕಟ್ಟೆಯ ಕೆಲವು ಸಣ್ಣಪುಟ್ಟ ಸ್ಥಳಗಳಿಗೆ ಹೋಗುವಂತೆ ನನಗೆ ಹೇಳಲಾಯಿತು, ಒಂದು ವಾರವೋ ಏನೋ ಚೇರಿಂಗ್ ಕ್ರಾಸ್‌ನಲ್ಲಿ ಬೆಟರ್ ಬುಕ್ಸ್‌ನವರೊಂದಿಗೆ ಕೆಲಸ ಮಾಡಿದೆ. ಕೆಲವು ವಾರಗಳು ನೀಸ್ಡೆನ್‌ನಲ್ಲಿ ಒಯುಪಿ ಉಗ್ರಾಣದಲ್ಲಿ ಪುಸ್ತಕಗಳನ್ನು ಎತ್ತಿಡುವ, ಸಾಗಿಸುವ ಕೆಲಸ ಮಾಡಿದೆ, ಮುದ್ರಣ ಕಾರ್ಯದಲ್ಲಿ ಕ್ಷಿಪ್ರ ಶಿಕ್ಷಣವನ್ನು ನನಗೆ ನೀಡಲಾಯಿತು ಇತ್ಯಾದಿ. ಹಾಗೂ ಪ್ರಧಾನ ಕಚೇರಿಯಲ್ಲಿದ್ದಾಗ ಫಿಲಿಪ್ ಚೆಸ್ಟರ್ ಅವರ ಕಚೇರಿಗೆ ಹೊಂದಿಕೊಂಡ ಕಿರುಕೋಣೆಯಲ್ಲಿರುತ್ತಿದ್ದೆ; ಅಲ್ಲಿ ಆಗಾಗ ಟೀ ಮಾಡಬೇಕಾಗಿತ್ತು, ಅವರ ಟೆಲಿಫೋನ್ ಕರೆಗಳನ್ನು ಗಮನಿಸಬೇಕಾಗಿತ್ತು ಹಾಗೂ ಸ್ವಲ್ಪ ಸಂಪಾದಕೀಯ ಕೆಲಸವನ್ನು ಮಾಡಬೇಕಾಗಿತ್ತು. ಬರ್ಮಾ ದೇಶದ ಬೌದ್ಧಧರ್ಮದಲ್ಲಿನ ಜಾನಪದ ಅಂಶಗಳನ್ನು ಕುರಿತ ಹಸ್ತಪ್ರತಿ ನಾನು ಪರಿಷ್ಕರಿಸಲು ನೆರವಾದ ಮೊದಲ ಹಸ್ತಪ್ರತಿಯಾಗಿತ್ತು. ಅದರಲ್ಲಿ ಚಿನ್ನ ಮಾಡುವ ರಸವಿದ್ಯೆಯ ಬಗ್ಗೆ ಸಾಕಷ್ಟು ಚರ್ಚಿಸಲಾಗಿತ್ತು. ಬಾರತ ಮತ್ತು ಭಾರತೀಯರು ಹಾಗೂ ಕೆಂಪು ಇಂಡಿಯನ್ನರನ್ನು(!) ಕುರಿತ ಕೃತಿಗಳ ಪ್ರಕಟಣಾ ಸಲಹೆಗಳಿಗೆ ಸಂಬಂಧಿಸಿದಂತೆ ಟೀಕೆ ಟಿಪ್ಪಣಿಗಳನ್ನು ಕೊಡಬೇಕೆಂದು ನನ್ನನ್ನು ಕೇಳಲಾಯಿತು. ಅನೇಕ ರೀತಿಯ ಪ್ರಕಾಶನ ಚಟುವಟಿಕೆಗಳ ಪರಿಚಯವನ್ನು ನನಗೆ ಮಾಡಿಸಿಕೊಡಲಾಯಿತು; ಆದರೆ ತಮ್ಮ ವೃತ್ತಿಯಲ್ಲಿ ಪ್ರತಿಭಾವಂತರೂ, ಪ್ರವೀಣರೂ ಎಂದು ತೋರುತ್ತಿದ್ದ ಅನುಭವಿ

ಪ್ರಕಾಶಕರ ಗುಂಪಿನ ಮಧ್ಯೆ ನಾನು ಏನೂ ತೋಚದವನಂತಿದ್ದೆ ಹಾಗೂ ಸ್ವಲ್ಪ ಮಟ್ಟಿಗೆ ಖೋಟಾ ವ್ಯಕ್ತಿ ಏನೋ ಎಂದು ಭಾವಿಸುತ್ತಿದ್ದೆ. ಒಂದಲ್ಲ ಒಂದು ವಿಶ್ವವಿದ್ಯಾಲಯದಲ್ಲಿ ಏಳು ವರ್ಷಗಳು ಕಳೆದ ನಂತರ ಚರಿತ್ರೆಯ ಹೊರತಾಗಿ ಬೇರೆಯದನ್ನು ಈಗ ನಾನು ಕಲಿಯಬೇಕಾಯಿತು ಹಾಗೂ ಹೊಸ ಕ್ಷೇತ್ರವೊಂದರಲ್ಲಿ ಅಂಬೆಗಾಲಿಡುವುದು ನನಗೆ ಅಷ್ಟೇನೂ ಹಿಡಿಸಲಿಲ್ಲ.

ಬ್ರಿಟನ್‌ನಲ್ಲಿ ಒಯುಪಿಯೊಂದಿಗೆ ಸುಮಾರು ಐದು ತಿಂಗಳು ಕಳೆದ ನಂತರ ಒಯುಪಿ ಭಾರತ ಶಾಖೆಯ ಜನರಲ್ ಮ್ಯಾನೇಜರ್ ಹಾಗೂ ಭಾರತದಲ್ಲಿ ಪ್ರಕಾಶನ ರಂಗದಲ್ಲಿ ಅತ್ಯಂತ ಖ್ಯಾತರಾಗಿದ್ದ ಆರ್.ಇ. ಹಾಕಿನ್ಸ್ ಅವರೊಂದಿಗೆ ಕೆಲಸ ಮಾಡಲು ನನ್ನನ್ನು ಮುಂಬಯಿಗೆ ಕಳಿಸಲಾಯಿತು. 1930ರಿಂದ 'ಹಾಕ್' ಅವರು ಭಾರತದಲ್ಲಿದ್ದರು ಹಾಗೂ ಒಯುಪಿ ಭಾರತ ಶಾಖೆಯನ್ನು ಒಂದು ಸುಪ್ರಸಿದ್ಧ ಪ್ರಕಾಶನ ಸಂಸ್ಥೆಯನ್ನಾಗಿ ಮಾಡಿದರು; ಅವರು ಪ್ರವೀಣ ಮ್ಯಾನೇಜರ್ ಆಗಿದ್ದರು. ಇತರೆಲ್ಲರಿಗಿಂತಲೂ ಮಾರುಕಟ್ಟೆಯನ್ನು ಚೆನ್ನಾಗಿ ಬಲ್ಲವರಾಗಿದ್ದರು ಹಾಗೂ ಅವರ ಕಾಲದ ಅತ್ಯಂತ ಶ್ರೇಷ್ಠ ಸಂಪಾದಕರಲ್ಲಿ ಒಬ್ಬರಾಗಿದ್ದರು. ಹಾಕ್ ಅವರಿಗೆ ಎಲ್ಲ ಕೆಲಸ ಉತ್ಕೃಷ್ಟವಾಗಿ ಹಾಗೂ ದೋಷರಹಿತವಾಗಿ ಆಗಬೇಕಿತ್ತು ಹಾಗೂ ಅವರ ಈ ಉತ್ಕೃಷ್ಟತೆ ಮತ್ತು ದೋಷರಾಹಿತ್ಯದ ಪ್ರಯೋಗ ನನ್ನ ಮೇಲಾಯಿತು. ಆ ತಿಂಗಳುಗಳಲ್ಲಿ ನಾನು ಹಾಕ್ ಅವರ ಕೋಣೆಯಲ್ಲಿ ಮೇಜಿನ ಮುಂದೆ ಕುಳಿತು ಅವರು ಹೇಳಿದ ಕೆಲಸವನ್ನು ನನಗೆ ಸಾಧ್ಯವಿದ್ದಷ್ಟು ಅತ್ಯುತ್ತಮವಾಗಿ ಮಾಡಿದೆ. ಅದು ಒಂದು ನಿರಂತರ ಬೋಧನಾ ತರಗತಿಯಾಗಿದ್ದುದರ ಜೊತೆಗೆ ನಡುನಡುವೆ ಕೆಲಸ ಮಾಡಿಯೂ ತೋರಿಸಬೇಕಾಗಿತ್ತು. ಕೈ ತುತ್ತು ತಿನ್ನಿಸುತ್ತಿರಲಿಲ್ಲ ಅಥವಾ ಸದಾ ಬೆನ್ನ ಹಿಂದೆ ನಿಂತು ನನ್ನ ಕೆಲಸವನ್ನು ಗಮನಿಸುತ್ತಲೂ ಇರಲಿಲ್ಲ. ಆದರೆ ಹಾಕ್ ಅವರ ಎಚ್ಚರದ ನೋಟದಿಂದ ಮತ್ತು ಪ್ರಮುಖ ಸಂದರ್ಭಗಳಲ್ಲಿ ಅವರು ನನ್ನ ಕೆಲಸವನ್ನು ತಿದ್ದುತ್ತಿದ್ದುದರಿಂದ ನಾನು ಬಹಳಷ್ಟು ಕಲಿತೆ. ಆ ಕೋಣೆಯಲ್ಲಿ ಕುಳಿತು ನಾನು ಸುಮಾರು 90 ಉದ್ಯೋಗಿಗಳಿದ್ದ ಆ ಕಚೇರಿಯ ಕಾರ್ಯನಿರ್ವಹಣೆಗೆ ನೆರವಾದೆ. ಪಠ್ಯಪುಸ್ತಕಗಳಿಂದ ಹಿಡಿದು ಕೆಲವು ವಿದ್ವತ್ಪೂರ್ಣ ಪುಸ್ತಕಗಳವರೆಗೆ ಅನೇಕ ಪುಸ್ತಕಗಳನ್ನು ಪ್ರಕಟಿಸಲಾಯಿತು, ಮಹಾರಾಷ್ಟ್ರದಲ್ಲಿ ವ್ಯಾಪಾರ ಸಂಬಂಧವಾಗಿ ಪ್ರವಾಸ ಮಾಡಿದೆ, ದಾಸ್ತಾನು-ನಿಯಂತ್ರಣ ಮತ್ತು ಖರ್ಚುವೆಚ್ಚಗಳ ಲೆಕ್ಕ ಇಡುವುದರ ಬಗ್ಗೆ ವಿವರಗಳನ್ನು ಗ್ರಹಿಸಿದೆ ಹಾಗೂ ಪ್ರಕಾಶನ ವೃತ್ತಿಯ ಎಲ್ಲ ಮುಖಗಳ ಬಗ್ಗೆ ನನಗೆ ಪರಿಚಯ ಮಾಡಿಕೊಡಲಾಯಿತು.

ಇಷ್ಟಾದರೂ ಪ್ರಕಾಶನ ವೃತ್ತಿಯಲ್ಲಿ ಉಳಿಯಬೇಕೆಂಬ ಬಗ್ಗೆ ನಾನು ಖಚಿತ ಅಭಿಪ್ರಾಯ ಹೊಂದಿರಲಿಲ್ಲ ಹಾಗೂ ಆಗಾಗ ವಿಶ್ವವಿದ್ಯಾಲಯಕ್ಕೆ ಮರಳಿ ಹೋಗುವ ಹಂಬಲ ಉಂಟಾಗುತ್ತಿತ್ತು. ಒಂದು ಹೊಸ ವೃತ್ತಿ ನನ್ನ ಮುಂದೆ ನಿಂತಾಗ ನಾನು ಅನೇಕ ಸಲ ನಿಧಾನವಾಗಿ ಕಲಿಯುವವನಾಗಿದ್ದೆ. 1961ರಲ್ಲಿ ಭಾರತದ ಶೈಕ್ಷಣಿಕ ತಳಹದಿ ಈಗಿನಕ್ಕಿಂತಲೂ ಬಹಳ ಚಿಕ್ಕದಾಗಿತ್ತು ಹಾಗೂ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಯಾಗಲೀ ಮೂಲ ಬರವಣಿಗೆಯಾಗಲೀ

ನಡೆಯುತ್ತಿದ್ದದ್ದು ಸ್ವಲ್ಪವೇ. ಹೀಗಾಗಿ ಒಳ್ಳೆಯ ಹಸ್ತಪ್ರತಿಗಳು ಬರುತ್ತಿದ್ದದ್ದು ವಿರಳವೇ. ಒಯುಪಿಯಲ್ಲಿ ನಾನಿದ್ದ ಮೊದಲ ವರ್ಷ, ಬಾಕಿ ಉಳಿದಿದ್ದ ಟೈಪಾದ ಪ್ರತಿಗಳಿಂದ ಪುಸ್ತಕಗಳ ಪ್ರಕಾಶನಕ್ಕೆ ನಾನು ನೆರವಾಗಿದ್ದರೂ ಒಂದಾದರೂ ಯೋಗ್ಯ ಯೋಜನೆಯನ್ನು ಪ್ರಾರಂಭಿಸದೆ ಇದ್ದದ್ದು ನನಗೆ ನಿರಾಶೆಯನ್ನುಂಟುಮಾಡಿತ್ತು.

1962ರಲ್ಲಿ ಬ್ರಿಟನ್‌ನಲ್ಲಿ ಇನ್ನೂ ಕೆಲವು ತಿಂಗಳು ಕಳೆದ ನಂತರ ನನ್ನನ್ನು ಮದ್ರಾಸ್‌ಗೆ ಕಳಿಸಲಾಯಿತು. ಅಲ್ಲಿಯ ಒಯುಪಿ ಕಚೇರಿಯ ಕಾರ್ಯನಿರ್ವಹಣೆಗೆ ನೆರವಾಗುವುದು ಹಾಗೂ ಮೂಲತಃ ಸ್ಥಳೀಯ ಶೈಕ್ಷಣಿಕ ಮಾರುಕಟ್ಟೆಗೆ ಪುಸ್ತಕಗಳನ್ನು ಪ್ರಕಟಿಸುವುದು ಮತ್ತು ಸಂಪಾದಿಸುವುದು ನನ್ನ ಕೆಲಸವಾಗಿತ್ತು. ನಾನಾಗ 20ರ ಪ್ರಾಯದಲ್ಲಿದ್ದೆ ಹಾಗೂ ದಕ್ಷಿಣ ಮುಂಗಾರು ಮಳೆ ಅತ್ಯಂತ ರಭಸದಿಂದ ಬೀಳುತ್ತಿದ್ದ ಸಮಯದಲ್ಲಿ ಮದ್ರಾಸ್ ತಲುಪಿದೆ. ಒಯುಪಿ ಕಚೇರಿಗೆ ಹೋಗುವ ಮಾರ್ಗ ಆಗಾಗ ನೀರಿನಿಂದ ತುಂಬಿರುತ್ತಿತ್ತು, ಹಾಗೂ ಕೆಲವು ಸಲ ನಾವು ನಮ್ಮ ಪ್ಯಾಂಟ್‌ಗಳನ್ನು ಅಥವಾ ಧೋತರಗಳನ್ನು ಮೇಲಕ್ಕೆತ್ತಿ ನೀರಿನಲ್ಲಿ ಮೆಲ್ಲನೆ ಸಾಗಬೇಕಾಗಿತ್ತು. ಆ ದಿನಗಳಲ್ಲಿ ಇನ್ನೂ ಲೆಟರ್‌ಪ್ರೆಸ್ ಮತ್ತು ಹಾಟ್ ಮೆಟಲ್ ಭಾರತದ ಮುದ್ರಣದಲ್ಲಿ ಪ್ರಮುಖವಾಗಿದ್ದವು. ನಾನು ಮದ್ರಾಸ್‌ನಲ್ಲಿದ್ದ ಎರಡು ವರ್ಷಗಳ ಕಾಲ ದೊಡ್ಡ ಮತ್ತು ಚಿಕ್ಕದಾದ ಸುಮಾರು 200 ಪುಸ್ತಕಗಳ ಕರಡಚ್ಚುಗಳನ್ನು ತಿದ್ದಿರಬೇಕು, ಬಹುಶಃ 60 ಪುಸ್ತಕಗಳನ್ನು ತಿದ್ದಿ ಪರಿಷ್ಕರಿಸಿರಬೇಕು, ಅನೇಕ ವಿನ್ಯಾಸಗಳನ್ನು ರಚಿಸಿದೆ, ಅನೇಕ ಮುಖಪುಟಗಳ ವಿನ್ಯಾಸಗಳನ್ನು ಸಿದ್ಧಪಡಿಸಿದೆ ಹಾಗೂ ಕೆಲವು ಶಾಲಾ ಪುಸ್ತಕಗಳು ಮತ್ತು ರಕ್ಷಾಪುಟಗಳಿಗೆ ಚಿತ್ರಗಳನ್ನು ಬರೆದೆ. ಒಳನಾಡಿನಲ್ಲಿ ಮಾರುಕಟ್ಟೆಗಳು ಹೇಗಿವೆ ಎಂಬುದನ್ನು ತಿಳಿದುಕೊಳ್ಳಬೇಕಾದ್ದು ಸಂಪಾದಕರಿಗೆ ಮುಖ್ಯ. ದಕ್ಷಿಣ ಭಾರತದಲ್ಲಿ ನಾವು ಪ್ರಕಟಿಸುತ್ತಿದ್ದ ಮತ್ತು ಮಾರುತ್ತಿದ್ದ ಪುಸ್ತಕ ವ್ಯಾಪಾರದ ಸ್ಥಳಗಳನ್ನು, ವ್ಯಾಸಂಗ ಸಂಸ್ಥೆಗಳನ್ನು ಸಾಕಷ್ಟು ವ್ಯಾಪಕವಾಗಿ ನೋಡಿ ತಿಳಿದುಕೊಳ್ಳುವ ಅವಕಾಶ ನನಗೊದಗಿದ್ದು ನನ್ನ ಸುದೈವ. ನನ್ನ ಪ್ರವಾಸ ಕಾಲದಲ್ಲಿ ನಾನು ಸಾಮಾನ್ಯವಾಗಿ ಹಸ್ತಪ್ರತಿಗಳನ್ನು, ಕರಡಚ್ಚುಗಳನ್ನು ಒಯ್ಯುತ್ತಿದ್ದೆ. ಹೀಗಾಗಿ ಮಹಾಬಲಿಪುರಂನ ಸಮುದ್ರದಂಡೆಯ ದೇವಸ್ಥಾನದ ಸಮೀಪದ ಕಿರುಗೋಡೆಯ ಮೇಲೆ ಕುಳಿತು ಕರಡಚ್ಚುಗಳನ್ನು ತಿದ್ದಿದ್ದೇನೆ, ತಂಜಾವೂರಿನ ರೈಲ್ವೆ ನಿಲ್ದಾಣದ ರಿಟೈರಿಂಗ್ ಕೋಣೆಯಲ್ಲಿ ಪಠ್ಯಪುಸ್ತಕವೊಂದನ್ನು ತಿದ್ದಿದ್ದೇನೆ, ಬೆಂಗಳೂರಿನ ವಿಕ್ಟೋರಿಯಾ ಹೋಟೆಲ್‌ನಲ್ಲಿ ರಕ್ಷಾಪುಟದ ಸ್ಥೂಲ ವಿನ್ಯಾಸವನ್ನು ರಚಿಸಿದ್ದೇನೆ.

1964ರ ಕೊನೆಯಲ್ಲಿ ನಾನು ಮದ್ರಾಸ್‌ನಿಂದ ಮುಂಬಯಿಗೆ ಪ್ರಯಾಣ ಮಾಡಿದಾಗ ಕೊನೆಗಾದರೂ ನನ್ನ ವೃತ್ತಿಯಲ್ಲಿ ಪರಿಣತಿ ಪಡೆದಿದ್ದೇನೆ ಎಂದು ನನಗೆನಿಸಿತು. ಪ್ರಕಾಶನ ವೃತ್ತಿಯಲ್ಲಿ ಆ ವೇಳೆಗೆ ನಾನು ಮೂರು ವರ್ಷ ಕಳೆದಿದ್ದೆ ಹಾಗೂ ವೃತ್ತಿಯಲ್ಲಿ ಸಾಕಷ್ಟು ಸಾಮರ್ಥ್ಯ ಗಳಿಸಲು ನನಗೆ ಅಷ್ಟು ದೀರ್ಘಕಾಲ ಬೇಕಾಯಿತು ಎನ್ನುವ ವಿಚಾರ ಮನಸ್ಸನ್ನು ಗಂಭೀರಗೊಳಿಸುವಂತಹುದು. ಆದರೆ ಕೇವಲ ಉತ್ತಮ ತರಬೇತಿಯಿಂದ ಪ್ರಕಾಶನ ವೃತ್ತಿಯಲ್ಲಿ ಸಾಧನೆ ಆಗದು. ಯೋಗ್ಯ

ಪ್ರಕಾಶಕ ವಿಚಾರಗಳು ಮತ್ತು ಬರೆಹಗಳ ಜಗತ್ತಿನೊಂದಿಗೆ ಸಂಪರ್ಕ ಹೊಂದಿರಬೇಕು. ಅದು ಕೊನೆಯಿಲ್ಲದ ಕಲಿಕೆ ಮತ್ತು ಸ್ವಶಿಕ್ಷಣ.

ಹೀಗೆ ಪ್ರಕಾಶನ ವೃತ್ತಿಯಲ್ಲಿ ಸತತವಾಗಿ ನವಚೇತನ ಉಂಟಾಗುತ್ತಿರಬೇಕು ಹಾಗೂ ಪ್ರಕಾಶನ ಕೆಲಸವನ್ನು ಚೆನ್ನಾಗಿ ಮಾಡುವುದರಿಂದ ಸಂಭ್ರಮ ಸಂತೋಷ ಉಂಟಾದರೂ, ಅದೇ ಸಮಯಕ್ಕೆ ಪ್ರಕಾಶನ ವೃತ್ತಿ ಕಠಿಣ ದುಡಿಮೆಯನ್ನು ಕೋರುವ ವೃತ್ತಿ. ಒಮ್ಮೆ ಶ್ರೇಷ್ಠ ಪ್ರಕಾಶಕರಾಗಿದ್ದವರು ತಮ್ಮ ಚೈತನ್ಯವನ್ನು ಕಳೆದುಕೊಂಡು ತಮಗೆಲ್ಲ ತಿಳಿದಿದೆ ಎಂದು ಭಾವಿಸಿದ್ದರಿಂದ ಶ್ರೇಷ್ಠ ಪ್ರಕಾಶಕರಾಗಿ ಉಳಿಯದೆ ಹೋದರು.

# ಸರಿಯಾದ ಆಯ್ಕೆ

## ಊರ್ವಶಿ ಬುಟಾಲಿಯ

ನಾನು ಪ್ರಕಾಶನ ಕ್ಷೇತ್ರಕ್ಕೆ ಕಾಲಿಟ್ಟಿದ್ದರ ಚರಿತ್ರೆಯನ್ನು ಗುರುತಿಸುವಾಗ, ಪ್ರಕಾಶನ ಕೆಲಸದಲ್ಲಿ ನನಗೆ ಸದಾ ಆಸಕ್ತಿ ಇತ್ತು ಎಂದು ಹಿನ್ನೋಟದ ಅನುಕೂಲದಿಂದ ನನಗೀಗ ತೋರುತ್ತಿದೆ; ಪುಸ್ತಕಗಳು ಮತ್ತು ಮುದ್ರಣ ನನ್ನ ಮೊದಲ ಅಕ್ಕರೆಯುವು ಹಾಗೂ ನಾನು ಈ ವೃತ್ತಿಯಲ್ಲಿ ಛಷ್ಟು ಸಂತಸದಿಂದ್ದೇನೆಂದರೆ ಬೇರೆಲ್ಲೂ ಅಲ್ಲದೆ ನಾನು ಇಲ್ಲೇ ಇರಬೇಕೆಂಬುದರ ಬಗ್ಗೆ ನನ್ನ ಮನಸ್ಸಿನಲ್ಲಿ ಎಂದೂ ಯಾವ ಸಂಶಯವೂ ಇರಲಿಲ್ಲ. ಏನೇ ಆದರೂ ಇದಕ್ಕೊಂದು ಪ್ರಾರಂಭ, ಪ್ರವೇಶದ ಒಂದು ಗಳಿಗೆ ಇರಲೇಬೇಕಲ್ಲ; ಅದು ನನ್ನ ಚಿತ್ತಭಿತ್ತಿಯಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ. ಒಂದು ಸಂಜೆ ಫ್ರೆಂಚ್ ಕಲ್ಚರಲ್ ಸೆಂಟರ್‌ನಲ್ಲಿ ಟೇಬಲ್ ಟೆನಿಸ್ ಆಡುತ್ತಿದ್ದಾಗ ಪ್ರಕಾಶನ ಸಂಸ್ಥೆಯೊಂದರಲ್ಲಿ ಕಾರ್ಯದರ್ಶಿಯಾಗಿದ್ದ ನನ್ನ ಗೆಳತಿಯೊಬ್ಬಳಲ್ಲಿ ನಾನು ಸಾಹಿತ್ಯವನ್ನು ಬಹಳಷ್ಟು ಪ್ರೀತಿಸುತ್ತಿದ್ದರೂ, ಶೇಕ್ಸ್‌ಪಿಯರ್ ಮತ್ತು ಮಿಲ್ಟನ್‌ನ ಕೃತಿಗಳನ್ನು ಓದಿ ನಾನು ಬೇಸತ್ತಿದ್ದೇನೆ, ಬೇರೇನಾದರೂ ಮಾಡಲು ಬಹಳ ಇಷ್ಟಪಡುತ್ತಿದ್ದೇನೆ ಎಂದು ಹೇಳಿಕೊಂಡೆ. ಆದರೆ ಮಾಡುವುದಾದರೂ ಏನನ್ನು? ಎಂ.ಎ. ಪದವಿಯ ಮುಕ್ತಾಯ ಕಾಲ ಶೀಘ್ರವಾಗಿ ಸಮೀಪಿಸುತ್ತಿತ್ತು ಹಾಗೂ ಇಂಗ್ಲಿಷ್ ಪದವೀಧರರಿಗೆ ಬಹುಬೇಗ ಅವನತಿಗೀಡಾಗುವ ದಾರಿ ಬಿಟ್ಟರೆ ಬೇರೆ ಆಯ್ಕೆ ಅಷ್ಟಾಗಿರಲಿಲ್ಲ. ದಿಲ್ಲಿಯ ಜಂಗ್‌ಪುರದಲ್ಲಿ ಇಡೀ ಜೀವನವನ್ನು ಮಿಲ್ಟನ್ ಮತ್ತು ಸ್ಪೆನ್ಸರ್ ಅವರೊಂದಿಗೆ ಕಳೆಯುವುದನ್ನು ಮುಂದುವರೆಸುವುದೇ ಆ ದಾರಿಯಾಗಿತ್ತು.

ಕೆಲವು ತಿಂಗಳುಗಳ ನಂತರ ಆ ಗೆಳತಿ ನನ್ನನ್ನು ಭೇಟಿಯಾಗಿ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನ ಒಯುಪಿ ಮುದ್ರಣ ವಿಭಾಗದಲ್ಲಿ ನನ್ನ ಸ್ವಂತ ಇಚ್ಛಾನುಸಾರ ಕೆಲಸ ಮಾಡಲು ಇಷ್ಟವಾಗುತ್ತದೆಯೋ ಎಂದು ಕೇಳಿದರು. ಆಗಲಿ ಎಂದು ಹೇಳುವುದಕ್ಕೆ ಒಂದು ನಿಮಿಷವೂ ನನಗೆ ಬೇಕಾಗಲಿಲ್ಲ (ಪರೀಕ್ಷೆ ಮುಗಿದು

ಭಯದಿಂದ ನಿರೀಕ್ಷಿಸುತ್ತಿದ್ದ ಫಲಿತಾಂಶಗಳು ಬರುವುದರ ನಡುವಣ ಅವಧಿಯೂ ಇದಾಗಿತ್ತು). ಹೀಗೆ ನಾನು 'ಪೇಸ್ಟರ್ ಅಪ್ಪರ್' – ಅಂಟು ಹಾಕುವ ಕೆಲಸ ಮಾಡುವವರು – ಎಂಬ ಘನವಾದ ಹುದ್ದೆಯನ್ನು ಗಳಿಸಿದೆ. ಆಗ ಒಯುಪಿಯವರು ಹಾಂಗ್‌ಕಾಂಗ್‌ನಲ್ಲಿ ಮುದ್ರಿಸಿದ ಇಂಗ್ಲಿಷ್ ಪಠ್ಯಪುಸ್ತಕಗಳ ಸರಣಿಯನ್ನು ಭಾರತೀಯ ಶಾಲೆಗಳಿಗೆ ಅನುಗೊಳಿಸುತ್ತಿದ್ದರು ಹಾಗೂ ನನಗೆ ಜಾನ್ ಮತ್ತು ಮೇರಿ ಎಂಬ ಹೆಸರುಗಳ ಮೇಲೆ ರಾಮ ಮತ್ತು ಸೀತೆ ಎಂಬ ಹೆಸರುಗಳನ್ನು ಅಂಟಿಸುವ ಕೆಲಸ ಕೊಟ್ಟಿದ್ದರು. ಕಲಾವಿದನೊಬ್ಬ ನೀಲಿ ಕಣ್ಣಿನ ಕೆಂಗೂದಲಿನ ಹುಡುಗ ಹುಡುಗಿಯರ ಚಿತ್ರಗಳನ್ನು ರಾಮ ಮತ್ತು ಸೀತೆ ಹೇಗೆ ಕಾಣಬೇಕೋ ಹಾಗೆ ಕಾಣುವಂತೆ ತಿದ್ದುತ್ತಿದ್ದ.

ಈ ಅಂಟಿಸುವ ಕೆಲಸಕ್ಕೆ ಆದರದೇ ಆದ ಮೋಹಕತೆ ಇತ್ತು ಹಾಗೂ ಆ ಕೆಲಸವನ್ನು ಸುಮಾರು ನಾಲ್ಕು ತಿಂಗಳ ಕಾಲ ಮಾಡುತ್ತಿದ್ದಂತೆ ರಬ್ಬರ್ ದ್ರಾವಣದ ಬಗ್ಗೆ ಹಾಗೂ ಹಸ್ತಪ್ರತಿಯಿಂದ ಉತ್ತಮ ಮುದ್ರಣವನ್ನು ಹೇಗೆ ಮಾಡಬೇಕು ಎಂಬೆಲ್ಲದರ ಬಗ್ಗೆ ಕಲಿತೆ. ಒಂದು ಮುದ್ರಣ ಯಂತ್ರವನ್ನು ನೋಡುತ್ತಿದ್ದಂತೆ ಹಾಗೂ ಮುದ್ರಣ ಇಂಕ್‌ನ ವಾಸನೆ ಮೂಗಿಗೆ ಬಡಿಯುತ್ತಿದ್ದಂತೆ ನಾನು ಇನ್ನೊಂದು ಆಶ್ಚರ್ಯದ ವಿಷಯವನ್ನು ಕಲಿತೆ: ಅದೆಂದರೆ ಅವೆರಡರ ಮೇಲೆ ನನ್ನಲ್ಲಿ ಅಳಿಸಲಾಗದ ಪ್ರೀತಿ ಮೂಡಿತ್ತು. ಇಂದೂ ಸಹ ನಾನು ಆಗ ನನ್ನಲ್ಲಿ ಮೂಡಿದ್ದ ಕನಸನ್ನು ಹೊತ್ತು ತಿರುಗುತ್ತೇನೆ: ಒಂದು ದಿನ ಸಣ್ಣ ಮುದ್ರಣ ಯಂತ್ರವೊಂದು ನನ್ನದಾಗುತ್ತದೆ, ಅದರಲ್ಲಿ ನನಗಿಷ್ಟವಾದದ್ದನ್ನಷ್ಟೇ ಮಾಡುತ್ತೇನೆ: ಗೆಳೆಯರೊಬ್ಬರಿಗೆ ಅವರ ಹೆಸರು, ವಿಳಾಸ ಇತ್ಯಾದಿ ಉಳ್ಳ ಹಾಳೆಗಳನ್ನು ಮುದ್ರಿಸಿ ಕೊಡುವುದು, ನನಗೆ ಪ್ರಿಯವಾದ ಚಳವಳಿಗಾಗಿ ಕರಪತ್ರಗಳನ್ನು ಮುದ್ರಿಸುವುದು ಇತ್ಯಾದಿ.

ಆದರೆ ನಾಲ್ಕು ತಿಂಗಳ ಅವಧಿ ಬಹಳ ಬೇಗ ಮುಗಿಯಿತು ಹಾಗೂ ನಾನು ಸಂಸ್ಥೆಯಿಂದ ಹೋಗಬೇಕಾದ ಸಮಯವೂ ಬಂತು. ಆ ವೇಳೆಗೆ ಪ್ರಕಾಶನ ವೃತ್ತಿಯನ್ನು ನಾನು ಇಷ್ಟಪಡುತ್ತೇನೆ ಎಂದು ತಿಳಿಯುವಷ್ಟರ ಮಟ್ಟಿಗೆ ನಾನು ಪ್ರಕಾಶನ ರಂಗವನ್ನು ಕಂಡಿದ್ದೆ. ಆದರೆ ಮುಂದಕ್ಕೆ ನನಗೆ ದಾರಿ ಇತ್ತೇ ? ಇದ್ದಕ್ಕಿದ್ದಂತೆ, ಪವಾಡಸದೃಶವಾದ ರೀತಿಯಲ್ಲಿ ದಾರಿ ಕಾಣಿಸಿತು. ಆಗ ನನ್ನ ಮೇಲಧಿಕಾರಿಯಾಗಿದ್ದವರು ಅಥವಾ ಜೊತೆಯಲ್ಲಿ ಕೆಲಸ ಮಾಡುತ್ತಿದ್ದ ವ್ಯಕ್ತಿ ಹಾಗೂ ನಂತರ ಸಾಕಷ್ಟು ಸಮಯ ನನ್ನ ಮೇಲಧಿಕಾರಿಯಾಗಿ ಮುಂದುವರೆಯಲಿದ್ದ ಮನುಷ್ಯ – ನನ್ನ ಸಹಾಯಕಿಯಾಗಿ ಕೆಲಸ ಮಾಡುತ್ತೀಯಾ ಎಂದು ಕೇಳಿದರು. ಆಡ್ರಿಯನ್ ಬುಲಕ್ ಅವರು (ಅವರು ಮಿಸ್ಟರ್ ಬಫೆಲೋ ಎಂದೇ ಸಾಮಾನ್ಯವಾಗಿ ಪರಿಚಿತರಾಗಿದ್ದರು) ನನಗೆ ಬಹಳ ಚೆನ್ನಾಗಿ ಮನದಟ್ಟಾಗುವಂತೆ ಹೇಳಿದರು – ನನಗೆ ಅದರ ಅಗತ್ಯವೇನೂ ಇರಲಿಲ್ಲ – ಮತ್ತು ನನಗೆ ಸಂತೋಷದಿಂದ ತರಬೇತಿಯನ್ನು ಕೊಡುವುದಾಗಿಯೂ; ಅನಂತರ ನಾನು ಮುದ್ರಣ ವಿಭಾಗದಲ್ಲಿ ಪೂರ್ಣ ಪ್ರಮಾಣದ ಉದ್ಯೋಗಿಯಾಗಬಹುದೆಂದೂ ಹೇಳಿದರು. ನಾನು ಇಚ್ಛಿಸಿದ್ದು ಇದೇ ಎಂಬ ಬಗ್ಗೆ ನನ್ನ ಮನಸ್ಸಿನಲ್ಲಿ ಯಾವ ಸಂಶಯವೂ ಇರಲಿಲ್ಲ: ಕೆಲಸ

ಕೊಡುವುದಾಗಿ ಹೇಳಿದಾಗ ನನ್ನಲ್ಲಿ ಉಂಟಾದ ಹಿಗ್ಗು, ಸಂಭ್ರಮ, ಸಡಗರಗಳು ನನಗಿನ್ನೂ ನೆನಪಾಗುತ್ತವೆ. 450 ರೂಪಾಯಿಗಳ ಸ್ಟೈಪೆಂಡ್ ಹಾಗೂ ದಿನಕ್ಕೆ ಎಂಟು ಗಂಟೆಗಳ ದುಡಿತದ ಈ ಉದ್ಯೋಗವನ್ನು ಹಿಡಿದು ಅದರ ದುಪ್ಪಟ್ಟು ವೇತನವನ್ನು ಕೊಡಲಿದ್ದ ಉಪಾಧ್ಯಾಯಿನಿಯ ಕೆಲಸವನ್ನು ಕೈಬಿಟ್ಟದ್ದರಿಂದ ನಾನು ಸ್ವಲ್ಪ ಮೂರ್ಖಳಿದ್ದೇನೆ ಎಂದು ನನ್ನ ತಂದೆತಾಯಿಯರು ಭಾವಿಸಿದರು. ಆದರೆ ಇದನ್ನೇ ನೀನು ಮಾಡಲು ಬಯಸುವುದಾದರೆ ನಿನಗೆ ಸಂಪೂರ್ಣ ಬೆಂಬಲ ಕೊಡುತ್ತೇವೆಂದು ಅವರು ಹೇಳಿದರು. ನನಗೆ ಬುದ್ಧಿ ಕೆಟ್ಟಿದೆ ಎಂದು ನನ್ನ ಉಪಾಧ್ಯಾಯರು ಭಾವಿಸಿಧರು: ಅವರ ಪ್ರಕಾರ ಟ್ರಾಯ್‌ಲಸ್ ಮತ್ತು ಕ್ರೆಸ್ಸಿಡ ರಬ್ಬರ್ ದ್ರಾವಕ ಮತ್ತು ಮುದ್ರಣ ಬ್ಲಾಕ್‌ಗಳಿಗಿಂತ ಹೆಚ್ಚು ಆಸಕ್ತಿಯವಾಗಿದ್ದವು. ಆದರೆ ನನ್ನ ನಿರ್ಧಾರ ಮಾಡಿ ಆಗಿತ್ತು.

ಆಡ್ರಿಯನ್ ಅವರು ನನ್ನನ್ನು ಆಳಕ್ಕೆ ತಳ್ಳಿಯೇ ತಮ್ಮ ತರಬೇತಿಯನ್ನು ಪ್ರಾರಂಭಿಸಿದರು. ಪುಸ್ತಕವೊಂದಕ್ಕೆ ರಕ್ಷಾಪುಟದ ವಿನ್ಯಾಸ ತಯಾರಿಸುವ, ಪುಸ್ತಕದ ಕರಡಚ್ಚು ತಿದ್ದುವ, ಮುದ್ರಣಕ್ಕೆ ಸಂಬಂಧಿಸಿದ ಗುರುತುಗಳನ್ನು ಹಾಕಿ ಸಿದ್ಧಪಡಿಸುವ ಕೆಲಸವನ್ನು ನನಗೆ ವಹಿಸಿ ಅವರು ರಜೆಯ ಮೇಲೆ ಹೊರಟುಹೋದರು.

"ಈ ಎಲ್ಲ ಕೆಲಸ ಮಾಡಿಬಿಡು, ನಂತರ ಮುದ್ರಕರೊಂದಿಗೆ ಈ ಬಗ್ಗೆ ವ್ಯವಹರಿಸು. ನಾನು ಹಿಂತಿರುಗಿ ಬರುವ ಹೊತ್ತಿಗೆ ಅದು ಸಿದ್ಧವಾಗಿರಬೇಕು" ಎಂದು ನನಗೆ ಹೇಳಿ ಹೋದರು. ನಾನು ಭಯ, ಆತಂಕದಿಂದ ಕೆಲಸ ಮಾಡಿದೆ, ಎಲ್ಲವೂ ಸರಿಹೋಗುತ್ತದೆ ಎಂದು ತೀವ್ರವಾಗಿ ನಿರೀಕ್ಷಿಸಿದೆ ಹಾಗೂ ಒಂದು ತಪ್ಪು ಮಾಡಿದೆ! ಆದರೆ ಆಡ್ರಿಯನ್ ತುಟಿಪಿಟಕ್ಕೆನ್ನಲಿಲ್ಲ. ನನ್ನ ಧೈರ್ಯವನ್ನು ಪ್ರಶಂಸಿಸಿ ಇಡೀ ಕೆಲಸವನ್ನು ಮತ್ತೆ ಮಾಡಿಸಿದರು. ಅದು, ಸವಕಲಾದ ಮಾತಿನಲ್ಲಿ ಹೇಳಬೇಕಾದರೆ, ಒಂದು ಅದ್ಭುತ ಸಂಬಂಧದ ಪ್ರಾರಂಭ. ನಮ್ಮ ಸಹೋದ್ಯೋಗಿ ಭೌಮಿಕ್‌ರೊಂದಿಗೆ, ಅವರೂ ಆಡ್ರಿಯನ್‌ರ ಸಹಾಯಕರಾಗಿದ್ದರು, ನಾವು ಅನೇಕ ವರ್ಷಗಳ ಕಾಲ ಒಂದು ತಂಡವಾಗಿ ಕೆಲಸ ಮಾಡಿದೆವು ಹಾಗೂ ನಾನು ಇಂದು ತಿಳಿದಿರುವುದರಲ್ಲಿ ಹೆಚ್ಚಿನದಕ್ಕೆ ಆಡ್ರಿಯನ್ ಅವರಿಗೇ ನಾನು ಋಣಿ. ಕೆಲಸಕ್ಕೆ ಸೇರಲು ನಾನು ಒಪ್ಪಿಕೊಂಡ ನಂತರ ಹಾಗೂ ನೇಮಕಾತಿ ಪತ್ರವನ್ನು ನನಗೆ ಕೊಟ್ಟ ಮೇಲೆ, ನನ್ನ ತಂದೆ ತಾವಾಗಿ ಕಚೇರಿಗೆ ಭೇಟಿ ನೀಡಿ ಎಲ್ಲ ಮೇಲಧಿಕಾರಿಗಳನ್ನು ಒಟ್ಟಿಗೆ ಸೇರಿಸಿ ಒಯುಪಿ ಅಂತಹ ಸಂಸ್ಥೆಯ ಗೌರವದ (ಅದರ ಸುರಕ್ಷೆಯ ಬಗ್ಗೆ ಎಂದೂ ನನಗೆ ಹೇಳಲಾಗಿತ್ತು) ಬಗ್ಗೆ ಅದರಲ್ಲೂ ತರುಣಿಯರು ಕೆಲಸ ಮಾಡುತ್ತಿರುವ ಸಂಸ್ಥೆಯ ಗೌರವದ ಬಗ್ಗೆ ಒತ್ತಿಒತ್ತಿ ಮಾತನಾಡಿದರೆಂದು ನಂತರ ಆಡ್ರಿಯನ್ ನನಗೆ ಹೇಳಿದರು! ಅದರಿಂದ ನನ್ನ ಮೇಲಧಿಕಾರಿಗಳಿಗೆ ವಿನೋದವೆನಿಸಿದ್ದರೆ, ಅದಕ್ಕೆ ಸಮನಾದ ನನ್ನದೇ ಕಥೆಯನ್ನು ನಾನು ಹೇಳಬಲ್ಲವಳಾಗಿದ್ದೆ. ನನ್ನ ನೇಮಕಾತಿ ಪತ್ರವನ್ನು ನನ್ನ ಕೈಯಲ್ಲಿಟ್ಟ ಮ್ಯಾನೇಜರು ಹೆಂಗಸರು ಹೊರಟುಹೋಗಿ ಮದುವೆಯಾಗಿ ಬಿಡುತ್ತಾರೆ, ಮಕ್ಕಳನ್ನು ಹಡೆಯುತ್ತಾರೆ ಎಂಬ ಹೆದರಿಕೆಯಿಂದಾಗಿ ಮಹಿಳೆಯೊಬ್ಬರನ್ನು ಅಧಿಕಾರಿಯ ಸ್ಥಾನಕ್ಕೆ ನಾವು ಹಿಂದೆಂದೂ ನೇಮಕ

ಮಾಡಿದ್ದಿಲ್ಲ. (ಅದು ನಿಜವಾಗಿರಲಿಲ್ಲ) ಆದ್ದರಿಂದ ಸದ್ಯದಲ್ಲಿ ನೀವೇನಾದರೂ ಮದುವೆಯಾಗಲಿದ್ದೀರಾ ಎಂದು ನನ್ನನ್ನು ಗಂಭೀರವಾಗಿ ಪ್ರಶ್ನಿಸಿದರು. (ಅವರು ಆ ಪ್ರಶ್ನೆಯನ್ನು ಆಪಾದನೆ ಮಾಡುವ ಧ್ವನಿಯಲ್ಲಿ ಕೇಳಿದ್ದರಿಂದ ಅವರು ಹೇಳಿದಂತೆಯೇ ಮಾಡುತ್ತಿದ್ದ ನನ್ನಂತಹ ಸ್ತ್ರೀಯರೆಲ್ಲರ ಪರವಾಗಿ, ತಕ್ಷಣ ಹಾಗೂ ಅವಿಚಾರಿಕವಾಗಿ, ನಾನು ತಪ್ಪಿತಸ್ಥಳೆಂದು ಭಾವಿಸುವಂತಾಯಿತು!) ಆಗಷ್ಟೇ ನಾನು ಸ್ತ್ರೀ ಸ್ವಾತಂತ್ರ್ಯವಾದಕ್ಕೆ ಒಲಿಯಲು ಪ್ರಾರಂಭಿಸಿದ್ದೆ ಹಾಗೂ ಅವರ ಅಭಿಪ್ರಾಯದ ವಿರುದ್ಧ ನಾನು ಪ್ರತಿಭಟಿಸಿದರೂ, ನಾನು ಸಾಕಷ್ಟು ಪ್ರತಿಭಟನೆ ಸೂಚಿಸಲಿಲ್ಲ; ನನಗೆ ಇಂದು ಅಂತಹ ಮಾತನ್ನು ಯಾರಾದರೂ ಹೇಳಿದರೆ ಎಷ್ಟು ಪ್ರತಿಭಟಿಸುತ್ತೇನೋ ಅಷ್ಟು ಪ್ರತಿಭಟನೆಯನ್ನಂತೂ ಖಂಡಿತವಾಗಿಯೂ ಸೂಚಿಸಲಿಲ್ಲ. ಬೇರೆ ಹೆಂಗಸರು ಏನನ್ನಾದರೂ ಮಾಡಲಿ – ಅವರ ಮೂರ್ಖತನಕ್ಕೆ ನಾನು ಜವಾಬ್ದಾರಳಾಗಿರಲಿಲ್ಲ – ನಾನು ಅದನ್ನು ಮಾಡುವುದಿಲ್ಲ ಎಂದು ಹೆಮ್ಮೆಯಿಂದ ಹೇಳಿಕೊಂಡೆ. ಅವರ ಆಪಾದನೆಯ ಧ್ವನಿಯಿಂದ ನನಗೆ ಚಿಂತೆಯಾದರೂ (ನಾವಿಂದು ಅತ್ಯಂತ ಆಪ್ತ ಮಿತ್ರರಾಗಿದ್ದೇವೆ ಹಾಗೂ ಅವರು ನನ್ನಿಂದ ಲೇಖಕರೊಬ್ಬರನ್ನು ಕದಿಯಲು ಪ್ರಯತ್ನಿಸಿದಾಗ ನಾನು ಇದನ್ನು ಅವರಿಗೆ ಎಂದೂ ನೆನಪಿಸದೆ ಬಿಡುವುದಿಲ್ಲ), ನಾನೂ ಅಷ್ಟೇ ಗಂಭೀರವಾಗಿ ಅವರಿಗೆ ನಾನು 'ಕನಿಷ್ಠ ಐದು ವರ್ಷಗಳ' ಕಾಲ ಮದುವೆಯಾಗುವ ಯಾವ ಇಚ್ಛೆಯನ್ನು ಹೊಂದಿಲ್ಲ ಎಂದು ಭರವಸೆ ನೀಡಿದೆ. ಸುಮಾರು ಇಪ್ಪತ್ತು ವರ್ಷಗಳ ನಂತರವೂ ಆ ಭರವಸೆಯನ್ನು ನಾನು ಕಾಪಾಡಿಕೊಂಡು ಬಂದಿದ್ದೇನೆ. ಈ ಮಧ್ಯೆ, ಅವರು ತಮ್ಮ ಅಭಿಪ್ರಾಯವನ್ನು ಬದಲಾಯಿಸಿದ್ದಾರೆ ಹಾಗೂ ನೀವು ಏಕೆ ಮದುವೆಯಾಗಿಲ್ಲ ಎಂದು ಕೇಳುವುದನ್ನು ನಿಲ್ಲಿಸಿಯೇ ಇಲ್ಲ!

ಒಮ್ಮೆ ವೃತ್ತಿಯ ರುಚಿ ಕಂಡ ನಂತರ, ಪ್ರಕಾಶನ ಕುರಿತ ನನ್ನ ಹಸಿವು ತಣಿಯಲೇ ಇಲ್ಲ. ಮುದ್ರಣ ವಿಭಾಗದಲ್ಲಿ ನನ್ನ ಕೆಲಸದ ಬಗ್ಗೆ ವಿಶ್ವಾಸ ಮೂಡುತ್ತಿದ್ದಂತೆ ಬೇರೆ ಏನೇನೋ ಕೆಲಸಗಳನ್ನು ಮಾಡಲು ನಾನು ಬಯಸಿದೆ: ಸಂಪಾದಕಿಯಾಗಬೇಕು, ಮಾರಾಟದ ವಿಷಯ ಕಲಿಯಬೇಕು, ಉತ್ತೇಜನಕ್ಕೆ ಸಂಬಂಧಿಸಿದ ಕೆಲಸ ಮಾಡಬೇಕು ಇತ್ಯಾದಿ. ಮುದ್ರಣ ವಿಭಾಗದ ಕೆಲಸ ನನಗೆ ಪ್ರಿಯವಾಗಿರಲಿಲ್ಲ ಎಂದಲ್ಲ - ಮುದ್ರಣ ಸಂಸ್ಥೆಗಳವರೊಂದಿಗೆ ಅವರದೇ ಧಾಟಿಯಲ್ಲಿ ವ್ಯವಹರಿಸುತ್ತಿದ್ದ ಬಗ್ಗೆ ಹಾಗೂ ಕಾಗದದ ಗುಣಮಟ್ಟಗಳು, ಸಂಸ್ಕರಣ ದೋಷಗಳು, ಅಕ್ಷರಗಳು ಸರಿಯಾಗಿ ಮೂಡದೆ ಇರುವುದು ಮುಂತಾದವುಗಳ ಬಗ್ಗೆ ಆತ್ಮವಿಶ್ವಾಸದಿಂದ ಅವರೊಡನೆ ಮಾತನಾಡುವ ಸಾಮರ್ಥ್ಯವನ್ನು ಹೊಂದಿದ್ದ ಬಗ್ಗೆ ನನಗೆ ಬಹಳ ಸಂತಸವಾಗುತ್ತಿತ್ತು. ಜ್ಞಾನ ಖಂಡಿತವಾಗಿಯೂ ಪ್ರಬಲವಾದದ್ದು: 22 ವರ್ಷ ವಯಸ್ಸಿನ ಹಾಗೂ ಮಹಿಳೆಯಾಗಿದ್ದ ನಾನು ನನ್ನ ದುಪ್ಪಟ್ಟು ವಯಸ್ಸಿನ ಮುದ್ರಕರೊಂದಿಗೆ ಆತ್ಮವಿಶ್ವಾಸದಿಂದ ವ್ಯವಹರಿಸುತ್ತಿದ್ದೆ ಹಾಗೂ ಅದಕ್ಕೂ ಹೆಚ್ಚಾಗಿ ಅವರು ನನ್ನನ್ನು ಗಂಭೀರವಾಗಿ ಪರಿಗಣಿಸಿ ನನ್ನನ್ನು ಗೌರವಿಸುವಂತೆ ಮಾಡುತ್ತಿದ್ದೆ ಎಂಬುದನ್ನು ನಂಬುವುದು ನನಗೆ ಕೆಲವೊಮ್ಮೆ ಕಷ್ಟವಾಗುತ್ತಿತ್ತು. ಆಗ ನಾನು

ಬೆಳೆಸಿಕೊಂಡ ಸೌಹಾರ್ದತೆ ನನ್ನದೇ ಸಣ್ಣ ಪ್ರಕಾಶನ ಸಂಸ್ಥೆಯನ್ನು ನಾನು ಹೊಂದಿರುವ ಇಂದಿನ ದಿನಗಳಲ್ಲಿ ನನಗೆ ನೆರವಾಗುತ್ತಿದೆ: ಪ್ರಕಾಶನ ರಂಗದಲ್ಲಿ ನಾನು ಮತ್ತು ನನ್ನ ಸಹೋದ್ಯೋಗಿ ಹಾಗೂ ನನ್ನ ಸಂಸ್ಥೆಯ ಸಹ-ಸಂಸ್ಥಾಪಕರಾದ ರಿಟು ಕಳೆದ ಆ ಹಿಂದಿನ ದಿನಗಳಿಂದಾಗಿ ಮುದ್ರಕರನ್ನು ಮತ್ತು ಕಾಳಿ ಸಂಸ್ಥೆಯ ಮೊದಲ ದಿನಗಳಲ್ಲಿ ನಮಗೆ ಪರಿಚಿತರಾದವರನ್ನು ಭೇಟಿಯಾಗುವುದು ಸುಲಭವಾಯಿತು. ಹಾಗೂ ನಮ್ಮನ್ನು ಗಂಭೀರವಾಗಿ ಕಾಣುವಂತೆ ಅವರಿಗೆ ಮನದಟ್ಟು ಮಾಡಿಕೊಡುವುದು ನಮಗೆ ದೊಡ್ಡ ಮಾತಾಗಲಿಲ್ಲ.

ಒಟ್ಟಿನಲ್ಲಿ ಅವರು ಉತ್ತಮ ಮಾಲೀಕರು: ನೀವು ನಿಮ್ಮ ಕೆಲಸವನ್ನು ಶ್ರದ್ಧೆಯಿಂದ ಮಾಡಿದರೆ ಅವರು ಅದಕ್ಕೆ ತಕ್ಕಂತೆ ಪ್ರತಿಕ್ರಿಯಿಸುತ್ತಾರೆ. ಸಂಪಾದಕೀಯ ಕೆಲಸದಲ್ಲಿ ನಾನು ಆಸಕ್ತಿ ತೋರಿದ ಸ್ವಲ್ಪ ಸಮಯದ ನಂತರವೇ ಪರಿಷ್ಕರಿಸಲು ಕೆಲವು ಹಸ್ತಪ್ರತಿಗಳನ್ನು ನನಗೆ ಕೊಡಲಾಯಿತು; ಅದರೊಂದಿಗೆ ಪ್ರಕಾಶನ ವೃತ್ತಿಯಲ್ಲಿ ನನ್ನ ಎರಡನೆಯ ಪ್ರೇಮ ವ್ಯವಹಾರ ಪ್ರಾರಂಭವಾಯಿತು – ಸಂಪಾದಕೀಯ ಕೆಲಸವೇ ಅದು. ಒಳ್ಳೆಯ ಮಾತನ್ನು ಒಂದಿಷ್ಟೂ ತರದ ಈ ಕೆಲಸದ ಬಗ್ಗೆ ಏಕಾದರೂ ಚಿಂತಿಸಬೇಕು ಎಂದು ಕೆಲವೊಮ್ಮೆ ಆಶ್ಚರ್ಯವಾದರೂ, ಹಸ್ತಪ್ರತಿಗಳು ಮತ್ತು ಲೇಖಕರೊಂದಿಗೆ ಕೆಲಸ ಮಾಡುವುದು ಬಹುತೇಕ ಸೃಜನಾತ್ಮಕವೂ ಬೋಧಪ್ರದವೂ ಆಗಿತ್ತು. ಎಲ್ಲ ರೀತಿಯ ವಿಚಿತ್ರ ಸಮಸ್ಯೆಗಳು ಏಳುತ್ತವೆ: ಪಂಜಾಬ್ ಶಾಲಾ ಶಿಕ್ಷಣ ಮಂಡಳಿಗೆ ಪಂಜಾಬಿ ಭಾಷೆಯಲ್ಲಿ (ನಿಜವಾಗಿ ಗುರ್ಮುಖಿ) ಭೂಪಟಗಳ ಪುಸ್ತಕದ ಸಾವಿರಾರು ಪ್ರತಿಗಳನ್ನು ಮುದ್ರಿಸಲು ಅನೇಕ ತಿಂಗಳು ಹೆಣಗಾಡಿದ ನಂತರ, ಎಲ್ಲ ಪ್ರತಿಗಳು ಮುದ್ರಿತಗೊಂಡು ಸಿದ್ಧವಾದಾಗ ಮಂಡಳಿಯವರು ನಾವು ಬಳಸಿದ ಕಾಗುಣಿತವನ್ನು ಒಪ್ಪಲಿಲ್ಲ ಹಾಗೂ ಮುದ್ರಿತಗೊಂಡ ಎಲ್ಲ ಪ್ರತಿಗಳನ್ನು ತಿರಸ್ಕರಿಸಬೇಕಾಗಿ ಬಂತು. ಇದು ಅಂತಹ ಒಂದು ಸಮಸ್ಯೆ. ಈ ಸಮಯದಲ್ಲೇ ನಾನು ಮತ್ತೊಂದು ಅಮೂಲ್ಯವಾದ ವಿಷಯವನ್ನು ಕಲಿತೆ: ಒಂದು ಪುಸ್ತಕವನ್ನು ಪ್ರಕಟಿಸುವಾಗ ಏನಾದರೂ ತಪ್ಪಾಗದೆ ಇರುವ ಸಂಭವ ಬಹಳ ಕಡಿಮೆ. ಎಂದೂ ತಪ್ಪು ಮಾಡದೆಯೇ ಇರುವುದು ಯಾರಿಗೂ ಸಾಧ್ಯವಿಲ್ಲ ಹಾಗೂ ತಪ್ಪುಗಳು ಸದಾ ಆಗುತ್ತವೆ. ತಪ್ಪುಗಳಾದರೂ ಹಾಗೂ ಅವು ಒಬ್ಬ ವ್ಯಕ್ತಿಯಿಂದ ಪ್ರಾರಂಭವಾಗಿದ್ದರೂ, ಅವುಗಳಿಗೆ ಎಂದೂ ಆ ಒಬ್ಬ ವ್ಯಕ್ತಿ ಸಂಪೂರ್ಣವಾಗಿ ಜವಾಬ್ದಾರನಲ್ಲ. ಪ್ರತಿಯೊಬ್ಬರೂ ದೋಷಕ್ಕೆ ಬಾಧ್ಯರಾಗಬೇಕು. ಅದರಿಂದಾಗಿಯೇ ಪ್ರಕಾಶನ ಸಂಸ್ಥೆಯೊಂದರಲ್ಲಿ ಪ್ರತಿ ವಿಭಾಗವೂ ಇತರ ವಿಭಾಗಗಳ ಕೆಲಸದ ಬಗ್ಗೆ ತಿಳಿದುಕೊಳ್ಳಬೇಕಾದ ಅಗತ್ಯ ನನಗೆ ಬಹಳ ಮುಖ್ಯವಾಗಿ ಕಾಣುತ್ತದೆ. ನನ್ನ ಎರಡನೆಯ ಮೇಲಧಿಕಾರಿ ದಿಪೆನ್ ಮಿತ್ರ (ಮುದ್ರಣದ ಬಗ್ಗೆ ಏನೆಲ್ಲ ತಿಳಿದಿರಬೇಕೋ ಅದೆಲ್ಲವನ್ನೂ ತಿಳಿದಿದ್ದಾರೆ ಹಾಗೂ ಗುಟ್ಟಾಗಿ ಮನಸ್ಸಿನಲ್ಲಿ ಒಬ್ಬ ಸಂಪಾದಕರಾಗಿದ್ದಾರೆ) ಅವರು ನನಗೆ ಇದನ್ನು ಕಲಿಸಿದರು: ಅಸೆಟಿಸಿಸಂ ಅಂಡ್ ಎರೋಟಿಸಿಸಂ ಇನ್ ದಿ ಮೈಥಾಲಜಿ ಆಫ್ ಶಿವ ಎಂಬ ಶೀರ್ಷಿಕೆಯ ಪುಸ್ತಕದ ರಕ್ಷಾಪುಟವನ್ನು ಸಿದ್ಧಗೊಳಿಸುತ್ತಿದ್ದ ಸಮಯ ನನ್ನ ನೆನಪಿಗೆ ಬರುತ್ತದೆ. ನಾನು

ರಕ್ಷಾಪುಟದ ವಿನ್ಯಾಸವನ್ನು ಮಾಡಿದೆ: ನಾವೆಲ್ಲರೂ ಅದನ್ನು ಎಚ್ಚರಿಕೆಯಿಂದ ಪರಿಶೀಲಿಸಿದೆವು, ಪುನಃ ಪರೀಕ್ಷಿಸಿದೆವು, ಹಲವು ಬಾರಿ ತಪಾಸಣೆ ಮಾಡಿದೆವು. ಅದು ಮುದ್ರಿತಗೊಂಡು ಗೋಡೆಯ ಮೇಲೆ ಅದನ್ನು ಕಂಡಾಗಲೇ ಅಸೆಟಿಸಿಸಂ ಪದದ ಸ್ಪೆಲಿಂಗ್ ತಪ್ಪಾಗಿದೆ ಎಂಬುದು ಗಮನಕ್ಕೆ ಬಂತು ! ನನಗೆ ಭೂಮಿಯೇ ಬಿರುಕು ಬಿಟ್ಟಂತಾಗಿತ್ತು. ಆದರೆ ದಿಪೆನ್ ಮಿತ್ರ ತಪ್ಪನ್ನು ತಮ್ಮ ಮೇಲೆ ಹೊತ್ತುಕೊಂಡರು ಹಾಗೂ ಪ್ರತಿಯೊಬ್ಬರೂ ಇದನ್ನು ಗಮನಿಸಬೇಕಾಗಿತ್ತು ಎಂದು ಹೇಳಿದರು. ಹೀಗೆ ನಾನು ಇನ್ನೊಂದು ಅಮೂಲ್ಯವಾದ ಪಾಠವನ್ನು ಕಲಿತೆ. ಅಂದರೆ ತಪ್ಪು ಯಾರೇ ಮಾಡಿರಲಿ, ಅದರ ಜವಾಬ್ದಾರಿ ಪ್ರಕಾಶನ ಸಂಸ್ಥೆಯಲ್ಲಿ ಎಲ್ಲರ ಮೇಲೆ ಸಾಮೂಹಿಕವಾಗಿ ಬೀಳುತ್ತದೆ ಹಾಗೂ ಮುಂದಾಳತ್ವ ವಹಿಸಿರುವ ವ್ಯಕ್ತಿ ಸಾಮಾನ್ಯವಾಗಿ ಆ ತಪ್ಪನ್ನು ಹೊರುತ್ತಾನೆ ಎಂಬುದೇ ಆ ಪಾಠ.

ನಾನು ಹೀಗೆ ಈ ಕಥೆಗಳನ್ನು ಪುಟಗಟ್ಟಳೆ ಹೇಳುತ್ತಾ ಹೋಗಬಲ್ಲೆ. ಪ್ರಕಾಶನ ರಂಗದ ಹಾದಿಯಲ್ಲಿ ಸಾಕಷ್ಟು ದೂರ ಸಾಗಿದ್ದಾಗ, ಸ್ತ್ರೀ ಸ್ವಾತಂತ್ರ್ಯ ವಾದ ನಡುವೆ ಪ್ರವೇಶಿಸಿತು. ಅದರ ಬಗೆಗಿನ ಕುತೂಹಲ ಬಲವಾದ ನಂಬಿಕೆಯಾಗಿ ಮಾರ್ಪಟ್ಟಿತು ಹಾಗೂ ಅದರಿಂದ ರಾಜಕೀಯ ಬದ್ಧತೆ ಉಂಟಾಯಿತು.

ಅದು ರೋಚಕವಾದ ಸಮಯವಾಗಿತ್ತು; ರಸ್ತೆಗಳಲ್ಲಿ ವರದಕ್ಷಿಣೆ ವಿರುದ್ಧ ಹಾಗೂ ಸ್ತ್ರೀಯರ ಮೇಲಿನ ಅತ್ಯಾಚಾರದ ವಿರುದ್ಧ ಘೋಷಣೆಗಳ ಶಬ್ದ ಜೋರಾಗಿ ಕೇಳುತ್ತಿತ್ತು. ನಾವೆಲ್ಲರೂ ಬೀದಿ ನಾಟಕ ತಂಡವೊಂದಕ್ಕೆ ಸೇರಿದ್ದೆವು..... ನನ್ನ ಮನಸ್ಸು ಡೋಲಾಯಮಾನವಾಗತೊಡಗಿತು. ನಾನ ಪ್ರಕಾಶನ ವೃತ್ತಿಯ ಬಗ್ಗೆಯೂ ಮೋಹಗೊಂಡಿದ್ದೆ ಮತ್ತು ಅದೇ ಸಮಯಕ್ಕೆ ಸ್ತ್ರೀ ಸ್ವಾತಂತ್ರ್ಯ ವಾದದ ಬಗ್ಗೆಯೂ ಮೋಹಗೊಂಡಿದ್ದೆ. ಇವೆರಡೂ ಪರಸ್ಪರ ತಾಕಲಾಡಿದವು – ನಾನು ಯಾವುದನ್ನು ಬಿಟ್ಟಿರಬಲ್ಲೆ ? ಮತ್ತೊಮ್ಮೆ ಶಿಕ್ಷಕಿಯ ಹುದ್ದೆಯ ರೂಪದಲ್ಲಿ ಪರಿಹಾರವೊಂದು ಮುಂದೆ ನಿಂತಿತು. ಶಿಕ್ಷಕಿಯ ಕೆಲಸವನ್ನು ಅನೇಕ ವರ್ಷಗಳ ಹಿಂದೆಯೇ ನಾನು ತಿರಸ್ಕರಿಸಿದ್ದೆ. ಆದರೆ ಇದು ಬೇರೆ ರೀತಿಯ ಕೆಲಸವಾಗಿತ್ತು; ಪ್ರಕಾಶನದ ಬಗ್ಗೆ ಪಾಠ ಹೇಳುವುದು ಈ ಕೆಲಸದಲ್ಲಿ ಸೇರಿತ್ತು. ಅಂದಮೇಲೆ ನಾನು ಯಾವ ಚಟುವಟಿಕೆಗಳಲ್ಲಿ ತೊಡಗಿರಬೇಕೆಂದು ಬಯಸಿದ್ದೆನೋ ಅವುಗಳಿಗೆ ಸಮಯವೂ ನನಗೆ ದೊರೆಯುತ್ತಿತ್ತು. ಅದಕ್ಕೂ ಹೆಚ್ಚಾಗಿ ನಾನು ಒಯುಪಿ ಸಂಸ್ಥೆಗೆ ಆಗಾಗ ನನ್ನ ಇಚ್ಛಾನುಸಾರ ಕೆಲಸ ಮಾಡುವುದಕ್ಕೂ ಆ ಸಂಸ್ಥೆ ಒಪ್ಪಿಗೆ ನೀಡಿತು. ನನಗೆ ಇದಕ್ಕಿಂತ ಹೆಚ್ಚಿನ ಸಂತೋಷ ದೊರೆಯುವುದು ಸಾಧ್ಯವಿರಲಿಲ್ಲ. ನನಗೆ ಪ್ರಿಯವಾದ್ದೆಲ್ಲವೂ ನನ್ನ ಪಾಲಿಗೆ ದೊರೆಯಿತು.

ಕೆಲವು ವರ್ಷಗಳ ನಂತರ, ಶಿಕ್ಷಕಿಯ ಕೆಲಸದಿಂದಾಗಿ ಪಿಹೆಚ್‌ಡಿ ಮಾಡಿಕೊಳ್ಳಲು ನಾನು ಪ್ರಯತ್ನ ಪ್ರಾರಂಭಿಸಬೇಕಾಯಿತು. ಇದಕ್ಕಾಗಿ ಅಧ್ಯಯನ ಮಾಡಲು ನಾನು ಹವಾಯಿಗೆ ಹೊರಡುವ ಮಾರ್ಗದಲ್ಲಿ ಇಂಗ್ಲೆಂಡ್‌ನಲ್ಲಿ ಕೆಲಸಮಯ ನಿಂತಾಗ ಯಾವ ಪ್ರಕಾಶಕರ ಕೆಲಸವನ್ನು ನಾನು ಮೆಚ್ಚಿದ್ದೆನೋ (ಈಗಲೂ ಮೆಚ್ಚುತ್ತಿದ್ದೇನೋ) ಅವರು ನನಗೆ ಅಲ್ಲಿ ಕೆಲಸ ಕೊಡಲು ಮುಂದಾದರು. ಹವಾಯಿ ಮತ್ತು

ಪಿಹೆಚ್‌ಡಿಯನ್ನು ಕೂಡಲೇ ಕೈಬಿಟ್ಟು ಲಂಡನ್‌ನಲ್ಲಿ ಜೆಡ್ ಬುಕ್ಸ್ ಸಂಸ್ಥೆಯೊಂದಿಗೆ ಎರಡು ವರ್ಷ ಕೆಲಸ ಮಾಡಿದೆ. ಆ ಸಂಸ್ಥೆಯ ಪುಸ್ತಕಗಳ ಉತ್ತೇಜನ ಮತ್ತು ಪ್ರಚಾರ ವ್ಯವಸ್ಥೆಯನ್ನು ನಿರ್ವಹಿಸುವುದರ ಜೊತೆಗೆ ಇತರ ಸಂಪಾದಕರೊಡನೆ ತೃತೀಯ ಜಗತ್ತಿನ ಮಹಿಳೆಯರನ್ನು ಕುರಿತ ಸಂಸ್ಥೆಯ ಪುಸ್ತಕಗಳ ಪಟ್ಟಿಯ ಬಗ್ಗೆಯೂ ಕೆಲಸ ಮಾಡಿದೆ. ಆ ಸಮಯಕ್ಕೆ ಸ್ತ್ರೀ ಸ್ವಾತಂತ್ರ್ಯ ವಾದದ ಪರವಾಗಿ ಕೆಲಸ ಮಾಡುವುದೋ, ಪ್ರಕಾಶನ ವೃತ್ತಿಯಲ್ಲಿರುವುದೋ ಎಂಬ ಪ್ರಶ್ನೆಯನ್ನು ಬಗೆ ಹರಿಸುವ ಬಗ್ಗೆ ಯೋಚಿಸಿದ್ದೆ. ಸ್ತ್ರೀ ಸ್ವಾತಂತ್ರ್ಯ ವಾದ ಕುರಿತು ಪ್ರಕಾಶನ ಸಂಸ್ಥೆಯನ್ನು ಪ್ರಾರಂಭಿಸುವುದೇ ನಾನು ಕಂಡುಕೊಂಡ ಪರಿಹಾರವಾಗಿತ್ತು: ಸಮಯ ಸರಿಯಾಗಿತ್ತು. ಸ್ತ್ರೀ ಸ್ವಾತಂತ್ರ್ಯ ವಾದದ ಬಗ್ಗೆ ಆಸಕ್ತಿ ಇದ್ದಂತೆ ತೋರಿತು, ಅದಕ್ಕೆ ಸಂಬಂಧಿಸಿದ ಪುಸ್ತಕಗಳಿಗೆ ಮಾರುಕಟ್ಟೆ ಇತ್ತು ಹಾಗೂ ಲೇಖಕರು ಇದ್ದರು (ಈಗಲೂ ಇದ್ದಾರೆ). ಬೇರೆಲ್ಲವೂ ಸಹ ಇದ್ದವು: ಮಹಿಳೆಯರ ಕಳಕಳಿಗಳನ್ನು ಗಮನಿಸುವ ಮಾರ್ಗ ಇದಾಗಿತ್ತು, ಜ್ಞಾನ ಸಂಪಾದನೆ ಗಂಡಸರಿಗೇ ಮೀಸಲು ಎನ್ನುವಂತಹದರ ವಿರುದ್ಧ ಹೋರಾಡುವ ದಾರಿ ಇದಾಗಿತ್ತು ಇತ್ಯಾದಿ. ಜೆಡ್ ಸಂಸ್ಥೆಯಲ್ಲಿ ಎರಡು ವರ್ಷಗಳು ದುಡಿದ ನಂತರ, ಕಾಳಿ ಪ್ರಕಾಶನ ಸಂಸ್ಥೆ ದೆಹಲಿಯಲ್ಲಿ ಜನ್ಮ ತಾಳಿತು.

ನಾವು ಕಾಳಿಯನ್ನು ಪ್ರಾರಂಭಿಸಿ ಸುಮಾರು ಎಂಟು ವರ್ಷಗಳಾಗಿವೆ: ನಾವು ಬಹಳಷ್ಟು ಪ್ರಕಟಿಸಿಲ್ಲ, ಒಂದು ಸಣ್ಣ ಪ್ರಕಾಶನ ಸಂಸ್ಥೆಯ ಹೊರತಾಗಿ ನಾವು ಬೇರೇನೂ ಆಗಿಲ್ಲ; ಆದರೆ ನಮಗೊಂದು ಸ್ಥಾನವಿದೆ ಹಾಗೂ ಪ್ರಕಾಶನ ರಂಗದಲ್ಲಿ ನಮ್ಮ ಸಂಯುಕ್ತ ಅನುಭವ ನಮಗೆ ಉತ್ತಮವಾಗಿ ನೆರವಾಗಿದೆ. ಇಷ್ಟಲ್ಲದೆ, ನಾನು ಎಷ್ಟೋ ಸಲ ನನ್ನನ್ನೇ ಕೇಳಿಕೊಳ್ಳುವ ಪ್ರಶ್ನೆ ಇದು. ನನ್ನಂತೆ ಎಷ್ಟು ಜನ ತಮ್ಮ ರಾಜಕೀಯ ಮತ್ತು ವೈಯಕ್ತಿಕ ನಂಬಿಕೆಗಳನ್ನು ತಮ್ಮ ವೃತ್ತಿಪರ ಸಾಮರ್ಥ್ಯಗಳೊಂದಿಗೆ ಮೇಳೈಸುವಷ್ಟು ಅದೃಷ್ಟಶಾಲಿಗಳಾಗಿದ್ದಾರೆ ? ಇದರಿಂದಾಗಿಯೇ ನಾನು ಜೀವನಪರ್ಯಂತ ಅಥವಾ ಕನಿಷ್ಠ ಬಾಳಿನ ಸಂಜೆಯವರೆಗೂ ಈ ವೃತ್ತಿಯಲ್ಲಿರುತ್ತೇನೆ ಎಂದು ಭಾವಿಸಿದ್ದೇನೆ. ಆ ನಂತರ ಬಹುಶಃ ನಾನು ನೆಮ್ಮದಿಯಿಂದ ನಿವೃತ್ತಿ ಹೊಂದಿ ನಾನು (ಹಾಗೂ ನನ್ನ ಕೆಲವು ಸ್ನೇಹಿತರು) ಪ್ರಕಟಿಸಿರುವ ಎಲ್ಲ ಪುಸ್ತಕಗಳನ್ನು ಓದಬಲ್ಲೆ !

# ಅಲೆಮಾರಿ ಮನಸ್ಸಿನ ಪ್ರಗತಿ

ಸಾಮ್ಯುಯಲ್ ಇಸ್ರೇಲ್

ವಿಜ್ಞಾನ, ಅದರಲ್ಲೂ ಭೌತವಿಜ್ಞಾನ ನನ್ನ ಮೊದಲ ವ್ಯಾಸಂಗಿಕ/ವೃತ್ತಿಪರ ಆಸಕ್ತಿ/ ಮಹದಾಸೆಯಾಗಿತ್ತು. ದಿವಂಗತ ರೆವರೆಂಡ್ ಫಾದರ್ ಹೂಗ್ಸ್‌ವಾರ್ಥ್, ಎಸ್.ಜೆ. ಅವರು ಭೌತವಿಜ್ಞಾನ ಏನು ಮಾಡುತ್ತಿದೆ, ಏನು ಮಾಡಬಲ್ಲದು ಎಂಬ ಬಗ್ಗೆ ಕಣ್ಣಿಗೆ ಕಟ್ಟುವಂತೆ ಮಾಡುತ್ತಿದ್ದ ಉಜ್ವಲ ಪಾಠಗಳು ಮತ್ತು ಮನಸೂರೆಗೊಳ್ಳುವ ಅವರ ಪ್ರಾತ್ಯಕ್ಷಿಕೆಗಳು – ಅದರಲ್ಲೂ ಹಳೆಯ ವ್ಯಾನ್ ದ್ ಗ್ರಾಫ್ ಜನರೇಟರ್‌ನ ಕ್ರ್ಯಾಂಕ್ ಅನ್ನು ಬಲವಾಗಿ ತಿರುಗಿಸುವ ಮೂಲಕ ಶಾಲೆಯ ಪ್ರಯೋಗಾಲಯದ ಅಗಲಕ್ಕೂ ಉಂಟಾಗುತ್ತಿದ್ದ ಲಕ್ಷಾಂತರ ವೋಲ್ಟ್‌ಗಳ 'ಮಿಂಚಿನ ಪ್ರಕಾಶ' ಗಳ ಪ್ರದರ್ಶನ – ನನ್ನಲ್ಲಿ ವಿಜ್ಞಾನದ ಆಸಕ್ತಿಯನ್ನು ಬೆಳೆಸಿತು.

ವಿಜ್ಞಾನದಲ್ಲಿನ ಈ ಆಸಕ್ತಿ ನನ್ನ ವಿಶ್ವವಿದ್ಯಾಲಯದ ವರ್ಷಗಳಲ್ಲೂ ಮುಂದುವರೆದು ಅಂತಿಮವಾಗಿ ಒಂದು ಸಾಧಾರಣ ಬಿ.ಎಸ್.ಸಿ. ಪದವಿಯಲ್ಲಿ ಕೊನೆಗೊಂಡಾಗ (ಇದನ್ನು ವಿವರಿಸುವುದಕ್ಕೆ ಈ ಪದ ಸೂಕ್ತವೇನೂ ಅಲ್ಲ) ಈ ಅವಧಿಯಲ್ಲಿ ನಾನು ಜನಪ್ರಿಯವಾದ ಮತ್ತು ಅರೆಜನಪ್ರಿಯವಾದ ವಿಜ್ಞಾನದ ಎಲ್ಲ ಕ್ಷೇತ್ರಗಳ ಬಗ್ಗೆ ವ್ಯಾಪಕವಾಗಿ ಓದುತ್ತಿದ್ದೆ. ನನ್ನ ಪ್ರೌಢಶಾಲಾ ದಿನಗಳ ನಂತರ ನನ್ನ ಸಾಮಾಜಿಕ ಪ್ರಜ್ಞೆ ಹೆಚ್ಚಾಗುತ್ತಿದ್ದಂತೆ ನನ್ನ ಆಸಕ್ತಿ ವಿಜ್ಞಾನ ಮತ್ತು ತಂತ್ರಜ್ಞಾನದ ಸಾಮಾಜಿಕ ಪಾತ್ರದವರೆಗೆ ಹಾಗೂ ಅವುಗಳನ್ನು ವಿವೇಚನೆಯಿಂದ ಬಳಸಿದಾಗ ಅವು ಮಾನವ ಕಲ್ಯಾಣಕ್ಕೆ ಹೇಗೆ ನೆರವಾಗಬಹುದು ಎಂಬುದರವರೆಗೆ ಹರಡಿತು. ಹೆಚ್.ಜಿ.ವೆಲ್ಸ್, ಜೂಲಿಯನ್ ಹಕ್ಸಲಿ, ವಿ. ಗೋರ್ಡನ್ ಚೈಲ್ಡ್, ಹೈಮಾನ್ ಲೆವಿ, ಬರ್ಟ್ರಾಂಡ್ ರಸೆಲ್ ಅವರ ಪುಸ್ತಕಗಳು ಮತ್ತು ಥಿಂಕರ್ಸ್ ಲೈಬ್ರರಿಯ (ರ್‍ಯಾಶನ್‌ಲಿಸ್ಟ್ ಪ್ರೆಸ್ ಅಸೋಸಿಯೇಶನ್ ಅಂಡ್ ಸಿ.ಎ. ವಾಟ್ಸ್) ವಿವಿಧ ಪುಸ್ತಕಗಳು ಹಾಗೂ ಎರಡನೆಯ ವಿಶ್ವಯುದ್ಧದ ಮುನ್ನ ಮತ್ತು ಆ ಸಮಯದಲ್ಲಿ ಪ್ರಕಟಗೊಂಡ ಪೆಲಿಕನ್ ಪುಸ್ತಕಗಳು, ವಿವೇಚನೆಯಿಂದ ಹಾಗೂ

ಮಾನವೀಯುತೆಯಿಂದ ಬಳಸಿದಾಗ ವಿಜ್ಞಾನ ಜಗತ್ತಿಗೆ, ಅದರಲ್ಲೂ ಭಾರತಕ್ಕೆ, ಏನು ಮಾಡಬಲ್ಲದು ಎಂಬ ಬಗ್ಗೆ ನನ್ನಲ್ಲಿ ಬೆಳೆಯುತ್ತಿದ್ದ ವಿಶ್ವಾಸವನ್ನು ಇನ್ನಷ್ಟು ಬಲಪಡಿಸಿದವು.

ಎರಡನೆಯ ವಿಶ್ವಯುದ್ಧಕ್ಕೆ ಸ್ವಲ್ಪ ಮುನ್ನ ಹಾಗೂ ಯುದ್ಧದ ಪ್ರಾರಂಭದ ತಿಂಗಳುಗಳಲ್ಲಿ ವೆಲ್ಸ್ ಭ್ರಮನಿರಸನಗೊಂಡಿದ್ದರೂ, ಅವರ ಸಾವಿಗೆ ಮುನ್ನ ಅವರು ನನ್ನ ಸ್ಫೂರ್ತಿಯ ಪ್ರಮುಖ ಸೆಲೆಯಾಗಿದ್ದರು. ಅವರ ಕೃತಿ "ವರ್ಕ್, ವೆಲ್ತ್ ಅಂಡ್ ಹ್ಯಾಪಿನೆಸ್ ಆಫ್ ಮ್ಯಾನ್‌ಕೈಂಡ್" ಹಾಗೂ ನನ್ನ ದೃಷ್ಟಿಯಲ್ಲಿ ಅದರ ಜೋಡಿ ಕೃತಿಯಾದ ಹಾಗೂ ಅಷ್ಟೇ ಪ್ರಭಾವಶಾಲಿಯಾದ "ಸೈನ್ಸ್ ಆಫ್ ಲೈಫ್" ಪುಸ್ತಕ (ಜಂಟಿ ಲೇಖಕರು: ಜೂಲಿಯನ್ ಹಕ್ಸ್‌ಲಿ ಮತ್ತು ಜಿ.ಪಿ.ವೆಲ್ಸ್) ನನ್ನ ಮೇಲೆ ವಿಶೇಷ ಪ್ರಭಾವ ಬೀರಿದವು.

ಆಗ ದೇಶದಲ್ಲಿದ್ದ ವಾತಾವರಣ, ಸ್ವಾತಂತ್ರ್ಯ ಸನ್ನಿಹಿತವಾಗಿರುವುದರ ಅರಿವು, ನೆಹರು ಅವರ ಆತ್ಮಚರಿತ್ರೆ ಮತ್ತು ಅವರ ಇತರ ಬರೆವಣಿಗೆಗಳ ಪ್ರಭಾವ, ಭಾರತದ ರಾಷ್ಟ್ರೀಯ ಕಾಂಗ್ರೆಸ್‌ನ ಆಶ್ರಯದಲ್ಲಿ ಜವಹರಲಾಲ್ ನೆಹರು ಅವರು ಅಧ್ಯಕ್ಷರಾಗಿದ್ದ ಮತ್ತು ಪ್ರೊಫೆಸರ್ ಕೆ.ಟಿ.ಶಾ ಅವರು ಕಾರ್ಯದರ್ಶಿಯಾಗಿದ್ದ ಪಕ್ಷೇತರ ರಾಷ್ಟ್ರೀಯ ಯೋಜನಾ ಸಮಿತಿಯ ಸ್ಥಾಪನೆ, ಕಲ್ಕತ್ತೆಯ "ಸೈನ್ಸ್ ಅಂಡ್ ಕಲ್ಚರ್" ಎಂಬ ನಿಯತಕಾಲಿಕದಲ್ಲಿನ ಲೇಖನಗಳು, (ದಾಮೋದರ್ ನದಿ ಕಣಿವೆಯ ವಿಸ್ತಾರವಾದ ಅಚ್ಚುಕಟ್ಟು ಪ್ರದೇಶದ ಸರ್ವತೋಮುಖ ಅಭಿವೃದ್ಧಿಗೆ ಅಧ್ಯಕ್ಷ ರೂಸ್‌ವೆಲ್ಟ್ ಅವರ ಟೆನ್ನೆಸ್ಸಿ ವ್ಯಾಲಿ ಅಥಾರಿಟಿಯ ರೀತಿಯಲ್ಲಿ ದಾಮೋದರ್ ಕಣಿವೆ ಪ್ರಾಧಿಕಾರವನ್ನು ಸ್ಥಾಪಿಸಬೇಕೆಂದು ಅದರಲ್ಲಿ ಬಂದ ಲೇಖನಮಾಲೆ ಪ್ರತಿಪಾದಿಸಿದ್ದು ನನ್ನ ನೆನಪಿಗೆ ಬರುತ್ತದೆ.) ಮಾನವ ಕ್ಷೇಮದ ಗುರಿಗಳಿಗೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬುದ್ಧಿಪೂರ್ವಕವಾಗಿ ಅನ್ವಯಿಸಿದ್ದರ ಫಲ ಎಂದು ವ್ಯಾಪಕವಾಗಿ ನಂಬಲಾಗಿದ್ದ, ಸೋವಿಯತ್ ಯೂನಿಯನ್‌ನಲ್ಲಿ 1917ರ ಕ್ರಾಂತಿಯ ನಂತರ ಉಂಟಾದ ಅದ್ಭುತ ಪ್ರಗತಿ – ಇವೆಲ್ಲವೂ ನನ್ನ ನಂಬಿಕೆಗಳನ್ನು ಬಲಪಡಿಸಿದವು ಹಾಗೂ ವೈಜ್ಞಾನಿಕ ಅರಿವಿನ ಪ್ರಚಾರ ಅದರಲ್ಲೂ ಅದರ ಸಾಮಾಜಿಕ ಅಂಶಗಳ ಪ್ರಚಾರ ಭಾರತದಲ್ಲಿ ನಮಗೆ ಅತ್ಯಂತ ಪ್ರಮುಖವಾದದ್ದು ಎಂಬುದನ್ನು ನನಗೆ ಮನದಟ್ಟು ಮಾಡಿದವು.

ವಿಜ್ಞಾನದ ಸಾಮಾಜಿಕ ಪಾತ್ರದಲ್ಲಿ ನನ್ನ ಆಸಕ್ತಿ ಹಾಗೂ ಹಿಟ್ಲರ್‌ನ ನಾಯಕತ್ವದಲ್ಲಿ ವಿವೇಚನೆಗೆ ವಿರುದ್ಧವಾದ ನಾಜಿವಾದ ಮತ್ತು ಜನಾಂಗವಾದ ವಿಜೃಂಭಣೆಯಿಂದ ಮುನ್ನಡೆಯುತ್ತಿದ್ದ ಬಗ್ಗೆ ಉಂಟಾದ ಗಾಬರಿಯಿಂದ ವಿದ್ಯಾರ್ಥಿ ರಾಜಕೀಯದಲ್ಲಿ ನಾನು ಭಾಗವಹಿಸುವಂತೆ ಆಯಿತು ಹಾಗೂ ಮಾರ್ಕ್ಸ್‌ವಾದದತ್ತ ಒಲಿಯುವಂತಾಯಿತು. ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳ ಪರಿಹಾರಕ್ಕೆ ವೈಜ್ಞಾನಿಕ ವಿಧಾನವನ್ನು ಅನ್ವಯಿಸುವುದೇ ಮಾರ್ಕ್ಸ್‌ವಾದವೆಂದು ನಾನು ತಿಳಿದಿದ್ದೆ. ಇವೆಲ್ಲ ಚಟುವಟಿಕೆಗಳಿಂದಾಗಿ ನನ್ನ ವ್ಯಾಸಂಗಿಕ ಪ್ರಗತಿ ಅಧೋಗತಿಗಿಳಿಯಿತು ಹಾಗೂ ಈ ಅಧೋಗತಿಗೆ ನನ್ನ ಚಟುವಟಿಕೆಗಳು ಹಾಗೂ ಶಿಸ್ತಿನ ಅಭ್ಯಾಸದ

ಕೊರತೆಯೋ ಸಂಪೂರ್ಣವಾಗಿ ಕಾರಣವಾಗಿರಲಿಲ್ಲ. ವಿಜ್ಞಾನಕ್ಕೆ ಅಗತ್ಯವಾದಂತಹ ಮೂಲಭೂತ ಸಾಮರ್ಥ್ಯದ ಅಥವಾ ಅಂತಹ ರೀತಿಯ ಸಾಮರ್ಥ್ಯದ (ನನ್ನನ್ನು ನಾನೇ ಸಂಪೂರ್ಣವಾಗಿ ಅವಹೇಳನ ಮಾಡಿಕೊಳ್ಳಬಾರದಾಗಿದ್ದರೆ) ಕೊರತೆ ಅದಕ್ಕೆ ಕಾರಣವಾಗಿತ್ತು.

ಎಂ.ಎಸ್.ಸಿ. ಸಂಶೋಧನಾ ಪ್ರಯೋಗಾಲಯದಲ್ಲಿ ಎರಡು ವರ್ಷಗಳನ್ನು ಕಳೆಯುತ್ತಿದ್ದಂತೆ ಹೊಸ ವಿಚಾರಗಳನ್ನು ಮುಂದಿಡುವವನಾಗುತ್ತೇನೆ ಎಂದು ನಾನೆಂದೂ ಆಶಿಸಲಾರೆ, ಹೊಸ ಸಂಶೋಧನೆಗಳನ್ನು ಮಾಡುವ ಆಸೆಯನ್ನು ನಾನೆಂದೂ ಹೊಂದಲಾರೆ ಎಂಬ ಬಗ್ಗೆ ನನಗೆ ಮನದಟ್ಟಾಗಿತ್ತು. ನಾನು ಮಾಡಬಹುದಾದ ಅತ್ಯುತ್ತಮ ಕೆಲಸವೆಂದರೆ ಹೊಸ ವಿಚಾರಗಳನ್ನು ಮುಂದಿಟ್ಟ ಮತ್ತು ಸಂಶೋಧನೆಗಳನ್ನು ಮೊದಲು ಕೈಗೊಂಡ ವ್ಯಕ್ತಿಗಳು ಬರೆದಿದ್ದನ್ನು ಹಾಗೂ ಆ ವ್ಯಕ್ತಿಗಳ ಬಗ್ಗೆ ಬರೆದಿದ್ದನ್ನು ಓದುವ ಮೂಲಕ ಸಾಮಾನ್ಯವಾಗಿ ಜಗತ್ತನ್ನು ಹಾಗೂ ವಿಶೇಷವಾಗಿ ಭಾರತವನ್ನು ತಿಳಿದುಕೊಳ್ಳುವುದೇ ಆಗಿದೆ ಹಾಗೂ ಈ ವಿಚಾರಗಳು ಮತ್ತು ಸಂಶೋಧನೆಗಳನ್ನು ಅನೇಕ ರೀತಿಯ ಶ್ರೋತೃಗಳಿಗೆ ಮತ್ತು ಓದುಗರಿಗೆ ಅದರಲ್ಲೂ ಓದುಗರಿಗೆ – ಏಕೆಂದರೆ ನಾನು ಎಂದೂ ಉತ್ತಮ ಮಾತುಗಾರನಾಗಿರಲಿಲ್ಲ – ಸೂಕ್ತವಾದ ರೂಪದಲ್ಲಿ ಪ್ರಚುರಪಡಿಸುವುದು ಅಥವಾ ಪ್ರಚುರಪಡಿಸಲು ನೆರವಾಗುವುದೇ ಆಗಿದೆ ಎಂದೂ ನನಗೆ ಮನದಟ್ಟಾಯಿತು.

ಈ ಒಂದು ಪಾತ್ರ ವಹಿಸುವ ಮೊದಲ ಅವಕಾಶ ನನಗೆ ಅಖಿಲ ಭಾರತ ವಿದ್ಯಾರ್ಥಿಗಳ ಮಹಾಸಂಘದ "ದಿ ಸ್ಟೂಡೆಂಟ್" (16ಪುಟಗಳ, ಡೆಮಿ – ಕ್ವಾರ್ಟೋ ಅಳತೆಯ ಹೊಳೆಯುವ ಮುದ್ರಣ ಕಾಗದದ) ಪಾಕ್ಷಿಕ ಪತ್ರಿಕೆಯನ್ನು ಸಂಪಾದಿಸಿ, ಪ್ರಕಟಿಸುವ ಪೂರ್ಣಾವಧಿಯ ತಂಡದ ಒಬ್ಬ ಸದಸ್ಯನಾಗುವ ಮೂಲಕ ದೊರೆಯಿತು. ಈ ನಿಯತಕಾಲಿಕದ ಸಂಪಾದಕೀಯ ಮತ್ತು ಮುದ್ರಣ ಕಾರ್ಯಗಳನ್ನು ನೋಡಿಕೊಳ್ಳುವುದರ ಜೊತೆಗೆ ನಾನು ನಿಯಮಿತವಾಗಿ ಜನಪ್ರಿಯ ವಿಜ್ಞಾನದ ಲೇಖನಗಳನ್ನು ಬರೆಯುತ್ತಿದ್ದೆ. ನಾನು ಒಬ್ಬ ಸಂಪಾದಕನಾದೆ ಹಾಗೂ ಸಂವಾಹಕನೂ ಆದೆ.

ಒಂದೆರಡು ವರ್ಷಗಳಿಗಿಂತಲೂ ಹೆಚ್ಚಿನ ಕಾಲ 'ಗೌರವ ವಿದ್ಯಾರ್ಥಿ' ಯಾಗಿ ಉಳಿಯುವುದು ಯಾರಿಗೇ ಆಗಲಿ ಸುಲಭವಲ್ಲ. ಆದ್ದರಿಂದ ನಾನು ರೈಲ್ವೆ ನೌಕರರ ಕಾರ್ಮಿಕ ಸಂಘದಲ್ಲಿ ಆಫೀಸು ಕೆಲಸಕ್ಕೆ ಸೇರಿದೆ. ಅಲ್ಲಿ ನನಗೆ ಕೆಲವು ಅದ್ಭುತ ವ್ಯಕ್ತಿಗಳ ಪರಿಚಯವಾಯಿತು, ಅವರನ್ನು ನಾನು ಮೆಚ್ಚಿದ್ದೆ ಸಹ. ಜೈಲಿನಲ್ಲಿ ಬಂಧಿತ ವ್ಯಕ್ತಿಯಾಗಿ ಎರಡು ಸಣ್ಣ ವಿಶ್ರಾಂತಿಯ ಅವಧಿಗಳನ್ನು ಕಳೆದ ಅನುಭವದಿಂದಲೂ ನನಗೆ ಪ್ರಯೋಜನವಾಯಿತು. ನನ್ನ ಸ್ಥಾನ ತುಂಬಾ ಅಮುಖ್ಯವಾಗಿದ್ದ ಕಾರಣ ನಾನು ಯಾವುದರ ಮೇಲೂ ಏನೂ ಪ್ರಭಾವ ಬೀರಲು ಅಶಕ್ತನಾಗಿದ್ದಾಗ, ನನ್ನದು ಯಾವ ತಪ್ಪೂ ಇಲ್ಲದೆ ಕಾರ್ಮಿಕ ಸಂಘ ಕುಸಿದು ಬಿತ್ತು; ಮುದ್ರಿತ ಸಾಮಗ್ರಿಯ ತಯಾರಿಕೆ ಮತ್ತು ಮಾರಾಟದೊಂದಿಗೆ ನಾನು ಹೊಂದಿದ್ದ ಸಂಬಂಧಕ್ಕೆ ಉಂಟಾಗಿದ್ದ ಏಕಮಾತ್ರ ತಡೆ ಹೀಗೆ ಕೊನೆಗೊಂಡಿತು.

ಪುಸ್ತಕ ಮಾರಾಟದಲ್ಲಿ ಹಾಗೂ ಸಣ್ಣ ಪ್ರಮಾಣದಲ್ಲಿ ಪ್ರಕಾಶನ ವ್ಯವಹಾರದಲ್ಲೂ ತೊಡಗಿದ್ದ ಗೆಳೆಯರೊಂದಿಗೆ ಒಂದು ವರ್ಷ ಕಳೆದ ನಂತರ, ಆಗ ಮುಂಬಯಿಯಲ್ಲಿದ್ದ ಸಿಪಿಐ ಪಕ್ಷದ ಮಾಲೀಕತ್ವದ ಪ್ರಕಾಶನ ಘಟಕವಾದ ಪೀಪಲ್ಸ್ ಪಬ್ಲಿಷಿಂಗ್ ಹೌಸ್‌ಗೆ (ಪಿಪಿಹೆಚ್) ಸೇರಿದೆ.

ಪಿಪಿಹೆಚ್ ಸಂಸ್ಥೆಯೊಂದಿಗೆ ನಾನು ಮೊದಲು ಪುಸ್ತಕ ಪ್ರಕಾಶನದಲ್ಲಿ ನಿಯಮಿತವಾಗಿ ಹಾಗೂ ಹೆಚ್ಚು ಕಡಿಮೆ ವ್ಯವಸ್ಥಿತವಾಗಿ ಪಠ್ಯ ಸಂಪಾದಕ/ಕರಡಚ್ಚು ತಿದ್ದುವವ/ಮುದ್ರಣಕ್ಕೆ ಸಂಬಂಧಿಸಿದ ಉದ್ಯೋಗಿಯಾಗಿ ಕೆಲಸ ಮಾಡಿದೆ. ಕೃತಿ ಸಂಗ್ರಹಣೆ ಮತ್ತು ಪ್ರಕಟಣೆ ಕುರಿತ ಎಲ್ಲ ನಿರ್ಧಾರಗಳನ್ನು ಪಕ್ಷದ ಕೇಂದ್ರೀಯ ನಾಯಕತ್ವ ಕೈಗೊಳ್ಳುತ್ತಿತ್ತು. ವಿಚಾರಗಳ ಪ್ರಖರತೆ ಹಾಗೂ ಬರೆವಣಿಗೆಗೆ ಸಂಬಂಧಿಸಿದಂತೆ ಲೇಖಕರ ಬಗ್ಗೆ ಮೆಚ್ಚುಗೆ ಸೂಚಿಸಬಹುದಾದರೂ, ಒಬ್ಬ ಸೂಕ್ಷ್ಮಗ್ರಾಹಿ ಮತ್ತು ದಕ್ಷ ಸಂಪಾದಕನ ನೆರವಿನಿಂದ ಅವರ ಬರೆವಣಿಗೆಗೆ ಪ್ರಯೋಜನ ದೊರೆಯದಿರುವ ಪ್ರಕರಣಗಳು ಬಹಳ ವಿರಳ. ಪ್ರಕಟಗೊಳ್ಳುತ್ತಿದ್ದ ಸಾಮಗ್ರಿಯ ತೀವ್ರ ರಾಜಕೀಯ ಸ್ವರೂಪವನ್ನು ಮತ್ತು ಪಕ್ಷದ 'ನಿಲುವಿಗೆ' ಕಟ್ಟುನಿಟ್ಟಾಗಿ ಅಂಟಿಕೊಂಡಿರಬೇಕಾದ ಬಗ್ಗೆ ಇದ್ದ ಪಕ್ಷದ ಕಳಕಳಿಯನ್ನು ಪರಿಗಣಿಸಿದಾಗ, ತಿದ್ದಿ ಪರಿಷ್ಕರಿಸುವಾಗ ಲೇಖಕರ ಸಾಮಾನ್ಯ ಅರ್ಥ ಉಳಿದಿರುವಂತೆಯೇ ಅಲ್ಲದೆ ಅದರ ಸಣ್ಣ ಪುಟ್ಟ ಸೂಕ್ಷ್ಮ ವ್ಯತ್ಯಾಸಗಳೂ ಉಳಿಯುವಂತೆ ನೋಡಿಕೊಳ್ಳುವ ರೀತಿಯಲ್ಲಿ ವಿಶೇಷ ತರಬೇತಿಯೂ ದೊರೆಯುತ್ತಿತ್ತು.

ನನ್ನ ಸಂಪಾದಕೀಯ ಸ್ಥಾನವನ್ನು ಲಿಖಿತ ಸಂವಹನದ ಬಗ್ಗೆ ಲೇಖಕ ಸಮಾಲೋಚಿಸಬೇಕಾದ ವ್ಯಕ್ತಿಯ ಸ್ಥಾನ ಎಂದು ನಾನು ಕ್ರಮೇಣ ಪರಿಗಣಿಸಲಾರಂಭಿಸಿದೆ. ನನ್ನ ಸಾಮರ್ಥ್ಯಗಳು, ಒಲವುಗಳು ಮತ್ತು ಇತಿಮಿತಿಗಳಿಗೂ ಸಹ ಸೂಕ್ತವಾದ ಕೆಲಸ ನನಗೆ ದೊರೆತಿದೆ ಎಂದು ನಾನು ಭಾವಿಸಿದೆ. ಅದಕ್ಕೂ ಹೆಚ್ಚಿನ ಸುದೈವದ ಸಂಗತಿಯೆಂದರೆ, ನನಗೆ ಕೆಲಸ ಆಸಕ್ತಿಯಿಂದ ಕೂಡಿತ್ತು ಹಾಗೂ ಅದು ಉಪಯುಕ್ತ ಎಂದು ನಾನು ನಂಬಿದೆ – ನನ್ನ ವೃತ್ತಿಯಲ್ಲಿ ತೃಪ್ತಿ ಸಂಪೂರ್ಣವಾಗಿತ್ತು; ನನ್ನ ಸಂಬಳದಲ್ಲಿ ಅದು ಇರಲಿಲ್ಲ. ಆದರೆ ಮಾಡುವ ಕೆಲಸದಲ್ಲಿ ನಂಬಿಕೆ ಇದ್ದಾಗ ಬೇರೆಲ್ಲವನ್ನೂ ಸಹಿಸಬಹುದು ಅಥವಾ ಮರೆಯಬಹುದು.

ಪಿಪಿಹೆಚ್‌ನಲ್ಲಿ ನನಗಿದ್ದ ವೈಯಕ್ತಿಕ ಅರ್ಹತೆಗಳೆಂದರೆ ನಿಯತಕಾಲಿಕಗಳನ್ನು ತಿದ್ದಿ ಪರಿಷ್ಕರಿಸುವುದು, ವಿನ್ಯಾಸ ಸಿದ್ಧಪಡಿಸುವುದು ಮತ್ತು ಪಠ್ಯವನ್ನು ಸಿದ್ಧಗೊಳಿಸುವುದರಲ್ಲಿ ಒಂದೆರಡು ವರ್ಷಗಳ ಅನುಭವ; ಕೈಯಲ್ಲಿ ಮತ್ತು ಯಂತ್ರದ ಮೂಲಕ (ಲಿನೊಟೈಪ್) ಅಚ್ಚಿನ ಅಕ್ಷರಗಳನ್ನು ಜೋಡಿಸುವುದು, ಲೈನ್ ಮತ್ತು ಹಾಫ್‌ಟೋನ್ ಬ್ಲಾಕ್‌ಗಳು, ಲೆಟರ್‌ಪ್ರೆಸ್ ಮುದ್ರಣ ಮತ್ತು ಕೈಯಲ್ಲಿ ರಟ್ಟು ಹಾಕುವ ಕೆಲಸದ ಪರಿಚಯ. ನಾನು ಪುಸ್ತಕದ ಮಾರಾಟದಂಗಡಿಯಲ್ಲಿದ್ದಾಗ ಎರಡು ಸಾಧಾರಣ ಗಾತ್ರದ ಪುಸ್ತಕಗಳನ್ನು ಸಂಪಾದಿಸಿ, ಪ್ರಕಟಿಸಿದ್ದೆ. ನನ್ನ

ಸಹೋದ್ಯೋಗಿಗಳು ('ಕಾಮ್ರೇಡ್‌ಗಳು') ತಮ್ಮ ಜ್ಞಾನವನ್ನು ಹಂಚಿಕೊಳ್ಳಲು, ನೆರವಾಗಲು ಸದಾ ಸಿದ್ಧವಾಗಿದ್ದರು.

ನಾನು ಪಿಪಿಹೆಚ್‌ನಲ್ಲಿದ್ದಾಗ ಪುಸ್ತಕ ಪ್ರಕಾಶನ ಕುರಿತ ನನ್ನ ಮೊದಲ ಪುಸ್ತಕವನ್ನು ಓದಿದೆ. ಸಿಯಾನ್ ಜೆನೆಟ್ ಬರೆದ 'ದಿ ಮೇಕಿಂಗ್ ಆಫ್ ಬುಕ್ಸ್' ನ ಮೊದಲ ಮುದ್ರಣದ ಪುಸ್ತಕ ಉತ್ಕೃಷ್ಟವಾಗಿತ್ತು ಹಾಗೂ ಕಾರ್ಯಶೀಲವಾಗಿತ್ತು – ಪುಸ್ತಕ ಮುದ್ರಣ ಕುರಿತ ಅತ್ಯುತ್ತಮ ಪುಸ್ತಕಗಳಿಗೆ ಒಂದು ಅಸಾಧಾರಣ ಉದಾಹರಣೆ ಹಾಗೂ ಅದೇ ಒಂದು ಸ್ಫೂರ್ತಿಯ ಸೆಲೆಯಾಗಿತ್ತು. ಅಲ್ಲಿಂದೀಚೆಗೆ ನಾನು ಪ್ರಕಾಶನ ಕುರಿತ ಅನೇಕ ಅಂಶಗಳ ಬಗ್ಗೆ ಒಂದಾದ ಮೇಲೊಂದು ಉತ್ತಮ ಕೃತಿಗಳಿಂದ ಕಲಿಯುತ್ತಾ ಬಂದಿದ್ದೇನೆ. ನಂತರ ಕೆಲವು ವರ್ಷಗಳ ಕಾಲ ವೃತ್ತಿಪರ ನಿಯತಕಾಲಿಕಗಳು ನನಗೆ ಲಭ್ಯವಾಗುತ್ತಿದ್ದು, ಅವುಗಳಿಂದಲೂ ನಾನು ಬಹಳಷ್ಟು ಕಲಿತೆ.

1955ರ ಹೊತ್ತಿಗೆ ಪಿಪಿಹೆಚ್ ದೆಹಲಿಗೆ ಸ್ಥಳಾಂತರಗೊಂಡಾಗ, ನನ್ನ ರಾಜಕೀಯ ಅಭಿಪ್ರಾಯಗಳು ಬದಲಾಗಿದ್ದವು ಹಾಗೂ ನಾನು ರಾಜಕೀಯ ಕಾರ್ಯಕರ್ತನಾಗಿ ಉಳಿಯಲಿಲ್ಲ; ನಾನು ಸೌಹಾರ್ದತೆಯ ವಾತಾವರಣದಲ್ಲಿ ಸಂಸ್ಥೆಯಿಂದ ಹೊರಬಂದೆ. ಆಗ ನಾನು ಪುಸ್ತಕಗಳ ಪ್ರಕಾಶನ ರಂಗದವನಾದೆ ಹಾಗೂ ಬೇರೆ ಯಾವ ಕ್ಷೇತ್ರದಲ್ಲಿ ಕೆಲಸ ಮಾಡಿದ್ದರೂ ನಾನು ಸುಖಿಯಾಗಿರುತ್ತಿರಲಿಲ್ಲ.

ಮುಂದಿನ 14 ಚಿಲ್ಲರೆ ವರ್ಷಗಳಲ್ಲಿ ಬಹಳಷ್ಟು ಶೋಕಪಡಲಾಗಿರುವ (ನನ್ನಿಂದ) ಏಷ್ಯಾ ಪಬ್ಲಿಷಿಂಗ್ ಹೌಸ್‌ನಲ್ಲಿ ಸಂಪಾದಕೀಯ ಮೌಲ್ಯಮಾಪನಗಳು ಮತ್ತು ಆಯ್ಕೆ ಮಾಡುವ ಹಾಗೂ ಕ್ರಮೇಣ ಸಮಗ್ರ ಪ್ರಕಾಶನ ನಿರ್ವಹಣೆಯ ಅನುಭವ ನನಗೆ ದೊರೆಯಿತು. ಈ ಕ್ಷೇತ್ರಗಳಲ್ಲಿ – ಇಲ್ಲಿ ತಪ್ಪುಗಳನ್ನು ಮಾಡುವುದು ಅತ್ಯಂತ ಸುಲಭ (ನನ್ನದು ಇದರಲ್ಲಿ ಒಳ್ಳೆಯ ಪಾಲಿತ್ತು) – ದುಬಾರಿ ಅನುಭವದ ಹೊರತಾಗಿ ಹಾಗೂ ನನಗೆ ಲಭ್ಯವಿದ್ದ ಪುಸ್ತಕಗಳಿಂದ ಕಲಿಯುವುದರ ಹೊರತಾಗಿ ನನಗೆ ಬೇರೆ ಯಾರೂ ಹೇಳಿಕೊಡುವವರಿರಲಿಲ್ಲ. ಸರ್ ಸ್ಟಾನ್ಲಿ ಅನ್‌ವಿನ್ ಅವರ "ದಿ ಟ್ರೂಥ್ ಎಬೌಟ್ ಪಬ್ಲಿಷಿಂಗ್" ನಂತಹ ಶ್ರೇಷ್ಠ ಕೃತಿಯಿಂದ ಪ್ರಾರಂಭಿಸಿ ಪ್ರಕಾಶನದ ಇನ್ನೊಂದು ಮುಖದ ಪರಿಚಯ ಮಾಡಿಕೊಡುವ ಪುಸ್ತಕಗಳು ಕೈಗೆ ಸಾವಕಾಶವಾಗಿ ಬಂದವು ಹಾಗೂ ಅವು ನಮ್ಮ ಪರಿಸ್ಥಿತಿಗಳಿಗೆ ಸಂಪೂರ್ಣವಾಗಿ ಸಂಗತವಾಗಿದ್ದು ವಿರಳವೇ. ನಂತರದ ವರ್ಷಗಳಲ್ಲಿ ಕಾಣಿಸಿಕೊಂಡ ಖ್ಯಾತ ಬ್ರಿಟಿಷ್ ಮತ್ತು ಅಮೆರಿಕನ್ ಪ್ರಕಾಶಕರ ನೆನಪುಗಳನ್ನಾಧರಿಸಿದ ಪುಸ್ತಕಗಳು ಸ್ವಾರಸ್ಯವಾಗಿದ್ದರೂ ಸದಾ ಬಹಳ ಉಪಯುಕ್ತವಾಗಿರಲಿಲ್ಲ. ಏಷ್ಯನ್ ಪಬ್ಲಿಷಿಂಗ್ ಹೌಸ್‌ನ ನಿರ್ವಹಣೆಯಲ್ಲಿ ಇತರ ಅನೇಕ ಲೋಪದೋಷಗಳಿದ್ದವು; ಇದರಲ್ಲಿ ಪ್ರಕಾಶನ ನಿರ್ವಹಣೆ ಮತ್ತು ಹಣಕಾಸಿನ ನಿರ್ವಹಣೆಯ ನಡುವೆ ಏನೇನೂ ಅಂತರಕ್ರಿಯೆ ಇಲ್ಲದೆ ಇದ್ದುದೇ ಮುಖ್ಯವಾಗಿತ್ತು. ಇದರಿಂದ ನನ್ನ ಜ್ಞಾನದಲ್ಲಿ ಪ್ರಮುಖ ಕೊರತೆ ಉಂಟಾಗಿತ್ತು ಹಾಗೂ ನಾನು ಸಂಸ್ಥೆಯನ್ನು ಬಿಟ್ಟು ಹೋದ ನಂತರ ಈ ಕೊರತೆಯನ್ನು ನೀಗಿಸಲು ಸಾಕಷ್ಟು ಶ್ರಮಿಸಬೇಕಾಯಿತು. ಆದರೆ ಈ

ಲೇಖನ ಹೇಗೆ ಮತ್ತು ಏಕೆ ನಾನು ಸಂಪಾದಕನಾದೆ ಎಂಬುವನ್ನು ಕುರಿತದ್ದಾಗಿರುವುದರಿಂದ ಹಾಗೂ ನಾನು ಎಷ್ಟು ಉತ್ತಮ ಅಥವಾ ಎಷ್ಟು ಪಾಂಡಿತ್ಯವುಳ್ಳ ಸಂಪಾದಕ ಎಂದು ಲೆಕ್ಕ ಹಾಕುವ ಲೇಖನವಲ್ಲವಾದ್ದರಿಂದ ಈ ಬಗ್ಗೆ ನಾನು ಇನ್ನೇನೂ ಹೇಳುವುದಿಲ್ಲ.

ಹಲವು ಪರಿಸ್ಥಿತಿಗಳ ಸಂಯೋಜನೆಯಿಂದ ಪುಸ್ತಕ ಪ್ರಕಾಶನ ರಂಗದಲ್ಲಿ ಸಂಪಾದಕೀಯ ಕೆಲಸಕ್ಕೆ ನಾನು ಬರುವಂತಾಯಿತಾದರೂ, ಮುದ್ರಿತ ಪದಗಳ ಮೂಲಕ ಮಾಹಿತಿ, ಅಭಿಪ್ರಾಯ ಮತ್ತು ವಿಚಾರಗಳನ್ನು ಹರಡಬೇಕಾದ ಪ್ರಾಮುಖ್ಯತೆಯಲ್ಲಿ ನನಗಿದ್ದ ನಂಬಿಕೆಯೂ ಸಹ ನಾನು ಈ ರಂಗಕ್ಕೆ ಬರಲು ಸ್ವಲ್ಪಮಟ್ಟಿಗೆ ಕಾರಣವಾಗಿತ್ತು ಎಂದು ನಾನು ಭಾವಿಸಿದ್ದೇನೆ.

ನಾನು ಹಿನ್ನೋಟದ ದೃಷ್ಟಿಯಿಂದ ಮಾತನಾಡುತ್ತಿದ್ದೇನಾದರೂ, ಸಂಪಾದಕೀಯ ಕೆಲಸಕ್ಕೆ ನಾನು ಹೇಗೆ ಯೋಗ್ಯನಾದೆ ಎಂದರೆ ಅಥವಾ ಕನಿಷ್ಠ ಆ ಕೆಲಸ ನನಗೆ ಹೇಗೆ ಇಷ್ಟವಾಯಿತು ಎಂದರೆ ನನ್ನ ಪ್ರಾರಂಭಿಕ ವರ್ಷಗಳಲ್ಲಿ ಸಾಮಾನ್ಯವಾಗಿ ಅವ್ಯವಸ್ಥಿತವಾದ ರೀತಿಯಲ್ಲಿ ಅನೇಕ ವಿಷಯಗಳ ಬಗ್ಗೆ ನಾನು ಅಲ್ಲಲ್ಲಿ ಓದಿದ್ದೇ ಕಾರಣ ಎಂದು ಭಾವಿಸುತ್ತೇನೆ.

ಆದರೆ, ಸಂಪಾದಕೀಯ ಕೆಲಸದಲ್ಲಿ ಯಶಸ್ವಿಯಾಗಲು ಮತ್ತು ಸಾಮಾನ್ಯ ಪ್ರಕಾಶನ ವೃತ್ತಿಯಲ್ಲಿ ಅದರ ಬಗ್ಗೆ ಸಂತಸದಿಂದಿರಲು ಸಾಧಾರಣವಾದ ವ್ಯಾಸಂಗಿಕ ಸಾಧನೆಯೇ ಒಂದು ಅರ್ಹತೆ ಎಂದು ನಾನು ಹೇಳುತ್ತಿದ್ದೇನೆ ಎಂಬ ಅಭಿಪ್ರಾಯವನ್ನು ನಾನ ಉಂಟು ಮಾಡಬಾರದು. ಖಂಡಿತವಾಗಿಯೂ ಅದು ಅರ್ಹತೆಯಲ್ಲ. ವ್ಯಾಪಕವಾದ ಆಸಕ್ತಿ ಮತ್ತು ವ್ಯಾಪಕವಾದ ಓದು ಅಗತ್ಯ ಎಂದಷ್ಟೇ ನಾನು ಹೇಳುತ್ತಿದ್ದೇನೆ. ಒಂದು ಸೀಮಿತ ವಿಷಯದ ಬಗ್ಗೆ ತಜ್ಞನಾದವನಿಗೆ ಒಂದು ಸ್ಥಾನವಿದೆ, ಅದು ಬಹಳ ಮುಖ್ಯವಾದ ಸ್ಥಾನವೂ ಆಗಿದೆ, ಆದರೆ ಅದು ಸಾಮಾನ್ಯ ಪ್ರಕಾಶನ ರಂಗದಲ್ಲಿಲ್ಲ.

Laser Typeset at M/s Laser Line Graphics, Bangalore
and Printed at M/S Central Electric Press, New Delhi